

# ಕರಡಿಕೆಂಗಣ್ಣ

ಒಂದಾನೊಂದು ಕಾಲದಲ್ಲಿ ಬ್ರಹ್ಮಪುತ್ರಾ ನದೀ ತೀರವು ಮಹಾರಣ್ಯಗಳಿಂದ ಮುಚ್ಚಿಕೊಂಡಿದ್ದಿತು. ಆ ಅರಣ್ಯಕ್ಕೆ ಸೇರಿದ ಬಿಡಿಗಾಡುಗಳಲ್ಲಿ ಅಲ್ಲಲ್ಲಿ ಕೆಲವು ಗ್ರಾಮಗಳಿದ್ದುವು.

ಅಂತಹ ಒಂದು ಗ್ರಾಮದಲ್ಲಿ ಕಾಳೀವರ್ಮನೆಂಬ ಕ್ಷತ್ರಿಯ ಯುವಕನೊಬ್ಬನಿದ್ದನು. ಅವನು ಎಲ್ಲದರಲ್ಲಿಯೂ ಸಾಧಾರಣ ಗ್ರಾಮನಿವಾಸಿಗಳಿಗಿಂತ ಬೇರ್ಪಟ್ಟೇ ಕಾಣುತ್ತಿದ್ದನು.

ಅವನ ತಂದೆ ಮಹಾಯೋಧನಾಗಿದ್ದು, ಚಂದ್ರಶಿಲಾ ನಗರದ ರಾಜನ ದರ್ಬಾರಿನಲ್ಲಿ ಸೈನಿಕ ಮುಖಂಡನಾಗಿದ್ದವನು. ಕಾಳೀವರ್ಮ ಹತ್ತು ವಯಸ್ಸಿನ ಹುಡುಗನಾಗಿದ್ದಾಗಲೇ ಅವನ ತಂದೆ ಯುದ್ಧದಲ್ಲಿ ವೀರಮರಣ ಹೊಂದಿದ್ದನು, ಗಂಡನನ್ನು ಕಳೆದುಕೊಂಡ ದುಃಖದಲ್ಲಿ ಅವನ ತಾಯಿಯೂ ಬೇಗದಲ್ಲೇ ತೀರಿಹೋಗಿ ಕಾಳೀವರ್ಮನು ಅನಾಥನಾದನು. ಕಡೆಗೆ ಬಲಭದ್ರನೆಂಬ ವಿಶ್ವಾಸಪಾತ್ರನಾದ ನೌಕರನೊಬ್ಬ ಕಾಳೀವರ್ಮನನ್ನು ಆದರಿಸಿ, ಬೆಳೆಸಿ ಕ್ಷತ್ರಿಯರಿಗೆ ಅಗತ್ಯವಾದ ಎಲ್ಲಾ ವಿದ್ಯೆಗಳನ್ನೂ ಕಲಿಸಿದನು. ವೀರರಕ್ತದ ಕಾಳೀವರ್ಮನು ಅಂತಹ ವಿದ್ಯೆಗಳನ್ನು ಉತ್ಸಾಹದಿಂದ ಕಲಿತು ಒಳ್ಳೆಯ ನಿಪುಣತೆಯನ್ನೂ ಪಡೆದನು.

ಕಾಳೀವರ್ಮನಿಗೆ ಇಪ್ಪತ್ತು ವಯಸ್ಸು ತುಂಬಿದ ಕೂಡಲೇ ಬಲಭದ್ರನು ಅವನೊಂದಿಗೆ, "ಕಾಳೀ, ನಿನ್ನಂಥವನಿಗೆ ಇನ್ನು ಈ ಕುಗ್ರಾಮವು ಯೋಗ್ಯವಲ್ಲ. ರಾಜಧಾನೀ ನಗರಕ್ಕೆ ಹೋಗಿ ಅಲ್ಲಿ ಮಹಾರಾಜರ ಮುಂದೆ ನಿನ್ನ ಯೋಗ್ಯತೆಯನ್ನು ಪ್ರದರ್ಶಿಸಿ, ಏನಾದರೂ ಉದ್ಯೋಗ ಸಂಪಾದಿಸಿ, ಮುಂದಕ್ಕೆ ಬರಬೇಕಾದವನು." ಎಂದನು.

ಕಾಳೀವರ್ಮನಿಗೆ ಇತ್ತೀಚೆಗೆ ಅಂತಹ ಆಲೋಚನೆಯೇ ಪ್ರಾರಂಭವಾಗಿತ್ತು. ಅದು ತಂದೆಯಂತಹ ಬಲಭದ್ರನ ಬಾಯಿಯಿಂದಲೇ ಬರಬೇಕೆಂದು ಕಾದಿದ್ದನು. ಆದರೆ ಆ ಪ್ರಾಂತವನ್ನು ಪಾಲಿಸುವ ಜಿತಕೇತು ರಾಜನೊಂದಿಗೆ ಪ್ರಾರ್ಥಿಸಲು ಅವನಿಗೆ ಇಷ್ಟವಿರಲಿಲ್ಲ. ಆ ರಾಜನ ಮೇಲೆ ಅವನಿಗೆ ಸ್ವಲ್ಪವೂ



ಗೌರವವಿರಲಿಲ್ಲ. ರಾಜನು ಕುಗ್ರಾಮಗಳಿಂದ ಕೂಡ ಬಲವಂತಮಾಡಿಯಾದರೂ ತೆರಿಗೆ ವಸೂಲು ಮಾಡಿಸಿಕೊಳ್ಳುವುದರಲ್ಲಿ ಸಮರ್ಥನೇನೋ ನಿಜ. ಆದರೆ ಗ್ರಾಮವಾಸಿಗಳ ಕ್ಷೇಮಚಿಂತನೆ ಅವನಿಗೆ ಸ್ವಲ್ಪವೂ ಇಲ್ಲ. ವನ್ಯಮೃಗಗಳ ಕಾಟದಿಂದಲೂ, ದಾರಿದೋಚುವ ದರೋಡೆಗಾರರಿಂದಲೂ ಬಡಪ್ರಜೆಗಳನ್ನು ಕಾಪಾಡಲು ಅವನೇನೂ ಮಾಡಿಲ್ಲ.

ಕಾಳೀವರ್ಮನು ಆ ರಾಜನ ಮೇಲೆ ತನಗಿರುವ ಅತೃಪ್ತಿಯನ್ನು ಬಲಭದ್ರನೊಂದಿಗೆ ಹೇಳಿ, "ನಮ್ಮ ಚಂದ್ರಶಿಲಾ ನಗರದ ಜಿತಕೇತು ರಾಜನು ತುಂಬ ಅಸಮರ್ಥನು. ಅಷ್ಟೇ ಅಲ್ಲ, ಹೇಡಿ ಎಂತಲೂ ಕಾಣುತ್ತದೆ. ಆದರ ಮೇಲೆ ಗುಣವೂ ಒಳ್ಳೆಯದಲ್ಲ. ಅಂಥವನ ಸೇವೆ ಮಾಡಿ ಹೊಟ್ಟೆ ತುಂಬಿಸಿಕೊಳ್ಳುವುದೆಂದರೆ ನನಗೆ ತುಂಬ ಅವಮಾನವೆನಿಸುತ್ತದೆ. ಅದಕ್ಕಿಂತ ಬೇರೇನಾದರೂ ಮಾಡಬೇಕೆಂದಿದ್ದೇನೆ" ಎಂದನು. ವೃದ್ಧನಾದ ಬಲಭದ್ರನು ಸ್ವಲ್ಪಹೊತ್ತು ಆಲೋಚನೆ ಮಾಡಿ, "ಇದಕ್ಕೆಲ್ಲಾ ರಾಜನೇ ಬಾಧ್ಯನೆಂದು ಹೇಳಲಿಕ್ಕಾಗುವುದಿಲ್ಲ. ರಾಜ್ಯ ಪರಿಪಾಲನೆಯು ದಕ್ಷತೆಯು ಬಹಳ ಪಾಲು, ಆತನ ಆಸ್ಥಾನದಲ್ಲಿರುವ ಉದ್ಯೋಗಸ್ಥರ ಮೇಲೆಯೇ ಹೆಚ್ಚಾಗಿ ಆಧಾರಪಡುತ್ತದೆ. ಜಿತಕೇತು ರಾಜನ ತಂದೆ ತುಂಬ ಪರಾಕ್ರಮಶಾಲಿ. ನಿನ್ನ ತಂದೆಯಂತಹ ಮಹಾಪ್ರತಾಪಿಗಳೂ, ಬುದ್ಧಿವಂತರೂ ಆತನ ದರಬಾರಿನಲ್ಲಿದ್ದರು. ಆ ರಾಜನು ತೀರಿಹೋದ ಮೇಲೆ ಜಿತಕೇತು ಸಿಂಹಾಸನವನ್ನೇರಿದನು. ಈಗ ಅವನ ಸುತ್ತಲೂ ಕೇವಲ ಕುಕ್ಷಿಂಭರರೂ, ಹೊಗಳುಬಂಟರೂ, ಹರಟೆಹೊಡಕರೂ ಸೇರಿಕೊಂಡಿರಬೇಕೆಂದು ನನಗೆ ತೋರುತ್ತದೆ" ಎಂದನು.

"ಇರಬಹುದನ್ನಿ. ಅಂತಹ ರಾಜನನ್ನು ನಾನೊಬ್ಬನು ಉದ್ಧಾರಮಾಡಲು ಸಾಧ್ಯವೇ? ಹಾಗೆ ಹೋಗುವುದಕ್ಕಿಂತ, ಈ ಗ್ರಾಮದಲ್ಲೇ ನೆಲವನ್ನು ಉತ್ತು ಹೊಲತೋಟ ಮಾಡಿ ಜೀವಿಸಬಹುದಲ್ಲ?" ಎಂದ ಕಾಳೀವರ್ಮ.

"ಇಂಥಾ ಕೆಲಸವನ್ನು ನಿನ್ನಂಥ ವೀರರು ಮಾಡತಕ್ಕುದಲ್ಲ. ಅದರ ಮೇಲೆ ನಿನ್ನ ತಂದೆ ಸಾಯುವ ಮೊದಲು, ತನ್ನ ಕೊನೆಯ ಕೋರಿಕೆಯಾಗಿ ಏನು ಹೇಳಿದ್ದಾರೆ ಗೊತ್ತೊ?" ಎಂದು ಬಲಭದ್ರನು ಮನೆಯೊಳಗೆ ಹೋಗಿ, ಕಾಳೀವರ್ಮನನ್ನು ಕರೆದುಕೊಂಡು, ಎಂದಿಗೂ ತೆರೆಯದ ಒಂದು ಕೋಣೆಯ ಬೀಗವನ್ನು ತೆರೆದನು. ಕಾಳೀವರ್ಮನ ಕೈಹಿಡಿದು ಅದರೊಳಗೆ ಕರೆದೊಯ್ದನು.

ಆ ಕೋಣೆಯಲ್ಲಿ ಕಾಳೀವರ್ಮನ ತಂದೆ ಉಪಯೋಗಿಸಿದ ಬಗೆಬಗೆಯ ಆಯುಧಗಳೂ, ಕವಚವೂ ಇದ್ದುವು. ಬಂಗಾರದ ಹಿಡಿಯ ಖಡ್ಗವೊಂದು ಕಾಳೀವರ್ಮನ ಕಣ್ಣನ್ನು ಸೆಳೆಯಿತು. ಅಷ್ಟರಲ್ಲಿ ಬಲಭದ್ರನು ಆ ಕತ್ತಿಯನ್ನು ಕಾಳೀವರ್ಮನ ಸೊಂಟಕ್ಕೆ ತಗಲಿಸಿ, ಕವಚವನ್ನು ತೊಡಿಸಿ, "ಆಹ! ನಿನ್ನ

ತಂದೆಗೆ ಹೊಂದಿಕೆಯಾದಂತೆಯೇ ಇವು ನಿನಗೂ ಸರಿಯಾಗಿವೆ. ನೀನು ಕ್ಷತ್ರಿಯ ಯೋಧನಾಗಿ ತನಗೆ ತಕ್ಕ ಮಗನೆಂದು ಹೆಸರು ಪಡೆಯಬೇಕೆಂಬುದು ನಿನ್ನ ತಂದೆಯ ಇಚ್ಛೆ. ಅದಕ್ಕೆ ತಕ್ಕಂತೆ ನಿನ್ನನ್ನು ತಯಾರಿಸಲು ನನಗೆ ಆಜ್ಞೆಮಾಡಿದ್ದಾರೆ. ನೀನೂ ಮಹಾ ವೀರನೆನ್ನಲು ಸಂದೇಹವೇನಿಲ್ಲ. ಇನ್ನು ನಿನ್ನ ಇಷ್ಟ!" ಎಂದು ಹೇಳಿದನು.

ತಂದೆ ತನಗಾಗಿ ಬಿಟ್ಟುಹೋಗಿರುವ ಕವಚವನ್ನೂ ಕತ್ತಿಯನ್ನೂ ಧರಿಸಿದ ಕೂಡಲೇ ಕಾಳೀವರ್ಮನ ಶರೀರವು ಆನಂದಪುಳಕಿತವಾಯಿತು. ಹೃದಯ ಉಕ್ಕಿತು. ಅವನು ಒರೆಯಿಂದ ಕತ್ತಿಯನ್ನು ಎಳೆದು ಅದರ ಹರಿತವನ್ನು ಪರೀಕ್ಷಿಸಿ, ಅದರ ಥಳಥಳಿಕೆಗೆ ಆಶ್ಚರ್ಯಪಡುತ್ತ "ಭದ್ರಯ್ಯಾ, ತಂದೆಯ ಆಜ್ಞೆಯನ್ನು ಶಿರಸಾವಹಿಸುತ್ತೇನೆ. ನನ್ನ ಭವಿಷ್ಯತ್ತನ್ನು ತಿದ್ದಿತೀಡಿ ಮುಂದುವರಿಯುವಂತೆ ಮಾಡಬೇಕಾದುದು ಬಡ್ಡುನೇಗಿಲಲ್ಲವೆಂಬುದು ನಿಜ. ಹದನಾದ ಕತ್ತಿಯೇ!" ಎಂದನು.

ಅವನ ಉತ್ಸಾಹದ ಮಾತು ಕೇಳಿ ಬಲಭದ್ರನಿಗೆ ಸಂತೋಷವಾಯಿತು. ಮರುದಿನವೇ ಕಾಳೀವರ್ಮನು ಚಂದ್ರಶಿಲಾನಗರಕ್ಕೆ ಪ್ರಯಾಣ ಮಾಡಲು ಬೇಕಾದ ಎಲ್ಲಾ ಸಿದ್ಧತೆಗಳನ್ನೂ ಮಾಡಿದನು.

ಕಾಳೀವರ್ಮನು ಕವಚ ಧರಿಸಿ, ಕತ್ತಿಯನ್ನು ನಡುವಿಗೆ ನೇತಾಡಿಸಿಕೊಂಡು ಸಿದ್ಧನಾದನು. ದಾರೀ ಖರ್ಚಿಗಾಗಿ ಬಲಭದ್ರನು ಕೊಟ್ಟ ನೂರು ಬಂಗಾರದ ನಾಣ್ಯವನ್ನು ತೆಗೆದುಕೊಂಡು ಕುದುರೆಯನ್ನೇರಿ ಹೊರಟನು. ರಾಜನ ಆಸ್ಥಾನದಲ್ಲಿ ಸೇರಿದ ಮೇಲೆ ಆರು ತಿಂಗಳಲ್ಲಿ ಹಿಂದಿರುಗಿ ಬಂದು ನೋಡುವೆನೆಂದು ಬಲಭದ್ರನಿಗೆ ಮಾತು ಕೊಟ್ಟನು.

ಅರಣ್ಯದ ಕಾಲುದಾರಿಯನ್ನು ಹಿಡಿದು ಕಾಳೀವರ್ಮನ ಪ್ರಯಾಣ ಸಾಗಿತ್ತು. ನಡುಮಧ್ಯಾಹ್ನದವರೆಗೆ ಸುಗಮವಾಗಿ ಸಾಗಿದನು. ಇನ್ನು ಎಲ್ಲಾ



ದರೂ ನೀರಿರುವಲ್ಲಿ ಕುಳಿತು, ಬುತ್ತಿಗಂಟು ಬಿಚ್ಚಿಕೊಳ್ಳಬೇಕೆಂದು ಅತ್ತಿತ್ತ ನೋಡುತ್ತ ದಾರಿಬಿಟ್ಟು ಸ್ವಲ್ಪದೂರ ಕುದುರೆಯನ್ನು ತಿರುಗಿಸಿಕೊಂಡು ಹೋದನು. ಆಗ ಒಂದು ಮರದ ಮೇಲಿನಿಂದ ಯಾವನೋ ನರಳುವ ಸದ್ದು ಕೇಳಿಸಿತು.

ಕಾಳೀವರ್ಮ ಆಶ್ಚರ್ಯಪಡುತ್ತ ಕುದುರೆಯನ್ನು ನಿಲ್ಲಿಸಿ ಮರದ ಮೇಲಕ್ಕೆ ದೃಷ್ಟಿ ಹಾಯಿಸಿದನು. ಆಗ ಮರದ ಕೊಂಬೆಗಳೆಡೆಯಿಂದ ಮಾನವಾಕಾರವೊಂದು "ಒಯ್ಯಮ್ಮೋ!" ಎಂದು ಕೂಗುತ್ತ ಪರಪರನೆ ಜಾರಿ ಪಟ್ಟುತಪ್ಪಿ ನೆಲದ ಮೇಲೆ ಬಿತ್ತು.

ಕಾಳೀವರ್ಮ ತಟ್ಟನೆ ಕುದುರೆಯಿಂದಿಳಿದು ಆ ಮನುಷ್ಯನ ಬಳಿಗೆ ಹೋದನು. ಅವನೊಬ್ಬ ನಡುವಯಸ್ಸು ಮೀರಿದ ಮನುಷ್ಯ. ಬಿದ್ದುದರಿಂದ ದೊಡ್ಡ ಪೆಟ್ಟು ಗಾಯಗಳಾದಂತೆ ಕಾಣಲಿಲ್ಲ. ಅವನು ಎದ್ದು ನಿಲ್ಲಲು ಪ್ರಯತ್ನಪಡುತ್ತ, ಏಳಲಾಗದೆ ಸೊಂಟ ಹಿಡಿದುಕೊಂಡು "ಅಮ್ಮ!



ಅಬ್ಬ!" ಎಂದು ಮುಲುಗುತ್ತ ಕುಸಿಕುಳಿತನು. ಕಾಳೀವರ್ಮ ಅವನ ಬಳಿಯಲ್ಲಿ ಬಾಗಿ "ಏನು ತಾತಾ, ಈ ವಯಸ್ಸಿನಲ್ಲಿ ನೀವು ಈ ಕಾಡಿನೊಳಗೆ ಬರುವುದೆಂದರೇನು? ಮರದ ಮೇಲೆ ಹತ್ತುವುದೆಂದರೇನು? ಮರದ ಕೊಂಬೆಯಲ್ಲಿ ಜೇನು ಹುಟ್ಟು ನೋಡಿದಿರೇನು? ಸಣ್ಣ ಮಕ್ಕಳ ಹಾಗೆ ಬಾಯಿಯಲ್ಲಿ ಜೊಲ್ಲಿಳಿಯಿತೇನು?" ಎಂದು ಕೇಳಿದನು.

ಮುದುಕ ಕಾಳೀವರ್ಮನ ಮುಖವನ್ನು ಸ್ವಲ್ಪ ಹೊತ್ತು ರೆಪ್ಪೆ ಬಡಿಯದೆ ನೋಡಿ, "ಅಪ್ಪಾ! ನಿನ್ನನ್ನು ನೋಡಿದರೆ ರಾಜಭಟನ ಹಾಗೆ ಕಾಣುವೆ. ಸಾಧಾರಣವಾಗಿ ತೆರಿಗೆ ವಸೂಲು ಮಾಡುವ ಕಾಲದಲ್ಲಿ ಹೊರತು ಬೇರೆ ಕಾಲದಲ್ಲಿ ನಿಮ್ಮಂಥವರು ಈಕಡೆ ಹಾಯಲಾರರಷ್ಟೆ?" ಎಂದನು.

"ನಾನು ರಾಜಭಟನೇನಲ್ಲ ತಾತಾ. ಅಂಥದೇನಾದರೂ ಒಂದು ಉದ್ಯೋಗ ಸಂಪಾದಿಸಲಿಕ್ಕಾಗಿಯೇ ಹೊರಟಿದ್ದೇನೆ, ಅಷ್ಟೇ. ನಾನು ಕೇಳಿದ್ದಕ್ಕೆ ಉತ್ತರವೇ ಕೊಡಲಿಲ್ಲ ನೀವು. ಜೇನು ಹುಟ್ಟು ಇದೆಯೋ ಅಂತ ಕೇಳಿದೆನಲ್ಲಾ? ಇದ್ದರೆ ನಾನು ಹತ್ತಿ ತೆಗೆದು ಕೊಡುತ್ತೇನೆ. ನಿಮ್ಮ ಕೈಕಾಲು ಮುರಿಯದೇ ಹೋದದ್ದು ಅದೃಷ್ಟ!" ಎಂದ ಕಾಳೀವರ್ಮ.

ಮುದುಕ ಏನೂ ಹೇಳದೆ ಎದ್ದು ನಿಂತ. ಆಮೇಲೆ ನಾಲ್ಕಾರು ಅಡಿಗಳನ್ನಿಟ್ಟು ಹಿಂದೆ ಮುಂದೆ ನಡೆದ. ತೃಪ್ತಿಯಾಗಿ ತಲೆಯಾಡಿಸುತ್ತ, "ಜೇನು ಹುಟ್ಟು ಅಂಥಾದ್ದೇನಿಲ್ಲ ಬಿಡಪ್ಪ. ಹೌದಪ್ಪ, ನೀನು ಹೇಳಿದ ಹಾಗೆ ನಾನು ಅದೃಷ್ಟವಂತನೇ. ಹಾಗಿಲ್ಲದಿದ್ದರೆ ಈಸಾರಿ ದರೋಡೆಕೋರರು ನಮ್ಮ ಊರ ಮೇಲೆ ಬಿದ್ದಾಗ, ನಾನು ಮನೆಯಲ್ಲಿದ್ದಿದ್ದರೆ ಬದುಕಿ ಉಳಿಯುತ್ತಿರಲಿಲ್ಲಪ್ಪ" ಎಂದನು.

ಮುದುಕ ಹೇಳಿದ ಈ ಮಾತನ್ನು ಕೇಳಿ ಕಾಳೀವರ್ಮನಿಗೆ ನಡೆದ ಸಂಗತಿ ಏನೆಂಬುದು ಸ್ವಲ್ಪ ಮಟ್ಟಿಗೆ ಅರ್ಥವಾಯಿತು. ಈ ಮುದುಕನು ಊರಿಗೆ ಬಿದ್ದ ಕಳ್ಳರ ಗುಂಪನ್ನು ನೋಡಿ ಹೆದರಿ ತಪ್ಪಿಸಿಕೊಂಡು ಕಾಡಿನೊಳಗೆ ಬಂದು ಮರದ ಮೇಲೆ ಹತ್ತಿ ಅಡಗಿದ್ದಾನೆ.

"ಮರದ ಮೇಲಿನಿಂದ ಹಾಗೆ ಬೀಳಲಿಕ್ಕೇನಾಯಿತು? ಏನಾದರೂ ಹಾವು ಹಲ್ಲಿ?" ಎಂದು ಕಾಳೀವರ್ಮ ಹೇಳುತ್ತಲೇ, "ಹೌದಪ್ಪ. ಸಣ್ಣಸಣ್ಣ ಎಂಥದೋ ಹಾವುಗಳನ್ನು ನೋಡಿ ಹೆದರಿ ಅವಸರದಿಂದ ಇಳಿಯುವಾಗ ಪಟ್ಟು ತಪ್ಪಿತು" ಎಂದ ಮುದುಕ.

"ತಾತಾ, ಈ ಪ್ರಾಂತದಲ್ಲಿ ದರೋಡೆಕೋರರ ಕಾಟ ತುಂಬಾ ಹೆಚ್ಚೆಂದು ನಾನೂ ಕೇಳಿದೆ. ಆದರೆ ಅವರು ಹೀಗೆ ಹಾಡ ಹಗಲಲ್ಲೇ ಊರ ಮೇಲೆ ಬಿದ್ದು ದೋಚುತ್ತಾರೆಂದು ತಿಳಿದಿರಲಿಲ್ಲ. ನಿಮ್ಮ ಜನರೆಲ್ಲಾ ಏನಾದರು? ಗಟ್ಟಿಮುಟ್ಟಾದ ಗಂಡುಸರೇ ಇರಲಿಲ್ಲವೆ?" ಎಂದು ಕೇಳಿದ ಕಾಳೀವರ್ಮ. "ದರೋಡೆಕೋರರು ಬರುವುದನ್ನು ನೋಡಿದ

ಕೂಡಲೇ ತಲಾ ಒಂದೊಂದು ದಿಕ್ಕಿಗೆ ಓಡಿ ಹೋದರು. ಕಳ್ಳರು ಸಿಕ್ಕಿದ್ದನ್ನೆಲ್ಲ ಕೊಳ್ಳೆಹೊಡೆದು ಕೊಂಡು ಹೋದ ಮೇಲೆ ಓಡಿದವರೆಲ್ಲ ಅವರವರ ಮನೆಗೆ ತಿರುಗಿ ಬರುತ್ತಾರೆ. ಇದು ನಮಗೆ ಮಾಮೂಲು ಪದ್ಧತಿಯ ಹಾಗಾಗಿದೆ'' ಎಂದ ಮುದುಕ.

''ಈ ದರೋಡೆ ಸಮಾಚಾರವನ್ನು ಮಹಾರಾಜ ನಿಗೆ ಹೇಳಲೇ ಇಲ್ಲವೇನು ? ಹೇಳುತ್ತಿದ್ದರೆ ರಾಜನು ಭಟರನ್ನು ಕಳುಹಿಸಿ ಅವರನ್ನೆಲ್ಲ ಬೇಟೆಯಾಡಿಸಿ ಬಿಡುತ್ತಿದ್ದನಲ್ಲ ?'' ಎಂದ ಕಾಳೀವರ್ಮ. ರಾಜನು ಎಂಥವನೆಂದು ಕಾಳೀವರ್ಮನಿಗೆ ಗೊತ್ತಿದ್ದರೂ, ಮುದುಕನು ಏನು ಉತ್ತರ ಕೊಡುವನೋ ನೋಡೋಣವೆಂದುಕೊಂಡು ಹೀಗೆ ಕೇಳಿದ್ದನು.

ತಾತ ಜೋಲುಮೋರೆ ಮಾಡಿ ಸಪ್ಪಗಿನ ದನಿ ಯಿಂದ, ''ಅವರಿಗೆ ಸುದ್ದಿ ಹೇಳುವುದೇನಿದೆ ? ನಮ್ಮ ಪೈರು ಕೊಯಿಲಿಗೆ ಬಂದ ಕೂಡಲೇ ರಾಜನಭಟರು ತಾವಾಗಿ ಬಂದು ಅರ್ಧ ಬೆಳೆ ಎತ್ತಿಕೊಂಡು ಹೋಗು ತ್ತಾರೆ. ಉಳಿದರ್ಧವನ್ನು ಸುತ್ತುಮುತ್ತಲಿರುವ ಗುಡ್ಡಗಳಲ್ಲಿ ಅಡಗಿರುವ ದರೋಡೆಕೋರರು ಬಂದು ಕೊಳ್ಳೇ ಹೊಡೆದುಕೊಂಡು ಹೋಗುತ್ತಾರೆ. ಇದೆಲ್ಲಾ ರಾಜನಿಗೆ ಗೊತ್ತೇ ಇರುವಾಗ ನಾವು ದೂರು ಹೇಳೋದರಲ್ಲಿ ಯಾವ ಅರ್ಥವೂ ಇಲ್ಲ'' ಎಂದನು.

ಆ ಸಮಯಕ್ಕೆ ಮರಗಳ ಮರೆಯಿಂದ ನಾಲ್ಕು ಮಂದಿ ದರೋಡೆಕೋರರು ಮುಂದಕ್ಕೆ ಬಂದು, ''ಭೇಷ್ ! ಭೇಷ್ ! ಈ ಮುದುಕ ಚೆನ್ನಾಗಿಯೇ ಹೇಳಿದ. ಇನ್ನು ಮುಂದೆ ಬೆಳೆದ ಪೈರಿನಲ್ಲಿ ರಾಜನ ಭಾಗವನ್ನು ಕೂಡಾ ನಾವೇ ಎತ್ತಿಕೊಂಡು ಹೋಗು ತ್ತೇವೆ'' ಎಂದು ಹೇಳಿ ಕತ್ತಿಗಳನ್ನು ನೆಗಹಿ ಕಾಳೀ ವರ್ಮನನ್ನು ನೋಡಿ, ''ಓಹ್ ! ಜೋರಾಗಿರುವೆ ಯಲ್ಲಾ ! ಕವಚ, ಕತ್ತಿ, ಕುದುರೆ ! ನಿನ್ನನ್ನು ನೋಡಿ ದರೆ ಸ್ವಲ್ಪ ಹಣದ ಗಂಟು ಕೂಡಾ ಇಟ್ಟುಕೊಂಡಿ ರುವವನ ಹಾಗಿದೆ. ಕುದುರೆಯ ಮೇಲಿರುವುದು ಹಣದ ಗಂಟು ತಾನೆ ? ಎಲ್ಲಿ, ಆ ಹಣದ ಗಂಟನ್ನು ತಂದು ನಮ್ಮ ಮುಂದೆ ನೆಲದ ಮೇಲಿಟ್ಟು ನಾಲ್ಕು





ಹೆಜ್ಜೆ ಹಿಂದಕ್ಕೆ ನಡಿ ನೋಡುವಾ" ಎಂದರು. ಕಾಳೀವರ್ಮ ಕಳ್ಳರ ಕಡೆಗೆ ಒಂದು ತೀವ್ರ ನೋಟವನ್ನು ಬೀರಿ, ಕುದುರೆಯ ಬಳಿಗೆ ಹೋಗಿ ಅದರ ಬೆನ್ನಿನ ಮೇಲೆ ನೇತಾಡುತ್ತಿದ್ದ ರೊಟ್ಟಿಯ ಗಂಟನ್ನು ತಂದು ನೆಲದ ಮೇಲಿಟ್ಟು, ಎರಡು ಅಡಿ ಹಿಂದಕ್ಕೆ ನಡೆದನು.

ಕಳ್ಳರಲ್ಲೊಬ್ಬ ಆಶೆಯಿಂದ ಮುಂದಕ್ಕೆ ಬಗ್ಗಿ ಮೂಟೆಯನ್ನು ಎತ್ತಿಕೊಳ್ಳುವಾಗ, ಕಾಳೀವರ್ಮ ಮಿಂಚಿನ ವೇಗದಲ್ಲಿ ಕತ್ತಿ ಹಿರಿದು ಅವನ ತಲೆಯನ್ನು ಹಾರಿಸಿಬಿಟ್ಟನು. ಉಳಿದ ಮೂವರು ಕಳ್ಳರು ಸಿದ್ಧರಾಗುವುದರೊಳಗೆ ಅದೇ ವೇಗದಲ್ಲಿ ಕಾಳೀವರ್ಮನ ಕತ್ತಿ ಇಬ್ಬರ ಗುಂಡಿಗೆಯೊಳಗೆ ಹೊಕ್ಕು ಹೊಕ್ಕು ಹೊರ ಬಂದಿತ್ತು.

ಅಷ್ಟಾದ ಮೇಲೆ ನಾಲ್ಕನೇ ಕಳ್ಳ ಕೈಕಾಲು ಗೆಟ್ಟು ಪ್ರಾಣಭೀತಿಯಿಂದ ಕೂಗುತ್ತಾ ಓಡಲು ನೋಡಿದ. ಕಾಳೀವರ್ಮನು ಹಾರಿ ಹೋಗಿ ಅವನ ಜುಟ್ಟು ಹಿಡಿದೆಳೆದು ಸೊಂಟದ ಮೇಲೊಂದು ಒದೆ ಕೊಟ್ಟನು. ಅವನು ಧಡೀರನೆ ಬಿದ್ದು ಕೈಕಾಲು ಹೊಡೆದುಕೊಳ್ಳುತ್ತಾ ಕೂಗುವುದನ್ನು ನೋಡಿ, ಮುದುಕನು ಗಡಗಡ ನಡುಗುತ್ತ, "ಅಪ್ಪಪ್ಪಾ! ಇದೇನು ಸಾಹಸವೋ? ನಮ್ಮ ಊರಿನಲ್ಲಿ ನಿನಗಿಂತಲೂ ಹೆಚ್ಚು ಬಲಶಾಲಿಗಳಾದವರು ಕೂಡಾ ಹೀಗೆ ಮಾಡುವುದಿಲ್ಲಪ್ಪ. ಈವರೆಗೆ ಯಾವನೂ ಒಬ್ಬ ಕಳ್ಳನನ್ನು ಸಹಾ ಹೀಗೆ ಹೊಡೆದದ್ದಿಲ್ಲ! ಭಯ!" ಎಂದ.

"ಹಾಗೆ ಭಯಪಟ್ಟದ್ದರಿಂದಲೇ ಇವರೂ ಹೀಗೆ ಏರಿ ಹೋದರು. ಈಗ ನಾನು ಮಾಡಿದ ಕೆಲಸವನ್ನು ನಿಮ್ಮೂರಿನವರೆಲ್ಲಾ ಮಾಡುವ ಹಾಗೆ ಮಾಡಿಸಿಯೇ ನಾನು ರಾಜಧಾನಿಗೆ ಹೋಗೋದು. ಈಗ ನನಗೆ ಹಸಿವೆಯ ನೆನಪೂ ಹೋಯಿತು. ಈ ರೊಟ್ಟಿಯ ಗಂಟನ್ನು ತೆಗೆದುಕೊಂಡು ಮುಂದಿನಿಂದ ನಿಮ್ಮೂರಿಗೆ ನಡೆಯಿರಿ. ಈ ಕಳ್ಳನನ್ನೂ ಕುದುರೆಯನ್ನೂ ಸಾಗಿಸಿಕೊಂಡು ನಾನು ಹಿಂದಿನಿಂದ ಬರುತ್ತೇನೆ, ನಡೆಯಿರಿ" ಎಂದ ಕಾಳೀವರ್ಮ.

ಮುದುಕನೂ ಕಾಳೀವರ್ಮನೂ ಅಲ್ಲಿಂದ ಹೊರಡುತ್ತಿರುವಾಗ, ಕೆಲಮಂದಿ ಗ್ರಾಮಸ್ಥರು ಓಡೋಡುತ್ತಾ ಅಲ್ಲಿಗೆ ಬಂದು "ಏನಾಯಿತು ಅಜ್ಜಾ? ಸಾಯುವ ಹಾಗೆ ಕೂಗಿದವರು ಯಾರು?" ಎಂದು ಕೇಳಿದರು.

ಕಾಳೀವರ್ಮನು ಅವರನ್ನೆಲ್ಲ ನೋಡಿ ಅಸಹ್ಯದಿಂದ "ಓಹ್! ಮಹಾವೀರರ ಹಾಗೆ ಕೇಳಲಿಕ್ಕೆ ಬಂದಿರೇನು? ನಿಮಗೆಲ್ಲಾ ಕಣ್ಣು ಸರಿಯಾಗಿದೆಯಲ್ಲಾ? ಏನು ನಡೆಯಿತೆಂದು ಕಾಣುವುದಿಲ್ಲವೇನು? ಊರೊಳಗೆ ಕಳ್ಳರು ಬಿದ್ದರೆ, ಎಲ್ಲರೂ ಒಟ್ಟಾಗಿ ಸೇರಿ ಅವರನ್ನು ಓಡಿಸುವುದನ್ನು ಬಿಟ್ಟು, ಹೇಡಿಗಳ ಹಾಗೆ ಕಾಡಿಗೆ ಓಡಿಹೋಗುವ ನೀವು ಎಂಥ ಮನುಷ್ಯರೋ!" ಎಂದನು.

ಅವನ ಮಾತು ಕೇಳಿ ಎಲ್ಲರೂ ನಾಚಿಗೆಯಿಂದ ಮುಖಮುಖ ನೋಡಿ ತಲೆ ತಗ್ಗಿಸಿಕೊಂಡರು. ಮುದುಕನು ನಡೆದ ಸಂಗತಿಯನ್ನು ಅವರಿಗೆ ಹೇಳಿ, "ಈ ವೀರನು ಹೇಳಿದ್ದು ಸುಳ್ಳಲ್ಲ. ನಮ್ಮ ಗ್ರಾಮ ದಲ್ಲಿ ಮಾತ್ರವಲ್ಲ, ಸುತ್ತುಮುತ್ತಲಿನ ಗ್ರಾಮಗಳಲ್ಲಿ ರುವ, ನನ್ನಂತಹ ಮುದುಕರನ್ನು ಬಿಟ್ಟು, ಉಳಿ ದವರೆಲ್ಲ ಇವನು ಹೇಳಿದ ಹಾಗೆ ಕೇಳಬೇಕು. ಇವ ನನ್ನೇ ನಿಮ್ಮೆಲ್ಲರ ಮುಖಂಡನನ್ನಾಗಿ ಮಾಡಿಕೊಂಡು, ಗುಡ್ಡಗಾಡುಗಳಲ್ಲಿ ಅಡಗಿರುವ ದರೋಡೆಕೋರ ರನ್ನು ನಾಶಮಾಡಿ ಹಾಕಿರಿ ನೋಡುವಾ! ಇವ ನೊಬ್ಬನೇ ಕಣ್ಣುಮುಚ್ಚಿ ಬಿಡಿಸುವುದರೊಳಗೆ ಮೂರು ಮಂದಿಯನ್ನು ಹತಮಾಡಿದನಷ್ಟೆ? ನಾವು ಹೀಗೆ ಎಷ್ಟು ಕಾಲ ಇವರಿಗೆ ಹೆದರಿ ಕಾಡಿನಲ್ಲಿ ಅಡಗಿಕೊಳ್ಳೋಣ? ನಾವೆಲ್ಲಾ ಮನುಷ್ಯರುತಾನೇ? ಇಲಿ ಮೊಲಗಳಂಥ ಅಲ್ಪಪ್ರಾಣಿಗಳಲ್ಲವಷ್ಟೆ? ಮನು ಷ್ಯರು! ಬುದ್ಧಿಯಿರುವ, ಬಲವಿರುವ ಮನುಷ್ಯರು! ಮನುಷ್ಯರೇ ಮನುಷ್ಯರಿಗೆ ಹೆದರಿ ಸಾಯುವುದೆಂದ ರೇನು?" ಎನ್ನುತ್ತ ಕೋಪಾವೇಶದಿಂದ ಗಡಗಡ ನಡುಗಿದನು.

ಕಾಳೀವರ್ಮ ಮುದುಕನ ಮಾತುಗಳನ್ನು ತಲೆ ಯಾಡಿಸುತ್ತಾ ಕೇಳಿ "ಭಲೆ! ನಾನು ಏನು ಹೇಳ ಬೇಕೆಂದಿದ್ದೇನೋ ಅದನ್ನು ತಾತಯ್ಯನೇ ಹೇಳಿದರು. ಈಗ ಕೈಗೆ ಸಿಕ್ಕಿದ ಈ ಕಳ್ಳನ ಮೂಲಕ ಉಳಿದ ಕಳ್ಳರ ಬಿಲಗಳು ಎಲ್ಲೆಲ್ಲಿದೆ ಎಂಬುದನ್ನು ತಿಳಿಯುವು ದೇನೂ ಕಷ್ಟವಿಲ್ಲ. ನಿಮ್ಮಲ್ಲಿ ಕತ್ತಿ, ದೊಣ್ಣೆ, ಈಟಿ ಹಿಡಿಯಲು ಗೊತ್ತಿದ್ದವರು ನನ್ನ ಜತೆ ಬನ್ನಿ. ಎಂಟು ಹತ್ತು ದಿನಗಳಲ್ಲಿ ದರೋಡೆಕೋರರ ಹುಟ್ಟಡಗಿಸಿ, ನನ್ನ ದಾರಿ ಹಿಡಿದು ಹೋಗುತ್ತೇನೆ. ನನಗೆ ಇದ ಕ್ಕಿಂತ ಒಳ್ಳೆಯ ಕೆಲಸ ಬೇರೇನಿದೆ?" ಎಂದನು.

ಗ್ರಾಮದ ಜನರು ಕಾಳೀವರ್ಮನನ್ನು ಬಹಳ ಗೌರವದಿಂದ ತಮ್ಮ ಗ್ರಾಮಕ್ಕೆ ಕರೆದುಕೊಂಡು



ಹೋದರು. ದಾರಿಯಲ್ಲಿ ಇನ್ನೂ ಅನೇಕರು ಕಲೆ ತರು. ಕಾಳೀವರ್ಮನ ಕೆಲಸವನ್ನು ಕೇಳಿ ಎಲ್ಲರಿಗೂ ವೀರಾವೇಶ ಬಂದಿತು. ಎಲ್ಲರೂ ಉತ್ಸಾಹದಿಂದ ಅವನನ್ನು ಕರೆದುಕೊಂಡು ಹೋಗಿ ಉಪಚರಿಸಿ ಔತಣವಿಡಿಸಿದರು. ಆ ದಿನ ಸಾಯಂಕಾಲದಲ್ಲಿ ಕೆಲವು ಯುವಕರು ದೂರದೂರದ ಗ್ರಾಮಗಳಿಗೆ ಹೋಗಿ ಮತ್ತೆ ಕೆಲವು ಮಂದಿ ಯುವಕರನ್ನು ಕರೆದುಕೊಂಡು ಬಂದರು. ಅವರಿಗೆಲ್ಲ ಕಾಳೀವರ್ಮನು, ಕಳ್ಳರು ಬಿದ್ದಾಗ ಹೇಗೆ ಅವರನ್ನು ಇದಿರಿಸಬೇಕೆಂಬ ಕೆಲ ವಾರು ವಿವರಗಳನ್ನು ತಿಳಿಸಿ ಹೇಳಿದನು.

ಸಿಕ್ಕಿಬಿದ್ದ ಕಳ್ಳ ಹೆಚ್ಚೇನೂ ತಕರಾರು ಮಾಡದೆ ಯಾವ ಯಾವ ಗುಹೆಗಳಲ್ಲಿ, ಯಾವ ಯಾವ ಕಣಿವೆ ಗಳಲ್ಲಿ ಎಷ್ಟೆಷ್ಟು ಮಂದಿ ಕಳ್ಳರು ಅಡಗಿರುವರೋ, ಅಲ್ಲಿಗೆ ಹೋಗಲು ಯಾವ ಯಾವ ಕಡೆ ರಹಸ್ಯ ಮಾರ್ಗಗಳಿವೆಯೋ ಎಲ್ಲವನ್ನೂ ಕಾಳೀವರ್ಮ ನೊಂದಿಗೆ ಹೇಳಿಬಿಟ್ಟನು.

ಕಾಳೀವರ್ಮನು ಆ ಕಳ್ಳನನ್ನು ಬಂಧಿಸಿಡಿಸಿ, ಗ್ರಾಮಗಳ ಯುವಕರನ್ನು ಕರೆದುಕೊಂಡು ಹೋಗಿ, ಆಕಸ್ಮಿಕ ದಾಳಿ ಮಾಡಿ ಇದಿರುಬಿದ್ದ ಅನೇಕ ಕಳ್ಳರನ್ನು ಕೊಂದುಬಿಟ್ಟನು. ಅವನ ಕೈಯಲ್ಲಿ ಸಾಯದೆ ಉಳಿದವರು ಹೆದರಿ ತಪ್ಪಿಸಿಕೊಂಡು, ಆ ರಾಜ್ಯದ ಮೇರೆಯನ್ನು ದಾಟಿ, ಬೆಟ್ಟಗಳಾಚೆಗಿನ ಅರಣ್ಯದೊಳಗೆ ಓಡಿಹೋದರು.

ಹೀಗೆ ದರೋಡೆಗಾರರ ಬೇಟೆಯನ್ನು ಮುಗಿಸಿದ ಮೇಲೆ ಕಾಳೀವರ್ಮನು ಮತ್ತೆ ರಾಜಧಾನೀನಗರದ ಕಡೆಗೆ ತನ್ನ ಪ್ರಯಾಣ ಮುಂದುವರಿಸಿದನು. ಹದಿನೈದು ದಿನಗಳ ಮೇಲೆ ಅರಣ್ಯವನ್ನು ದಾಟಿ ಚಂದ್ರಶಿಲಾನಗರದ ಬಳಿಗೆ ತಲಪಿದನು. ಇನ್ನೂ ಸ್ವಲ್ಪ ದೂರ ಹೋದರೆ ನಗರವನ್ನು ಮುಟ್ಟಬಹುದು.

ಅಷ್ಟರಲ್ಲಿ ಒಂದು ಬೆಳಗ್ಗಿನ ಹೊತ್ತಿನಲ್ಲಿ ಹಠಾತ್ತಾಗಿ ಹತ್ತು ಜನ ಆಶ್ವೀಕಭಟರು ಅವನನ್ನು ಸುತ್ತಿಮುತ್ತಿಕೊಂಡರು. ಕಾಳೀವರ್ಮನಿಗೆ ಕತ್ತಿ ಹಿರಿಯಲಿಕ್ಕೂ ಸಮಯವಿರಲಿಲ್ಲ.

ಆಶ್ವೀಕರ ನಾಯಕನಂತಿರುವವನು ಅವನನ್ನು ದುರುಗುಟ್ಟಿ ನೋಡುತ್ತ, "ಕಾಳೀವರ್ಮನೆಂದರೆ ನೀನು ತಾನೇ? ದರೋಡೆಗಾರರನ್ನೆಲ್ಲ ರಾಜ್ಯದ ಮೇರೆ ದಾಟಿಸಿ ನೆರೆರಾಜ್ಯಕ್ಕೆ ಓಡಿಸಿದ ಮಹಾಶೂರ ನೀನು ತಾನೇ?" ಎಂದು ದಟ್ಟಿಸಿ ಕೇಳಿದನು.

"ಹೌದು. ಆ ಕೆಲಸ ಮಾಡಿದವನು ನಾನೇ. ಅಂತಹ ನನ್ನನ್ನು ಒಳ್ಳೆಯ ಗೌರವದಿಂದ ನಗರಕ್ಕೆ ಕರೆದೊಯ್ಯುವ ರೀತಿ ಹೀಗೇನು? ನಾನೇ ಒಬ್ಬ ದರೋಡೆಕೋರನೆಂಬ ಹಾಗೆ ಸುತ್ತುಮುತ್ತಿ ಹೆದರಿಸುತ್ತಿರುವಿರಲ್ಲ? ಏನಿದು ವಿಚಿತ್ರ?" ಎಂದು ಕೇಳಿದ ಕಾಳೀವರ್ಮ ಆಶ್ಚರ್ಯದಿಂದ.

ಇದಕ್ಕೆ ಆಶ್ವೀಕರ ನಾಯಕನು ಗಹಗಹಿಸಿ ನಕ್ಕು, "ನೀನು ಜಿತಕೇತು ಮಹಾರಾಜರಿಗೆ ಮಾಡಿದ ದ್ರೋಹವು ಸಾಮಾನ್ಯವಾದುದಲ್ಲ. ಇಲ್ಲಿಂದ ಓಡಿಹೋದ ಕಳ್ಳರು ನೆರೆರಾಜ್ಯದಲ್ಲಿ ದರೋಡೆ ಪ್ರಾರಂಭಿಸಿದ್ದಾರೆ. ಅಲ್ಲಿಯ ರಾಜ ನಮ್ಮ ರಾಜರೇ ಇದಕ್ಕೆ ಕಾರಣವೆಂದುಕೊಂಡು, ಚಂದ್ರಶಿಲಾನಗರದ ಮೇಲೆ ದಂಡೆತ್ತಿ ಬರುತ್ತಿದ್ದಾನಂತೆ! ಇದಿಷ್ಟಕ್ಕೂ ಕಾರಣನಾದವನು ನೀನು. ನಿನ್ನನ್ನು ಹಿಡಿದು ಗಲ್ಲಿಗೇರಿಸಿ ನಿನ್ನ ಶವವನ್ನು ಆ ರಾಜನಿಗೆ ಕಳಿಸಬೇಕೆಂದಿದ್ದೇವೆ, ತಿಳಿಯಿತೆ?" ಎಂದನು.

"ಒಳ್ಳೇ ಕತೆ! ನಿಮ್ಮ ಜಿತಕೇತು ರಾಜರ ಹಾಗೆಯೇ ನಿಮಗೂ ಬುದ್ಧಿ ಕೆಟ್ಟುಹೋಯಿತು!" ಎಂದವನೇ ಕಾಳೀವರ್ಮ ಕತ್ತಿ ಹಿಡಿಯ ಮೇಲೆ ಕೈ ಹಾಕಿದನು. ಅಷ್ಟರಲ್ಲಿ ಆಶ್ವೀಕರು ಅವನ ಮೇಲೆ ಬಿದ್ದು ಕೈಕಾಲುಗಳನ್ನು ಕಟ್ಟಿ ಕುದುರೆಯ ಮೇಲೆ ಹಾಕಿ, ನಗರದ ಕಡೆಗೆ ಹೊರಟರು. (ಇನ್ನೂ ಇದೆ)





# ಕರಡಿಕೆಂಗಣ್ಣ

೨

[ಕಾಳೀವರ್ಮನೆಂಬ ಕ್ಷತ್ರಿಯ ಯುವಕನು ಉದ್ಯೋಗ ಸಂಪಾದಿಸಲು ರಾಜಧಾನೀ ನಗರಕ್ಕೆ ಹೋಗುತ್ತಿದ್ದಾಗ, ದಾರಿಯಲ್ಲಿ ಗ್ರಾಮಸ್ಥರಿಂದ ಕೊಳ್ಳೇಗಾರರ ಸಂಗತಿ ಗೊತ್ತಾಯಿತು. ಕಾಳೀವರ್ಮನು ಗ್ರಾಮಸ್ಥರ ಸಹಾಯದಿಂದ ಕೊಳ್ಳೇಗಾರರನ್ನು ಬೇಟೆಯಾಡಿದನು. ಬಳಿಕ ಅವನು ನಗರಕ್ಕೆ ಸಮೀಪಿಸಲು, ಜಿತಕೇತು ರಾಜನ ಭಟರು ಅವನನ್ನು ರಾಜದ್ರೋಹಿ ಎಂಬ ಅಪವಾದದ ಮೇಲೆ ಹಿಡಿದುಕೊಂಡರು.]

ಚಂದ್ರಶಿಲಾ ನಗರದ ಅಶ್ವ ಸೈನಿಕರು ಕಾಳೀವರ್ಮನನ್ನು ಬಂಧಿಸಿ ತೆಗೆದುಕೊಂಡು ನಗರವನ್ನು ಪ್ರವೇಶಿಸಿದರು. ಒಬ್ಬನೇ ಒಬ್ಬನನ್ನು ಕುದುರೆಯ ಮೇಲೆ ಕಟ್ಟಿಹಾಕಿ ತೆಗೆದುಕೊಂಡು ಹೋಗುವಾಗ, ಬಂಧಿಸಲ್ಪಟ್ಟವನು ನಿರ್ಭೀತಿಯ ಮುಖದಿಂದ ಏನೂ ಹೇಳದೆ ಸುಮ್ಮನಿರುವುದನ್ನು ನೋಡಿ ಪುರಜನರಿಗೆ ಆಶ್ಚರ್ಯವೂ ಕುತುಹಲವೂ ಆಯಿತು. ಯಾವನೋ ಒಬ್ಬ ವೀರನನ್ನು ರಾಜಭಟರು ಕೊಡೊಯ್ಯುತ್ತಿದ್ದಾರೆ ಎಂಬ ಸುದ್ದಿ ನಾಲ್ಕು ಸುತ್ತಲೂ ಹರಡಿತು. ಎಲ್ಲರೂ ಸೇರಿಕೊಂಡು ಅವರ ಹಿಂದಿಂದೇ ಹೊರಟರು.

"ಯಾರಿವನು ? ಏನು ಮಾಡಿದ ? " ಎಂದು ಅವರಲ್ಲಿ ಕೆಲವರು ಧೈರ್ಯದಿಂದ ಅಶ್ವಿಕರ ನಾಯಕನನ್ನು ಕೇಳಿದರು.

ಅಶ್ವೀಕರ ನಾಯಕನು ವಿಜಯ ಗರ್ವದ ಮುಖ ಮಾಡಿಕೊಂಡು, "ಈ ಬಂಧಿತನ ಹೆಸರು ಕಾಳೀವರ್ಮ. ನಮ್ಮ ರಾಜ್ಯಕ್ಕೂ ನೆರೆದೇಶವಾದ ದುರ್ಮುಖನ ಉದಯಗಿರಿ ರಾಜ್ಯಕ್ಕೂ ಪ್ರಬಲ ಶತ್ರು. ಅರಣ್ಯದ ಮಧ್ಯದಲ್ಲಿದ್ದ ಇವನನ್ನು ಹಿಡಿಯಬೇಕಾದರೆ ನಮಗೆ ಏಳು ಕೆರೆ ನೀರು ಕುಡಿಸಿಬಿಟ್ಟ !" ಎಂದು ಹೇಳಿ ತನ್ನ ಸಹಚರರನ್ನು "ಅಲ್ಲವೇನೋ"



ಎಂಬಂತೆ ನೋಡಿದನು. "ಹೌದೌದು. ನೋಡಿದರೆ ಪಾಪದವನ ಹಾಗಿದ್ದಾನೆಂತಲೋ? ಬಿಟ್ಟರೆ ಸಾಕು, ಹುಲಿಯಾಗಿ ಹಾರುತ್ತಾನೆ." ಎಂದರು ಉಳಿದ ಆಶ್ವಿಕರು.

ಚಂದ್ರಕಲಾ ಉದಯಗಿರಿ ಎರಡು ರಾಜ್ಯಗಳ ಶತ್ರು! ಇವನ ಕಥೆ ಏನಿರಬಹುದೆಂದು ತಿಳಿಯಲು ಕೆಲ ಮಂದಿ ಪುರಜನರು ಆಶ್ವಿಕರ ಹಿಂದೆಯೇ ರಾಜ. ಭವನದ ವರೆಗೂ ನಡೆದರು.

ಆಶ್ವಿಕ ನಾಯಕನು ಬಂದಿಯೊಂದಿಗೆ ತನ್ನ ಸಹ ಚರರನ್ನು ಭವನದ ಆವರಣದಲ್ಲಿ ನೋಡಿಕೊಂಡಿರುವಂತೆ ಹೇಳಿ, ರಾಜಭವನದೊಳಗೆ ಹೋದನು. ಅಲ್ಲಿದ್ದ ದ್ವಾರದ ಭಟನೊಂದಿಗೆ, ಬಹು ಮುಖ್ಯ ಸಮಾಚಾರವೆನ್ನುತ್ತ, ತಾನು ರಾಜದ್ರೋಹಿಯಾದ ಕಾಳೀವರ್ಮನನ್ನು ಬಂಧಿಸಿ ತಂದ ಸಮಾಚಾರವನ್ನು ಜಿತಕೇತು ಮಹಾರಾಜನಿಗೆ ಹೇಳಿ ಕಳುಹಿಸಿದನು. ಆ ಸಮಯದಲ್ಲಿ ಜಿತಕೇತು ಮಹಾರಾಜನು ಪ್ರಧಾನ ಮಂತ್ರಿಯೊಂದಿಗೆ, ಉದಯಗಿರಿ ರಾಜನು ದಂಡೆತ್ತಿ ಬರುವೆನೆಂದು ದೂತನ ಮೂಲಕ ಕಳುಹಿಸಿದ ಪತ್ರವನ್ನು ಕುರಿತು ಮಾತಾಡಿಕೊಂಡಿದ್ದನು. ಕಾಳೀವರ್ಮ ಸಿಕ್ಕಿದನೆಂಬ ಸಮಾಚಾರ ಕೇಳಿದ ಕೂಡಲೇ ಅವನು ಅತ್ಯಾನಂದದಿಂದ ಮಂತ್ರಿಯನ್ನು ನೋಡಿ, "ಮಹಾಮಂತ್ರೀ! ಈ ಕಾಳೀವರ್ಮನೆಂಬ ಕ್ಷತ್ರಿಯ ಯುವಕನ ಕಾರಣದಿಂದ ನಾವು ದುರ್ಮುಖ ರಾಜನೊಂದಿಗೆ ಸುಮ್ಮ ಸುಮ್ಮನೆ ಯುದ್ಧ ಮಾಡಬೇಕಾಗಿ ಬಂತು. ಅವನೀಗ ಸಿಕ್ಕಿಬಿದ್ದ. ಅವನನ್ನು ಜೀವದೊಂದಿಗೆ ಹೆಡೆಮುರಿಗೆ ಕಟ್ಟಿ ದುರ್ಮುಖನ ಬಳಿಗೆ ಕಳುಹಿಸುವುದು ಒಳಿತೋ. ಗಲ್ಲಿಗೇರಿಸಿ ಶವವನ್ನು ಕಳುಹಿಸುವುದು ಒಳಿತೋ? ಯೋಚಿಸಿ ಹೇಳಿರಿ." ಎಂದು ಕೇಳಿದನು.

"ಮಹಾರಾಜರೆ, ದರ್ಮುಖನ ಪತ್ರದಲ್ಲಿರುವ ವಿಷಯಗಳಿಂದ ಅವನಿಗೆ ನೀವು ಹೇಳಿದ ಎರಡರಲ್ಲಿ ಯಾವುದಾದರೂ ಸಮ್ಮತಿಯೇ ಎಂದು ತಿಳಿಯುತ್ತದೆ. ಆದರೆ ನಮಗೆ ಈಗ ಸಿಕ್ಕಿದವನು ದರೋಡೆಕೋರರನ್ನು ನಮ್ಮ ರಾಜ್ಯದಿಂದ ಉದಯಗಿರಿ ರಾಜ್ಯಕ್ಕೆ ಓಡಿಸಿದ ಕಾಳೀವರ್ಮನೇ ಎಂದು ರುಜುವಾಗಬೇಕಲ್ಲವೇ? ಅದರಲ್ಲಿ ತಪ್ಪಾದರೆ ನಾವು ಮಾತು ತಪ್ಪಿದೆವೆಂಬ ಅಪರಾಧಕ್ಕೊಳಗಾಗಿ ದುರ್ಮುಖನಿಂದ ಇನ್ನಷ್ಟು ತೊಂದರೆಗಳನ್ನು ಅನುಭವಿಸಲೇಬೇಕಾದೀತು. ಇವನೇ ರಾಜದ್ರೋಹಿ ಕಾಳೀವರ್ಮನೆಂಬುದನ್ನು ರುಜುಪಡಿಸಿಕೊಳ್ಳಬೇಕಾದುದು ಮುಖ್ಯ." ಎಂದನು ಮಂತ್ರಿ.

"ನಮ್ಮ ಆಶ್ವಿಕರ ನಾಯಕನು ಅಂತಹ ತಪ್ಪು ಮಾಡಲಾರ." ಎಂದ ಮಹಾರಾಜ.

"ಬೇಕೆಂದು ತಪ್ಪು ಮಾಡಲಾರ. ಈ ವಿಶಾಲವಾದ ಚಂದ್ರಶಿಲಾ ನಗರದಲ್ಲಿ ಎಷ್ಟು ಮಂದಿ ಕಾಳೀವರ್ಮ ಹೆಸರಿನವರಿರುವರೋ ಏನೊ. ಆದುದರಿಂದ ತಾವೇ ಸ್ವಂತವಾಗಿ ವಿಚಾರಿಸಿಕೊಂಡು ಶಿಕ್ಷಿಸು

ವುದು ಒಳ್ಳೆಯದು. ನಿರಪರಾಧಿಗಳನ್ನು ಶಿಕ್ಷಿಸಿ ಏನು ಪ್ರಯೋಜನ ? " ಎಂದ ಮಂತ್ರಿ.

ಅದಕ್ಕೆ ಒಪ್ಪಿಕೊಂಡು ರಾಜನು ಕೂಡಲೇ ಹೊರಗೆ ಹೊರಟನು. ಅವನ ಹಿಂದೆ ಮಂತ್ರಿಯೂ ನಡೆದನು. ಇಬ್ಬರೂ ರಾಜಭವನದ ಆವರಣಕ್ಕೆ ಬಂದು, ಅಲ್ಲಿ ಸೇರಿದ ಅನೇಕ ಮಂದಿ ಪ್ರಜೆಗಳ ಗುಂಪನ್ನು ನೋಡಿದರು.

ಮಂತ್ರಿಯ ಆಜ್ಞೆಯಂತೆ ಆಶ್ವಿಕ ಭಟರು ಕಾಳೀ ವರ್ಮನ ಕೈಗಳ ಕಟ್ಟನ್ನು ಬಿಚ್ಚಿ ಅವನನ್ನು ಕುದುರೆಯ ಮೇಲಿನಿಂದ ಕೆಳಗಿಳಿಸಿದರು.

ಕಾಳೀವರ್ಮನು ವಿಜಯವೀರನಂತೆ ಎದೆ ಯುಬ್ಬಿಸಿ ನಿಂತು ರಾಜನನ್ನೂ ಮಂತ್ರಿಯನ್ನೂ ಅಳೆಯುವಂತೆ ನೋಡಿದನು.

ಆಮೇಲೆ ಮಾತಿಗೆ ತೊಡಗಿ, "ಮಹಾರಾಜರೇ! ತಮ್ಮ ಭಟರು ಮಾಡಿದ ಅನ್ಯಾಯವನ್ನು ನೋಡಿ ದಿರಾ ? ನಾನು ಮಾಡಿದ ಕೆಲಸ ಕೇಳಿದರೆ ನೀವು ನಿಜಕ್ಕೂ ಸಂತೋಷ ಪಡುವಿರಿ. ಅರಣ್ಯದಲ್ಲಿ ನನ್ನ ಮೇಲೆ ಹಠಾತ್ತಾಗಿ ಬಿದ್ದು ಬಂಧಿಸಿ ಬಹಳ ಅವಮಾನ ಪಡಿಸಿದರು. ಇದಕ್ಕಾಗಿ ಅವರನ್ನು ತಕ್ಕ ರೀತಿಯಲ್ಲಿ ದಂಡಿಸಬೇಕೆಂದು ವಿಜ್ಞಾಪಿಸುತ್ತೇನೆ." ಎಂದನು.

ಅವನ ಮಾತು ಕೇಳಿ ಜಿತಕೇತು ರಾಜನು ಆಶ್ಚರ್ಯಪಡುತ್ತ ಮಂತ್ರಿಯನ್ನು ನೋಡಿ, "ಮಹಾ ಮಂತ್ರಿ! ಇದೇನು ಇವನ ಅವಿವೇಕದ ಮಾತುಗಳು? ಇವನು ತುಂಬಾ ದುಡುಕಗಾರನಾಗಿದ್ದಾನೆ. ನನ್ನ ಈ ಹತ್ತು ವರ್ಷದ ಪರಿಪಾಲನೆಯಲ್ಲಿ ಅಪರಾಧಿಯಾದ ವನು ಇಂಥಾ ದುರುದುಂಡಿತನ ಮಾತಾಡಿದ್ದು ಕೇಳಿಲ್ಲ!" ಎಂದನು.

ಮಂತ್ರಿ ಕೋಪದಿಂದ ಕೈಯೆತ್ತಿ, "ಎಲೋ, ಸೊಕ್ಕಿನವನೇ! ಮಹಾರಾಜರ ಅನುಜ್ಞೆ ಇಲ್ಲದೆ ಮಾತಾಡಿದ್ದಕ್ಕಾಗಿ ನಿನಗೆ ಈ ಕ್ಷಣದಲ್ಲೇ ಶಿರಚ್ಛೇದ ಶಿಕ್ಷೆ ವಿಧಿಸಬೇಕಾಗಿದೆ. ಆದರೆ ನೀನು ಯಾರೆಂಬುದನ್ನು ಮೊದಲು ತಿಳಿಯಬೇಕಾಗಿರುವುದರಿಂದ ಬದುಕಿ ಉಳಿದಿರುವಿ. ಚಂದ್ರಶಿಲಾ ನಗರ ರಾಜ್ಯದ ಅರಣ್ಯ ದಲ್ಲಿ ದಾರಿದೋಚುವ ಕಳ್ಳರನ್ನೆಲ್ಲ ಉದಯಗಿರಿ





ರಾಜ್ಯದೊಳಗೆ ಪ್ರವೇಶ ಮಾಡಿಸಿದವನು ನೀನು ತಾನೇ? ನಿಜ ಹೇಳು? ನಿನ್ನ ಹೆಸರೇನೋ?" ಎಂದು ಕೇಳಿದನು.

ಕಾಳೀವರ್ಮನಿಗೆ ನಗು ಬಂದಿತು. ಕಳ್ಳರನ್ನು ದೂರ ಅಟ್ಟಿದುದು ಇವರಿಗೆ ಹಿಡಿಸಲಿಲ್ಲವೆಂದು ತೋರಿ ಆಶ್ಚರ್ಯವಾಯಿತು.

"ನನ್ನ ಹೆಸರು ಕಾಳೀವರ್ಮ. ನಾನು ಈ ರಾಜ್ಯದ ಪ್ರಜೆಯೇ. ಗ್ರಾಮಗಳ ಮೇಲೆ ಬಿದ್ದು ಧನಧಾನ್ಯಗಳನ್ನು ಕೊಳ್ಳೆ ಹೊಡೆಯುವ ದರೋಡೆಕೋರರನ್ನು ಗ್ರಾಮಸ್ಥರ ಸಹಾಯದಿಂದ ಇದಿರಿಸಿ, ಅದರಲ್ಲಿ ಕೆಲವರನ್ನು ಕೊಂದ ಮಾತು ನಿಜವೇ. ಉಳಿದವರು ತಪ್ಪಿಸಿಕೊಂಡು ಓಡಿ ಹೋದರು. ಅವರು ಉದಯಗಿರಿ ರಾಜ್ಯಕ್ಕೆ ಹೋದರೆ ನಾನೋ ಬಾಧ್ಯನು? ಆ ರಾಜ್ಯವನ್ನು ರಕ್ಷಿಸುವ ಹೊಣೆಯೂ ನಿಮಗಿದೆಯೇನು? ಅಲ್ಲಿನವರು ಬಳೆ ತೊಟ್ಟುಕೊಂಡವರೇನು?" ಎಂದ ಕಾಳೀವರ್ಮ.

ಜಿತಕೇತು ರಾಜನು ಕಾಳೀವರ್ಮನನ್ನು ಪರೀಕ್ಷಿಸಿ ನೋಡುತ್ತ "ಇವನು ಶಿಕ್ಷೆಗೆ ಪಾತ್ರನಾದ ಕಾಳೀವರ್ಮನೇ ನಿಜ. ಇಲ್ಲದಿದ್ದರೆ ಹೀಗೆಲ್ಲಾ ಬಿರುಸಾಗಿ ಮಾತನಾಡಲಾರ. ಎಲೋ, ಕಾಳೀವರ್ಮ! ನೀನು ನಮ್ಮ ಅನುಮತಿಯಿಲ್ಲದೆ ನಮ್ಮ ಪುರಜನರನ್ನು ಕೊಂದುದಲ್ಲದೆ, ನೆರೆದೇಶದ ರಾಜ್ಯದೊಂದಿಗೆ ಕಲಹಕ್ಕೂ ಕಾರಣನಾಗಿರುವೆ. ನಿನಗೆ ಮರಣ ದಂಡನೆ ವಿಧಿಸಿದ್ದೇನೆ. ಅದೇ ಸರಿ!" ಎಂದನು.

ರಾಜನ ಮಾತು ಕೇಳಿ ಕಾಳೀವರ್ಮನು ಕೆಲವು ಕ್ಷಣ ಏನೂ ತೋಚದೆ ಆಮೇಲೆ, "ಇದು ಯಾವ ನ್ಯಾಯ ಸೂತ್ರದಂತೆ ಕೊಡುವ ಶಿಕ್ಷೆ? ನನ್ನ ತಂದೆ ತಮ್ಮ ತಂದೆಯ ಕೈಕೆಳಗೆ ಸೈನಿಕೋದ್ಯೋಗಿಯಾಗಿದ್ದು ಒಂದು ಯುದ್ಧದಲ್ಲಿ ಪ್ರಾಣ ಬಿಟ್ಟರು. ನಾನು ತಮ್ಮ ಹತ್ತಿರ ಉದ್ಯೋಗ ಕೇಳಬೇಕೆಂದು ಗ್ರಾಮದಿಂದ ಹೊರಟು ಇಷ್ಟು ದೂರ ಬಂದೆ. ಪ್ರಜಾ ಕಂಟಕರಾದ ದರೋಡೆಕೋರರನ್ನು ಬೇಟೆಯಾಡಿದುದಕ್ಕೆ ನನಗೆ ಮರಣ ದಂಡನೆಯೇ? ಆ ಕಳ್ಳರು ನಿಮ್ಮ ಪ್ರಜೆಗಳೇ? ಒಳ್ಳೇ ಕತೆಯಾಗಿದೆ!" ಎಂದು ಹೇಳುವಾಗ ಅವನಿಗೆ ತುಸು ನಗುವೂ ಬಂದಿತು.

"ಇದು ಅವಿಧೇಯತೆ! ಅಧಿಕಪ್ರಸಂಗತನ!" ಎಂದು ಮಂತ್ರಿ ಸೈನಿಕರೊಂದಿಗೆ, "ಮಹಾರಾಜರ ಆಜ್ಞೆ ಕೇಳಿದಿರಷ್ಟೆ? ಈ ಕಾಳೀವರ್ಮನನ್ನು ನಗರದ ಹೊರಗಿರುವ ಶಿರೀಷ ವನದ ವಧಾಸ್ಥಳದಲ್ಲಿ ಗಲ್ಲಿಗೇರಿಸಿ ಶವವನ್ನು ಉದಯಗಿರಿ ರಾಜ ದರ್ಮಖನಿಗೆ ಕಳುಹಿಸಿಬಿಡಿರಿ! ಶವದೊಂದಿಗೆ ನಾವು ಆ ರಾಜನಿಗೆ ಕೊಡುವ ಪತ್ರವನ್ನೂ ಒಯ್ಯಬೇಕು."

ಮಂತ್ರಿ ಗಂಭೀರವಾಗಿ ಹೀಗೆ ಹೇಳಿದ ಕೂಡಲೇ ಪ್ರಜೆಗಳ ಗುಂಪಿನಿಂದ ಕಲಕಲರವವೆದ್ದಿತು. ಅವರಲ್ಲಿ ಕೆಲವರು, ಈಗಾಗಲೇ ಕಾಳೀವರ್ಮನ ಅಭಿಮಾನಿಗಳಾದವರು, "ಇದು ಅನ್ಯಾಯ! ಕಾಳೀವರ್ಮನು ನಮಗೆ ಒಳಿತೇ ಮಾಡಿದನು. ಮಹಾರಾಜರು

ವಿಧಿಸಿದ ಶಿಕ್ಷೆಯನ್ನು ಪುನರಾಲೋಚನೆ ಮಾಡ ಬೇಕು!" ಎಂದು ಕೂಗಿ ಕೂಗಿ ಹೇಳಿದರು.

"ಯಾರವರು! ಮಹಾರಾಜರಿಗೇ ಆಲೋಚನೆ ಹೇಳುವಂಥ ಬುದ್ಧಿವಂತರು!" ಎಂದು ಗರ್ಜಿಸಿ ಮಂತ್ರಿ ಸೈನಿಕರ ಕಡೆಗೆ ತಿರುಗಿ, "ಆ ಕೂಗುವವ ರನ್ನೆಲ್ಲಾ ಹಿಡಿದುಕೊಂಡು ಹೋಗಿ ಸೆರೆಮನೆಯಲ್ಲಿ ತಳ್ಳಿರಿ! ಅಲ್ಲಿಯೂ ಛಡಿಯೇಟು ಬಾರಿಸಿರಿ!" ಎಂದು ಆಣತಿ ಮಾಡಿದನು.

ಕೂಡಲೇ ಸೈನಿಕರು ತಮ್ಮ ಕುದುರೆಗಳನ್ನು ಜನರ ಗುಂಪಿನ ಕಡೆಗೆ ಓಡಿಸಿದರು. ಜನರು ಹೆದರಿ ಚೀರಾ ಡುತ್ತ ಚೆಲ್ಲಾಚೆದರಾಗಿ ಓಡಿ ಹೋಗತೊಡಗಿದರು. ಕೆಲವರು ಬಿದ್ದು ಗಾಯಗೊಂಡರು. ಕೆಲವರು ಸತ್ತರು ಕೂಡಾ.

ಆದನ್ನು ನೋಡುತ್ತ ಜಿತಕೇತು ರಾಜನು ತೃಪ್ತಿ ಯಿಂದ ನಕ್ಕು, "ದಂಡ ನೀತಿಯೊಂದೇ ಈ ಅಲ್ಪ ಪ್ರಾಣಿಗಳಿಗೆ ತಕ್ಕ ಮದ್ದು. ಸಮಯಕ್ಕೆ ತಕ್ಕ ಆಜ್ಞೆ ಮಾಡಿದೆ ಮಹಾ ಮಂತ್ರೀ" ಎಂದು ಮಂತ್ರಿ ಯನ್ನು ಮೆಚ್ಚಿ ಭವನದೊಳಗೆ ಪ್ರವೇಶಿಸಿದನು. ರಾಜನ ಹಿಂದೆಯೇ ಮಂತ್ರಿಯೂ ತಲೆಯಾಡಿಸುತ್ತಾ ಹೋದನು.

ಜನರನ್ನು ದೂರ ಓಡಿಸಿದ ಮೇಲೆ ಅಶ್ವ ಸೈನಿಕರ ನಾಯಕನು ಕಾಳೀವರ್ಮನ ಬಳಿಗೆ ಬಂದು "ರಾಜರ ಆಜ್ಞೆ ಕೇಳಿದೆಯಷ್ಟೇ? ಪಾಪ! ಇಷ್ಟು ಸಣ್ಣ ವಯಸ್ಸಿನಲ್ಲೇ ನೀನು ಈ ಲೋಕವನ್ನು ಬಿಟ್ಟು ಹೋಗುವಂತಾದುದನ್ನು ನೋಡಿ ನನಗೆ ವ್ಯಸನ ವಾಗುತ್ತದೆ. ಯಾಕಪ್ಪಾ ಹೀಗೆಲ್ಲಾ ಬೇಡದ ಕೆಲಸ ಮಾಡಿ ಮೈ ಮೇಲೆ ತಂದುಕೊಂಡಿ? ನಾನಾದರೂ ಏನು ಮಾಡಲಿ? ರಾಜಾಜ್ಞೆ! ಆದು ನೆರವೇರದೇ ಗತ್ಯಂತರವಿಲ್ಲ, ನಡೆ!" ಎಂದನು.

ಬಹಳ ಕೋಪದಿಂದ ಕಾಳೀವರ್ಮನ ಮನಸ್ಸು ಹಾರಿ ತನ್ನ ಕತ್ತಿಯನ್ನು ಸೆಳೆದುಕೊಳ್ಳಲು ನೋಡಿ,



ಇದು ಸಮಯಲ್ಲವೆಂದುಕೊಂಡು ಕೋಪವನ್ನು ನುಂಗಿ, "ನೀನು ಗೌರವಿಸುವ ಈ ರಾಜನ ಆಜ್ಞೆ ಎಷ್ಟೊಂದು ಬುದ್ಧಿಹೀನವಾದುದೆಂದು ಇಲ್ಲಿ ಸೇರಿದ ನಗರವಾಸಿಗಳಿಗೆ ಹೊರತು ನಿಮಗಾರಿಗೂ ಅರ್ಥ ವಾಗುವಂತಿಲ್ಲ. ನೀನೊಬ್ಬ ರಾಜನಿಗೆ ಹೆದರಿ ನಡುಗು ವವನು. ಈ ಜಿತಕೇತು ರಾಜನು ಇನ್ನೊಬ್ಬ ರಾಜನಿಗೆ ಹೆದರಿ ಪ್ರಜೆಗಳಿಗೆ ಉಪಕಾರ ಮಾಡಿದ ನನ್ನನ್ನು ಗಲ್ಲಿಗೇರಿಸುತ್ತಾನೆ! ಎಂಥ ವಿಚಿತ್ರ ವಿಪರೀತ!" ಎಂದನು.

"ರಾಜ್ಯದ ಕ್ಷೇಮ ರಾಜನಿಗೇ ಗೊತ್ತು! ನಿನಗೂ ನನಗೂ ಏನು ಗೊತ್ತಾಗುತ್ತದೆ? ಸರಿಸರಿ ಹೊರಡು ಕುದುರೆಯ ಮೇಲೆಯೇ ಸಾಗಲಿ ನಿನ್ನ ಅಂತಿಮ ಪ್ರಯಾಣ. ಶಿರೀಷ ವನದ ವಧಾಸ್ಥಾನವನ್ನು ಸೇರು ವುದರೊಳಗೆ ಮಹಾರಾಜರಿಗೆ ದಯೆ ಬಂದು ನಿನ್ನ ಮರಣ ಶಿಕ್ಷೆಯನ್ನು ರದ್ದುಪಡಿಸಿದರೂ ಪಡಿಸಿಯಾರು. ಹಿಂದೆ ಕೆಲವರಿಗೆ ಆಖೈರು ಕ್ಷಣದಲ್ಲಿ ಹೀಗೆ ಶಿಕ್ಷೆ



ತಪ್ಪಿದ್ದುಂಟು. ನಿನ್ನ ಹಣೆಬರಹ ಹೇಗೋ? ಬೇಗನೇ ಗೊತ್ತಾಗುತ್ತದೆ!" ಎಂದ ಆಶ್ವಿಕರ ನಾಯಕ.

ಕಾಳೀವರ್ಮನಿಗೆ ಅಂತಹ ಆಶೆ ಏನಿರಲಿಲ್ಲ. ಯಾವುದಾದರೊಂದು ಉಪಾಯದಿಂದ ಈ ಸೈನಿಕರಿಂದ ತಪ್ಪಿಸಿಕೊಂಡರೆ ಮಾತ್ರ ಬದುಕಬಹುದೆಂದುಕೊಂಡನು. ಜನದಟ್ಟಣೆಯ ನಗರದ ಮೇರೆ ದಾಟಿದ ಮೇಲೆಯೇ ಅದಕ್ಕೇನಾದರೂ ಸಂದು ದೊರೆಯುವುದೋ ಎಂದು ನೋಡಬೇಕಾಗಿತ್ತು. ಅಂತಲೇ ಅವನು ನಾಲ್ಕುಸುತ್ತಲೂ ಸೂಕ್ಷ್ಮವಾಗಿ ಪರೀಕ್ಷಿಸಿಕೊಂಡೇ ಸಾಗುತ್ತಿದ್ದನು.

ಆಶ್ವಿಕರ ನಾಯಕನು ತನ್ನ ಅನುಚರರಿಗೆ ಏನೋ ಸನ್ನೇ ತೋರಿಸಿ, ಕಾಳೀವರ್ಮನನ್ನು ನೋಡಿ, "ನಿನ್ನ ಕೈಗಳಿಗೆ ಈಗ ಸಂಕಲೆ ತಗಲಿಸಬೇಕಾಗಿದೆ. ಕೈಗಳನ್ನು ಮುಂದೆ ಚಾಚು" ಎಂದು ಸಂಕಲೆಯನ್ನು ಝಣಝಣಿಸಿಕೊಂಡು ಸಮೀಪ ಬಂದನು. "ಅದೇಕೆ? ಇನ್ನು ಕೆಲವೇ ನಿಮಿಷಗಳಲ್ಲಿ ಸಾಯಲು ಹೋಗುವ ನನಗೆ ಈ ಸಂಕಲೆಯ ಬಂಧನವೇತಕ್ಕೆ? ನಾನು ಓಡಿ ಹೋಗುವೆನೆಂದು ತಾನೇ ನಿನ್ನ ಭಯ? ಬೇಕಾದರೆ ನನ್ನ ಕಾಲನ್ನು ಕಟ್ಟು. ಇಷ್ಟು ಮಂದಿ ಆಯುಧಪಾಣಿಗಳ ಮಧ್ಯದಿಂದ ನಾನು ತಪ್ಪಿಸಿಕೊಳ್ಳುವುದಾದರೂ ಹೇಗೆ? ಹಾಗೊಂದು ವೇಳೆ ಆದರೂ ಓಡುವವನನ್ನು ಹಿಡಿಯಲಾಗದಷ್ಟು ಕೈಲಾಗದವರೇ ನೀವು?" ಎಂದು ಹೇಳಿ ಕಾಳೀವರ್ಮನು ಕುದುರೆಯಿಂದ ಕೆಳಗಿಳಿಯಲು ನೋಡಿದನು. "ಬೇಡ ಬೇಡ. ಹಾಗೇ ಇರು" ಎಂದ ಆಶ್ವಿಕರ ನಾಯಕ.

ಆಶ್ವಿಕರ ನಾಯಕನಿಗೆ ಕಾಳೀವರ್ಮನ ಮೇಲೆ ಒಂದು ಬಗೆಯ ನಂಬುಗೆಯುಂಟಾಗಿ ತೃಪ್ತಿಯಾಯಿತು. "ಕಾಳೀವರ್ಮಾ, ಸಾಯಲು ಇರುವವನ ಕೋರಿಕೆ ನೆರವೇರಿಸಬೇಕಾದುದು ಪುಣ್ಯಕಾರ್ಯವಂತೆ. ಒಂದು ವೇಳೆ ನೀನು ಓಡಿ ಹೋಗಲು ನೋಡಿದೆಯಾದರೆ ನಾವು ಹತ್ತು ಮಂದಿ ಆಶ್ವಿಕ ವೀರರಿದ್ದೇವೆ. ಹತ್ತು ಕತ್ತಿಗಳು ನಿನ್ನ ಶರೀರವನ್ನು ತೂತು ಕೊರೆದು ಸಾಯಿಸುತ್ತವೆ. ಅಥವಾ ಈ ಸಂಕಲೆಯೇ ನಿನ್ನ ತಲೆಯನ್ನು ಪುಡಿ ಮಾಡುತ್ತದೆ! ಸಾಯುವವರೆಗೂ ಜೀವದಿಂದಿರು ಜಾಗ್ರತೆ!" ಎಂದನು.

ತರುವಾಯ ಕಾಳೀವರ್ಮನನ್ನು ನಡುವಿನಲ್ಲಿರಿಸಿ, ಮುಂದಿನಿಂದ ಐದು ಮಂದಿ ಆಶ್ವಿಕರೂ, ಹಿಂದಿನಿಂದ ಐದು ಮಂದಿ ಆಶ್ವಿಕರೂ ಹೀಗೆ ಮುಂದೆ ಹೊರಟರು. ಈಗ ಪ್ರಜೆಗಳು ಅವರ ಹತ್ತಿರ ಬರಲು ಹೆದರಿ, ದೂರ ದೂರ ಬೀದಿಯ ಬದಿಗಳಲ್ಲಿ ನಿಂತುಕೊಂಡು, ಜಿತಕೇತು ರಾಜನ ದುಷ್ಟತನವನ್ನು ಕುರಿತು ಮೆಲ್ಲಮೆಲ್ಲನೆ ಮಾತಾಡಿಕೊಂಡಿದ್ದರು.

ಹೀಗೆ ಒಂದು ಗಂಟೆ ಹೊತ್ತು ಸಾಗಿದ ಮೇಲೆ ನಗರದ ಹೊರ ಭಾಗದಲ್ಲಿದ್ದ ಶಿರೀಷ ವನವನ್ನು ಹೊಕ್ಕರು. ಅಲ್ಲಿ ಅನೇಕಾನೇಕ ಶಿರೀಷ ವೃಕ್ಷಗಳು ಆಕಾಶದ ಕಡೆಗೆ ಮುತ್ತಿಡುವಂತೆ ಬೆಳೆದಿದ್ದುವು. ಆ

ವನದ ಆಚೆಗೆ ಗುಡ್ಡಗಳೂ, ಒಂದಕ್ಕಿಂತ ಒಂದು ಎತ್ತರವಾಗಿದ್ದುವು. ಆ ಗುಡ್ಡದಿಂದ ಬೀಳುವ ಜಲಪಾತವೊಂದು ಸುಮಾರು ಮೂವತ್ತು ಅಡಿ ಕೆಳಗಡೆಯಿದ್ದ ಬಂಡೆಗಲ್ಲಿನ ಮೇಲೆ ಬೀಳುತ್ತ ಭಯಂಕರ ಶಬ್ದ ಮಾಡಿಕೊಂಡಿತ್ತು. ಅಲ್ಲೆಲ್ಲಾ ಎಷ್ಟು ಪ್ರಕೃತಿ ಸೌಂದರ್ಯವಿದ್ದಿತೋ ಅಷ್ಟೇ ಭಯಂಕರವಾಗಿಯೂ ಕಾಣಿಸುತ್ತಿತ್ತು.

ಅಶ್ವಿಕರೊಂದಿಗೆ ಮರಗಳ ನಡುವಿಗೆ ಹೋದ ಕೂಡಲೇ ಕಾಳೀವರ್ಮನು "ಈ ವನದಲ್ಲಿಯೇ ನನ್ನ ಗಲ್ಲು ಶಿಕ್ಷೆ?" ಎಂದು ಕೇಳಿದನು. ಅವನ ಕಣ್ಣು ತಪ್ಪಿಸಿಕೊಳ್ಳುವ ದಾರಿಯನ್ನು ಹುಡುಕುತ್ತಿದ್ದಿತು. ಒತ್ತೊತ್ತಾದ ಮರಗಳೂ ಅದರಾಚೆಗಿನ ಗುಡ್ಡಗಳೂ ಅವನನ್ನು ಅವಸರಪಡಿಸುವಂತಿದ್ದುವು.

ಅಶ್ವಿಕರ ನಾಯಕನು "ಗಲ್ಲೂ ಇಲ್ಲೇ, ಶಿರಚ್ಛೇದವೂ ಇಲ್ಲೇ" ಎಂದು ತಲೆಯಾಡಿಸಿದನು. ಆಗ ಕೋಣದ ಮೇಲೆ ಕುಳಿತಿದ್ದ ಕರ್ರಗಿನ ಆಕೃತಿಯೊಂದು ಅವರ ಇದಿರಿನಲ್ಲಿ ಕಂಡುಬಂತು. ಕೋಣದ ಮೇಲೆ ಕುಳಿತಿದ್ದವನು ತಲೆಯಿಂದ ಕಾಲಿನ ವರೆಗೂ ಕರ್ರಗಿನ ಮುಸುಗು ಧರಿಸಿದ್ದನು. ಆ ಮುಸುಗಿನಲ್ಲಿ ಕಣ್ಣುಗಳ ಸ್ಥಳದಲ್ಲಿ ಮಾತ್ರ ರಂಧ್ರಗಳಿದ್ದುವು.

ಆ ಕೋಣ ಸವಾರನು ತನ್ನ ಕೈಯಲ್ಲಿದ್ದ ದಪ್ಪ ತೋರದ ಕೊಡಲಿಯನ್ನು ಮೇಲೆತ್ತಿ, ಅಶ್ವಿಕರ ಬಳಿಗೆ ವೇಗವಾಗಿ ಬಂದು, "ಯಾರು ನೀವು? ಈ ಮೊದಲು ಈ ಕಟುಕ ಪ್ರವರನಿಂದ ಶಿರಚ್ಛೇದ ಮಾಡಲ್ಪಟ್ಟವನ ಪ್ರೇತಗಳೋ? ಅಲ್ಲ, ಹೊಸದಾಗಿ ತಲೆ ಕಡಿಸಿಕೊಳ್ಳಲಿಕ್ಕೆ ಬಂದ ಅಪರಾಧಿಗಳೋ? ಬೇಗ ಹೇಳಿರಿ!" ಎಂದು ಭೀಕರವಾದ ಗೊಗ್ಗರ ದನಿಯಿಂದ ಕೇಳಿದನು.

ದೊಡ್ಡ ಕೋಣದ ಮೇಲೆ ಕರಿಮುಸುಕಿನವನು ಬಂದು ಗೊಗ್ಗರ ಗರ್ಜನೆಯಿಂದ ಮಾತು ತೊಡಗಿದ ಕೂಡಲೇ ಕುದುರೆಗಳು ಬೆದರಿ ಹೀಂಕಾರ ಮಾಡುತ ಆಚೀಚೆ ಓಡಿದುವು. ತಪ್ಪಿಸಿಕೊಳ್ಳಲಿಕ್ಕೆ ಇದೇ ತಕ್ಕ ಸಂಧಿ ಎಂದು ಕಾಳೀವರ್ಮನಿಗೆ ತೋರಿತು. ಅವನು ತನ್ನ ಕುದುರೆಯನ್ನು ಅಶ್ವಿಕನ ಮೇಲೆ ಎಗರಿಸ



ಬೇಕೆಂದಿರುವಾಗ, ಕೋಣದ ಮೇಲಿನವನು ಹಾರಿ ಬಂದು ಕುದುರೆಯ ಕಡಿವಾಣವನ್ನು ಎಳೆದು ಹಿಡಿದು ಕೊಂಡು, "ಲೋ! ಇಲ್ಲಿಯ ಶಿರೀಷ ವೃಕ್ಷಗಳೆಂದರೆ ಭೂತ ಪಿಶಾಚಗಳಿಗೆ ತುಂಬಾ ಇಷ್ಟ. ಆದಕ್ಕೇ ಮಹಾ ರಾಜರು ಕಳ್ಳಸುಳ್ಳ ದ್ರೋಹಿಗಳಿಗೆ ಮರಣಶಿಕ್ಷೆ ಗಳನ್ನು ಇಲ್ಲಿಯೇ ಜರುಗಿಸುತ್ತಾರೆ. ಹೇಳು, ನೀನು ಕಳ್ಳನೋ, ದೇಶ ದ್ರೋಹಿಯೋ? ಅದಕ್ಕೆ ತಕ್ಕ ಹಾಗೆ ನನ್ನ ಕೊಡಲೀ ಪೆಟ್ಟು ಬೀಳುತ್ತದೆ. ಪೆಟ್ಟು ಮಾತ್ರ ಒಂದೇ ಒಂದು!" ಎಂದನು.

"ನೀನು ಹೇಳುವ ಎರಡೂ ನಾನಲ್ಲ. ನೀನು ಯಾವ ಜಾತಿಯ ಪಿಶಾಚಿ?" ಎಂದು ಕೇಳಿದ ಕಾಳೀ ವರ್ಮ. ಹಾಗೆಯೇ ಅವನ ಕೈಯಲ್ಲಿದ್ದ ಕಡಿವಾಣ ವನ್ನು ಎಳೆದುಕೊಳ್ಳಲು ಪ್ರಯತ್ನ ಮಾಡಿದ.

ಅಷ್ಟರಲ್ಲಿ ಸುತ್ತುಮುತ್ತಲೂ ಓಡಿದ ಆಶ್ವಿಕರು ಮತ್ತೆ ಸಮೀಪ ಬಂದು ಸೇರಿದರು. ಆಶ್ವಿಕರ ನಾಯಕನು ಕೋಪದಿಂದ ಕೋಣದವನನ್ನು ನೋಡಿ, "ಎಲೋ ಏನಿದು ನಿನ್ನ ಅಧಿಕಾರ ಪ್ರತಾಪ? ನಿನ್ನ ನ್ನೇನಾದರೂ ಪಿಶಾಚಿ ಹಿಡಿಯಿತೇ? ನಿನ್ನ ಕೊಡಲಿಗೆ ಕೆಲಸವಿಲ್ಲ. ಇವನು ಶಿರಚ್ಛೇದದವನಲ್ಲ. ಗಲ್ಲು ಶಿಕ್ಷೆಯವ! ಪ್ರಾಣ ಹೋದ ಮೇಲೆ ಶವವು ಭದ್ರ ವಾಗಿ ನಮ್ಮ ಕೈಗೆ ಬರಬೇಕು. ತಿಳಿಯಿತೇ? ಬಿಡು ಬಿಡು!" ಎಂದನು.

ಕೋಣದವನು ಕಡಿವಾಣವನ್ನು ಬಿಟ್ಟು "ಏನು ಕುದುರೇ ನಾಯಕರೇ! ನಿಮ್ಮ ನಗರದ ಪ್ರಧಾನ ಕಟುಕನಾದ ನನ್ನನ್ನು ಎಲೋ ಮಗನೇ ಅಂತ ಮರ್ಯಾದೆ ಇಲ್ಲದೆ ಕರೀತೀರಲ್ಲ! ನಮ್ಮ ಮಹಾ ರಾಜರು ಎಂದೋ ಒಂದು ದಿನ ನಿಮಗೂ ಶಿರಚ್ಛೇದ ಮಾಡಲು ನನ್ನ ಬಳಿಗೆ ಕಳುಹಿಸಬಹುದು. ನೆನಪಿಟ್ಟು ಕೊಳ್ಳುತ್ತೇನೆ. ಅಂಥಾ ದಿನ ಬಂದರೆ ನಿಮ್ಮ ತಲೇನ ನನ್ನ ಮೊಂಡು ಕೊಡಲಿಯಿಂದ ಒಣ ಮರ ಕಡಿಯು ವಂತೆ ಕಡಿದೇನು!" ಎಂದನು.

"ಛೀ! ಹುಳಿ ಹೆಂಡ ಕುಡುಕ ಭಂಡ! ಈ ಅವಮಾನ ಎಷ್ಟು ಮಾತ್ರಕ್ಕೂ ಸಹಿಸಲಾರೆ!" ಎಂದು ಆಶ್ವಿಕ ನಾಯಕನು ಗಟ್ಟಿಯಾಗಿ ಗರ್ಜಿಸಿ ಸರ್ರನೇ ಕತ್ತಿ ಹಿರಿದನು. ಅದೇ ಕ್ಷಣದಲ್ಲಿ ಕಾಳೀ ವರ್ಮನು ತನ್ನ ಕೈಗೆಟಕಿದ ಕಟುಕನ ಕೈಯಲ್ಲಿದ್ದ ಕೊಡಲಿಯನ್ನು ಕಿತ್ತೆಳೆದು ಆಶ್ವಿಕ ನಾಯಕನ ಕಂಠದ ಮೇಲೆ ಬೀಸಿದನು. ಇದೆಲ್ಲಾ ಕಣ್ಣು ಮುಚ್ಚಿ ಬಿಡಿಸುವುದರೊಳಗೆ ನಡೆದುಹೋಯಿತು.

ಆಶ್ವಿಕ ನಾಯಕನ ತಲೆ ಮುಂಡದಿಂದ ಬೇರಾಗಿ ಕೆಳಗೆ ಬಿದ್ದುರುಳಿದ ಶಬ್ದದೊಂದಿಗೆ, "ಭಳಿರೇ! ಆದಿ ಭಲ್ಲೂಕಾ! ಜಯಜಯ! ಧೈರ್ಯಶಾಲಿ ಯುವಕಾ! ಜಯಜಯ!" ಎಂಬ ಕೂಗು ಕೇಳಿಸಿತು.

(ಇನ್ನೂ ಇದೆ)





# ಕರಡಿಕೆಂಗಣ್ಣ

೩

[ಅರಣ್ಯಪ್ರಾಂತದ ಗ್ರಾಮಗಳಲ್ಲಿ ಸುಲಿಗೆ ಮಾಡುವವರನ್ನು ಕಾಳೀವರ್ಮನು ಓಡಿಸಿದರೆ, ಆ ಕಳ್ಳರು ನೆರೆದೇಶವನ್ನು ಸೇರಿದರು. ಆ ಕಳ್ಳರ ದೆಸೆಯಿಂದಾಗಿ ನೆರೆದೇಶದ ರಾಜನು ಶತ್ರುವಾದನು. ಅದಕ್ಕೆ ಹೆದರಿದ ಜಿತಕೇತುರಾಜ ಕಾಳೀವರ್ಮನಿಗೆ ಮರಣಶಿಕ್ಷೆ ಕೊಟ್ಟ. ಕಾಳೀವರ್ಮ ಕಟುಕನಾಯಕನ ಕೊಡಲಿಯನ್ನು ಸೆಳೆದು ಆಶ್ವಿಕನಾಯಕನ ತಲೆ ಕಡಿದ. ಆ ಕ್ಷಣದಲ್ಲಿ ಆದಿಭಲ್ಲೂಕನಾಯಕನ ಜಯಜಯಾಕಾರ ಕೇಳಿಸಿತು.]

ವಿಚಿತ್ರವಾದ 'ಆದಿಭಲ್ಲೂಕ' ಎಂಬ ಜಯಕಾರವು ಕಿವಿಗಳಲ್ಲಿ ಮಾರ್ಮೊಳಗಿದಾಗ, ಆಶ್ವಿಕರೆಲ್ಲಾ ಇದೇನು ಹೊಸ ಆಪತ್ತೋ ಎಂದುಕೊಂಡು ಆ ಶಬ್ದ ಬರುವ ಕಡೆಗೆ ತಲೆ ತಿರುಗಿಸಿ ನೋಡಿದರು.

ಇದೀಗ ಕಾಳೀವರ್ಮ ಇದಿರು ನೋಡುತ್ತಿರುವ ಒಳ್ಳೆಯ ಸಮಯ. ಅವನು ತಟ್ಟನೆ ಕುದುರೆಯಿಂದಿಳಿದು ಆಶ್ವಿಕನಾಯಕನ ಹತ್ತಿರವಿದ್ದ ತನ್ನ ಕತ್ತಿಯನ್ನು ತಟ್ಟನೆತ್ತಿಕೊಂಡು ತನ್ನ ಒರೆಗೆ ಸೇರಿಸಿಕೊಂಡುದು ಯಾರಿಗೂ ಗೊತ್ತಾಗಲಿಲ್ಲ. ಎಲ್ಲರೂ ಭಯಕಂಪಿತ ನೋಟದಿಂದ ಆ ಹೊಸ ಗರ್ಜನೆಯ ಕಡೆಗೇ ನೋಡುತ್ತಿದ್ದಾರೆ. ಕಾಳೀವರ್ಮನಿಗೆ ಓಡಲು ಇದೊಳ್ಳೇ ಸಮಯವಾದರೂ ಆ ಹೊಸ ಶಬ್ದ ಅವನನ್ನೂ ಆಕರ್ಷಿಸಿ ನಿಲ್ಲಿಸಿಬಿಟ್ಟಿತ್ತು.

ಗುಡ್ಡದ ಇಳಿಜಾರಿನಲ್ಲಿ ಧುಮುಕುತ್ತಿರುವ ಜಲಪಾತದ ಹಿಂದಿನಿಂದ ಅಜಾನುಬಾಹುವಾದೊಂದು ವ್ಯಕ್ತಿ ಈಕಡೆಗೇ ಬರುತ್ತಿದೆ! ರಕ್ಕಸನಂತೆ ಕಾಣುವ ಆ ಮನುಷ್ಯಾಕೃತಿ ಯಾರದೋ? ಈ ಮೊದಲು ಅಲ್ಲಿನವರಾರೂ ಅವನನ್ನು ಕಂಡಂತಿಲ್ಲ. ಆ ಶಿರೀಷವನದಲ್ಲಿರುವ ಪ್ರಧಾನ ಕಟುಕನಿಗೂ ಅವನು ಅಪರಿಚಿತನಾಗಿದ್ದಾನೆಂದು ಅವನ ನೋಟದಿಂದಲೇ ತಿಳಿಯು



ತ್ತಿತ್ತು. ಯಾರು ಆ ಹೊಸಬ ? ಏಕೆ ಬರುತ್ತಾನೆ ? "ಅವನಾವನೋ ಮಾಯಾ ಮಾಂತ್ರಿಕನಾಗಿರಬೇಕು. ಅವನು ಯಾರಾದರೆ ನನಗೇನು ? ತಪ್ಪಿಸಿಕೊಳ್ಳುವುದೀಗ ಮುಖ್ಯ" ಎಂದುಕೊಂಡು ಕಾಳೀವರ್ಮ ತಪ್ಪಿಸಿಕೊಳ್ಳುವ ಮಾರ್ಗ ಹುಡುಕಿದನು. ತಾನು ಹೋಗುವ ದಾರಿಗೆ ಅಡ್ಡವಾಗಿ ಆಶ್ವಿಕರು ಬಂದು ತಡೆಯಬಹುದೇನೋ ಎಂದು ಅವರ ದೃಷ್ಟಿಯನ್ನು ಪರೀಕ್ಷಿಸಿದನು. ಅವರಲ್ಲೊಬ್ಬನ ದೃಷ್ಟಿಯೂ ತನ್ನ ಮೇಲಿಲ್ಲವೆಂದು ಗೊತ್ತಾಯಿತು. ಎಲ್ಲರೂ ಜಲಪಾತದ ದಿಕ್ಕನ್ನೇ ಭಯಾಶ್ಚರ್ಯಗಳಿಂದ ನೋಡುತ್ತಿದ್ದಾರೆ.

ಆ ದೀರ್ಘಕಾಯನು ಜಲಪಾತದ ಮುಂದೆ ಬಂದು, ಮೊಣಕಾಲಿನಷ್ಟು ನೀರಿನ ಪಾಯವನ್ನು ದಾಟಿ ಈಚೆಗೆ ಬಂದು ಮುಂದೆ ಬರತೊಡಗಿದನು. ತುಂಬ ಬಲಶಾಲಿಯಂತೆ. ತನ್ನ ಬಲದಲ್ಲಿ ಅಪಾರ ನಂಬುಗೆಯುಳ್ಳವನಂತೆ ಕಾಣುತ್ತಿದ್ದನು. ಅವನ ಕಣ್ಣುಗಳು ಕೆಂಪಗೆ ಕೆಂಡಗಳಂತಿದ್ದುವು. ಅವನು ಧರಿಸಿದ್ದು ಬಟ್ಟೆಯೋ ಅಲ್ಲ. ಕರ್ರಗಿನ ರೋಮಮಯವಾಗ ಕರಡಿಯ ಚರ್ಮ. ಕೈಯಲ್ಲಿ ದೃಢವಾದೊಂದು ದಂಡವಿದೆ. ಕತ್ತಿ, ಗದೆ, ಶೂಲಗಳ ಕೆಲಸವನ್ನೆಲ್ಲ ಆ ದಂಡವೇ ಮಾಡಬಲ್ಲುದೇನೋ ! ಅದರ ಹಿಡಿಯಲ್ಲಿರುವ ಕರಡಿ ಮುಖದಲ್ಲಿ ಉಜ್ವಲವಾದೊಂದು ವಜ್ರ ಜಗಜಗಿಸುತ್ತಿತ್ತು. ದಂಡದ ಕರಡಿಮುಖದ ಬಾಯಿಯೂ ತೆರೆದು ಮುಚ್ಚುವ ಚಲನೆ ಭಯಂಕರವಾಗಿತ್ತು.

ಕಾಳೀವರ್ಮನು ಧೈರ್ಯದಿಂದ ತನ್ನ ಹತ್ತಿರವಿರುವ ಭೀತಾವಹರನು ಲಕ್ಷ್ಯಮಾಡದೆ ಈ ಕಡೆಯೇ ಬರುವ ಆ ವಿಚಿತ್ರವೇಷದವನ ಸಮಾಚಾರವೇನೆಂದು ತಿಳಿಯುವ ಕುತೂಹಲದಿಂದ ಸುಮ್ಮನೆ ನಿಂತನು. ಅವನು ಸಮೀಪ ಬರುತ್ತಿದ್ದಂತೆ ಉಳಿದವರೆಲ್ಲ ಕೈಕಾಲಿನ ಬಲವನ್ನೇ ಹೋಗಲಾಡಿಸಿಕೊಂಡವರಂತೆ, ಅವನ ಮಂತ್ರಶಕ್ತಿಗೊಳಗಾದವರಂತೆ ನಿಂತಿದ್ದರು. ತನಗೂ ಅಂತಹುದೇನಾದರೂ ಬಡಿದಿದೆಯೋ ನೋಡಿಕೊಂಡು, ಇಲ್ಲವೆಂದು ಮುಗುಳುನಕ್ಕು ಧೈರ್ಯಗೊಂಡನು ಕಾಳೀವರ್ಮ.

ಕರಡಿ ಚರ್ಮದವನು ಹತ್ತಿರ ಬಂದು, "ಬಂದುಬಿಟ್ಟೆ. ನಾನು ಸಮಯಕ್ಕೆ ಸರಿಯಾಗಿ ಆದಿಭಲ್ಲೂಕನ ನಾಮ ಘೋಷ ಮಾಡದಿರುತ್ತಿದ್ದರೆ ಇಲ್ಲಿ ಇನ್ನಿಷ್ಟು ರಕ್ತಪಾತವಾಗಿ ಬಿಡುತ್ತಿತ್ತು. ನಾನು ಯಾರೆಂಬುದು ನಿಮಗೆ ಗೊತ್ತಿಲ್ಲ. ನನ್ನ ಹೆಸರು ಕರಡಿಕೆಂಗಣ್ಣ. ಮಾಂತ್ರಿಕ ಕಲೆ ನನಗೆ ಕರತಲಾಮಲಕ. ಆದ್ದರಿಂದ ಎಲ್ಲರೂ ಜಾಗ್ರತೆಯಾಗಿರಿ" ಎಂದನು.

ಒಂದು ನಿಮಿಷ ಯಾರೂ ಮಾತಾಡಲಿಲ್ಲ. ಕಾಳೀವರ್ಮನು ಬಲಗೈಯಲ್ಲಿ ಕತ್ತಿಯನ್ನೂ, ಎಡಗೈಯಲ್ಲಿ ಕಟುಕನಿಂದ ಎಳೆದುಕೊಂಡ ಕೊಡಲಿಯನ್ನೂ ಮೇಲೆತ್ತಿ ಹಿಡಿದು ಕರಡಿಕೆಂಗಣ್ಣನೊಂದಿಗೆ, "ಬಹಳ ಒಳ್ಳೆಯ ಮಾತು ಹೇಳಿದಿರಿ ! ಮಹಾನುಭಾವರೇ !

ಕೇಳುವ ಶ್ರಮವನ್ನೇ ಕೊಡದೆ ನಿಮ್ಮ ಯೋಗ್ಯತೆ ಕೂಡಾ ಒಂದೇ ಮಾತಿನಲ್ಲಿ ಹೇಳಿದಿರಿ. ನೀವು ಹೇಳಿದಂತೆ ಸ್ವಲ್ಪದರಲ್ಲಿ ಇನ್ನಿಷ್ಟು ರಕ್ತಪಾತ ತಪ್ಪಿತು. ಈಗ ನನ್ನ ದಾರಿಗೆ ಯಾರಾದರೂ ಅಡ್ಡ ಬಂದರೆ ಇನ್ನಿಷ್ಟು ತಲೆಗಳು ನೆಲಕ್ಕೆ ಬೀಳಲಿವೆ! ಜಾಗ್ರತೆ!" ಎಂದವನೇ ತನ್ನ ಕುದುರೆಯನ್ನು ತಟ್ಟಿ ಮುಂದಕ್ಕೆ ಹೊರಡಿಸಿದನು.

"ಧೈರ್ಯಶಾಲಿ ನೀನು! ಸ್ವಲ್ಪ ನಿಲ್ಲು" ಎಂದು ಕರಡಿಕೆಂಗಣ್ಣನು ತನ್ನ ಮಂತ್ರದಂಡದಿಂದ ಕೋಣನ ಮೇಲೆ ಮರಗಟ್ಟಿ ಕುಳಿತಿದ್ದ ಕಟುಕ ನಾಯಕನನ್ನು ಮೆಲ್ಲನೆ ತಿವಿದು, "ಲೋ, ಮುಸುಗಿನೊಳಗಿರುವವನೇ? ನೀನು ಈ ಶಿರೀಷವನದ ಪಿಶಾಚಿಯೋ ಅಲ್ಲ ಸಾಕ್ಷಾತ್‌ಯಮನೋ. ಅಥವಾ ರಾಜನಿಂದ ನಿಯಮಿಸಲ್ಪಟ್ಟ ಪ್ರಧಾನ ಕಟುಕಮನುಷ್ಯನೋ? ಯಾರು ನೀನು? ಸತ್ಯಬೊಗಳು" ಎಂದು ಕೇಳಿದನು.

"ನಾನು ಪಿಶಾಚಿಯಲ್ಲ ಸ್ವಾಮೀರಾ! ಸಾಧಾರಣ ಮನುಷ್ಯನೇ. ಸತ್ಯಪ್ರಮಾಣಕ್ಕೂ ಮಹಾರಾಜರ ಪ್ರಧಾನ ಕಟುಕ. ಶಿಕ್ಷಿಸಲ್ಪಟ್ಟವರ ತಲೆಕಡಿಯುವುದೇ ನನ್ನ ಕೆಲಸ" ಎಂದನು.

ಇಷ್ಟರಲ್ಲಿ ಕೆಂಗಣ್ಣ ಮಾಂತ್ರಿಕನ ವೇಷ ನೋಡಿ ಹೆದರಿ ಓಡಲು ಪ್ರಯತ್ನಿಸುವ ತನ್ನ ಕೋಣವನ್ನು ತಟ್ಟಿ ಪೂಸಿ ನಿಲ್ಲಿಸಿದನು.

"ಹಾಗಾದರೆ ನೀನೀಗ ಒಂದು ಸಮಸ್ಯೆಗೆ ಬಿದ್ದಿರುವಿ ಎಂದಾಯಿತು. ಶಿರಚ್ಛೇದ ಶಿಕ್ಷೆಯನ್ನು ತಪ್ಪಿಸಿಕೊಂಡದ್ದು ಮಾತ್ರವಲ್ಲದೆ, ಒಬ್ಬ ರಾಜಸೇವಕನ ತಲೆಯನ್ನು ಕೂಡಾ ಕಡಿದು ಓಡಿಹೋಗಲು ನೋಡುವ ಈ ಆರೋಪಿಯನ್ನು ಏನು ಮಾಡಬೇಕೆಂದಿರುವಿ? ಸುಮ್ಮನೆ ನೋಡುತ್ತ ನಿಂತಿರುವಿಯಲ್ಲಾ?" ಎಂದು ಕೇಳಿದ ಕರಡಿಕೆಂಗಣ್ಣ.

"ಅಯ್ಯಾ, ನಾನೀಗ ನಿರಾಯುಧನಾಗಿದ್ದೇನೆ. ನನ್ನ ಕೊಡಲಿಯನ್ನು ಈ ಆರೋಪಿ ಬಲವಂತವಾಗಿ ಕಿತ್ತು



ಕೊಂಡಿದ್ದಾನೆ. ಅದೊಂದು ನನ್ನ ಕೈಯಲ್ಲಿದ್ದರೆ..." ಎನ್ನುತ್ತಿರಲು, ಕಾಳೀವರ್ಮನು "ಇಕೋ, ಇನ್ನಾದರೂ ಕೊಡಲಿ ಗಟ್ಟಿಯಾಗಿ ಹಿಡಿದುಕೋ!" ಎಂದು ಕೊಡಲಿಯನ್ನು ಅವನ ಕಡೆಗೆ ಚಾಚಿದನು.

ಈ ಮಾಂತ್ರಿಕನು ತನ್ನ ಮೇಲೆ ಆಶ್ವಿಕರನ್ನೂ ಕಟುಕನನ್ನೂ ಹುರುಡಿಸಿಬಿಡುವನೆಂದು ಕಾಳೀವರ್ಮನಿಗೆ ತೋರಿತು. "ಎಲೋ ಮುಸುಗುಪಿಶಾಚಿ ಕಟುಕಾ. ತೊಡೆನಡುಕಾ! ತಕೋ ನಿನ್ನ ಕೊಡಲಿ! ನನ್ನನ್ನು ಅಡ್ಡಗಟ್ಟಲು ಸಾಧ್ಯವೋ ನೋಡು. ಬಾಯಿಯಲ್ಲಿ ಮಾತಾಡಿದ ಹಾಗಲ್ಲ, ಬಾ ಮುಂದೆ!" ಎಂದ ಕಾಳೀವರ್ಮ.

ಆದರೆ ಕಟುಕನು ಕೆರಳಿ ಏಳುವುದಕ್ಕೆ ಬದಲಾಗಿ, ತನ್ನ ಮುಸುಗು ತೆಗೆದು ದೂರ ಬಿಸುಟು, ತಡಬಡಿಸುವ ಕಂಠದಿಂದ "ಕಾಳೀವರ್ಮಾ, ನೀನು ಮಹಾಶೂರನು. ಶಿರೀಷ ವನದ ಭೈರವನ ಸಾಕ್ಷಿಯಾಗಿ ಹೇಳುತ್ತೇನೆ. ನನ್ನ ಅಹಂಕಾರ ಜರ್ರನೆ ಇಳಿದು



ಹೋಯಿತು. ನಾನು ಕೇವಲ ದಾಸಾನುದಾಸನಾದ ಕೊಲೆಗಡುಕ, ಅಷ್ಟೇ." ಎಂದು ಕೈ ಮುಗಿದನು.

"ಅಹಂಕಾರದೊಂದಿಗೆ ಕುಡಿದ ಮಯಕವೂ ಬಿಟ್ಟು ಹೋಗಿರಬೇಕು. ಸರಿಸರಿ, ಇನ್ನು ದಾರಿ ಬಿಡು" ಎಂದು ಕಾಳೀವರ್ಮ, ಸ್ವಲ್ಪ ದೂರದಲ್ಲಿರುವ ಆಶ್ವಿಕರನ್ನು ನೋಡಿ, "ನಿಮ್ಮ ಸಮಾಚಾರವೇನು ? ಮಹಾವೀರರಾದ ಯೋಧರಲ್ಲವೇ ನೀವು ? ನಿಮ್ಮ ನಾಯಕನು ಹಿಡಿದ ದಾರಿಯನ್ನು ನೋಡಿದಿರಷ್ಟೆ? ಆ ದಾರಿಯಲ್ಲೇ ಹೋಗುವವರಾದರೆ, ನನ್ನನ್ನು ತಡೆಯಿರಿ ! ಬನ್ನಿ ಮುಂದೆ !" ಎಂದನು.

"ಇಲ್ಲಿ ನಡೆದುದನ್ನು ಕಣ್ಣಾರೆ ನೋಡಿದೆವು. ಮರಣ ಶಿಕ್ಷೆ ಅನುಭವಿಸಬೇಕಾದವರಲ್ಲಿ ಒಬ್ಬರು ಸತ್ತರು. ಎರಡನೆಯವನು ಶರಣಾಗತನಾದ. ಈ ಸಂಗತಿಯನ್ನೆಲ್ಲಾ ಮಹಾರಾಜರಿಗೆ ಅರಿಕೆ ಮಾಡುವುದಷ್ಟೇ ನಮ್ಮ ಕೆಲಸ. ಬೇಕಂತ ಆಪತ್ತಿನೆಡೆಗೆ ಕೊರಳೊಡ್ಡುವಂಥ ಮೂರ್ಖರಲ್ಲ ನಾವು. ಗರ್ವವೂ ಅಧಿಕಾರವೂ ನಮಗಿಲ್ಲ." ಎಂದರು ಆಶ್ವಿಕರು.

"ಬುದ್ಧಿವಂತರೇ ನಿಜ!" ಎಂದು ಕಾಳೀವರ್ಮನು ಕುದುರೆಯ ಬೆನ್ನನ್ನು ಚಪ್ಪರಿಸಿ, ತಪ್ಪಿಸಿಕೊಳ್ಳಲು ಸಿದ್ಧನಾದನು. ಆಗ ಕರಡಿ ಕೆಂಗಣ್ಣನು "ಆಹಾ! ಭಲ್ಲೂಕ ಪಾದಗುರುಗಳೇ! ನಮಗೆ ಬೇಕಾದ ಜಾತಕದವನು ಸಿಕ್ಕಿದನು." ಎಂದು ಗಟ್ಟಿಯಾಗಿ ತನಗೆತಾನೇ ಕೂಗಿ, ಕಾಳೀವರ್ಮನ ಕುದುರೆಯ ಕಡಿವಾಣವನ್ನು ಹಿಡಿದು ನಿಲ್ಲಿಸಿ, "ಕಾಳೀವರ್ಮ, ಇಲ್ಲಿ ಅಡ್ಡಗುಡ್ಡದ ಹಾಗೆ ಮಹಾಮಾಂತ್ರಿಕನಾದ ಈ ಕರಡಿಕೆಂಗಣ್ಣನಿರುವ ಸಮಾಚಾರವನ್ನು ಮರೆತೆಯೇನು ?" ಎಂದು ತಡೆದನು.

ಕಾಳೀವರ್ಮನಿಗೆ ಚಿಕ್ಕಂದಿನಿಂದಲೂ ಮಂತ್ರ, ಮಾಯೆ, ಭೂತ ವೈದ್ಯ ಮುಂತಾದವುಗಳಲ್ಲಿ ನಂಬಿಗೆ ಇರಲಿಲ್ಲ. ಅವರಲ್ಲಿ ಗೌರವವೂ ಅವನಿಗಿಲ್ಲ. ಅಂತಹ ಎಷ್ಟೋ ಮಂದಿಯನ್ನು ಅವನು ತನ್ನ ಗ್ರಾಮದಲ್ಲಿಯೇ ನೋಡಿದ್ದನು. ಅದೆಲ್ಲ ಮೂಢನಂಬುಗೆಯ ಕುರುಡುತನವೆಂದೇ ತೀರ್ಮಾನಿಸಿಕೊಂಡಿದ್ದನು.

ಕರಡಿಕೆಂಗಣ್ಣನ ಮಾತು ಕೇಳಿ, ಅವನು ತನ್ನನ್ನು ತುಚ್ಛೀಕಾರ ಮಾಡುವನೆಂದುಕೊಂಡು ಕೋಪದಿಂದ, "ನಿಮ್ಮ ಹೆಸರೇನಂದಿರಿ ? ಕರಡಿಕೆಂಗಣ್ಣ! ಅದರ ಮೇಲೆ ಮಹಾಮಾಂತ್ರಿಕರು! ಯಾರೋ ಭಲ್ಲೂಕ ಪಾದರೆಂಬ ಗುರುಗಳೂ ನಿಮಗಿದ್ದಾರೆ. ಅವರಾರೋ? ಎಲ್ಲಿದ್ದಾರೋ? ಅವರೂ ನಿಮ್ಮ ಹಾಗೇ ಕರಡಿ ಚರ್ಮದೊಳಗಿನವರೇ ಏನು ? ಹಾಗಿದ್ದರೆ ನಿಮಿಬ್ಬರ ಗುರುತು ಹಿಡಿಯಲು ನಮ್ಮಂಥವರಿಗೆ ಬಹಳ ಕಷ್ಟ!" ಎಂದನು.

ಕಾಳೀವರ್ಮನು ತನ್ನ ಹೆಸರನ್ನು ಅಪಹಾಸ್ಯ ಮಾಡಿ ಮಾತಾಡಿದರೂ ಕರಡಿಕೆಂಕಣ್ಣನು ಸಿಟ್ಟಾಗದೆ, ಮುಗುಳು ನಗು ಸೂಸುತ್ತ, "ನನ್ನ ಗುರುಗಳ ಹೆಸರು ಭಲ್ಲೂಕಪಾದರು. ನಮ್ಮಿಬ್ಬರನ್ನು ನೋಡಿದರೆ ನಿನಗೆ ಯಾವ ಗಜಿಬಿಜಿಯೂ ಆಗದು.

ನೋಡುವೆಯಂತೆ. ಇನ್ನು ಮುಂದೆ ನಡೆಯುವ ಮಹಾ ಮಹಾ ಅದ್ಭುತಗಳನ್ನು ನೋಡಿ ತುಂಬಾ ಆನಂದಪಡುವ ಸಂದರ್ಭವು ನಿನಗಿದೆ. ಏಕೆಂದರೆ ನಿನ್ನಂಥವನು ನನ್ನ ಕಣ್ಣಿಗೆ ಬಿದ್ದ ಮೇಲೆ ಉಪಯೋಗಿಸಿಕೊಳ್ಳದೆ ಬಿಡುವೆನೆಂದುಕೊಂಡೆಯಾ ?" ಎಂದನು.

"ಗಜಿಬಿಜಿ ಇರಲಿ, ಬಿಡಲಿ, ನನಗೇನು ಬೇಕಾಗಿದೆ ? ನನ್ನನ್ನು ಇಷ್ಟಪ್ರಕಾರ ಹಿಡಿಯಲೂ ಬಿಡಲೂ ಆಟದ ಕಾಯಿ ಎಂದುಕೊಂಡಿರಾ ? ಮನೆ ಬಿಟ್ಟ ಮೇಲೆ ಇಲ್ಲಿಯ ವರೆಗೆ ನಡೆದ ಅದ್ಭುತಗಳನ್ನು ನೋಡಿ ನೋಡಿ ಸಾಕಾಯಿತು. ಇನ್ನು ಬೇಗನೇ ನನ್ನ ಹಳ್ಳಿಗೆ ಹೋಗಿ ಬೇಸಾಯದ ಬದುಕೇ ಬದುಕುವುದು ಸಾಕೆನಿಸುತ್ತದೆ." ಎಂದು ಕಾಳೀವರ್ಮನು ಕೊಡಲಿಯನ್ನು ಕಟುಕನ ಕಡೆಗೆ ಒಗೆದು, ಕುದುರೆಯನ್ನು ಹೊರಡಿಸಿದನು.

ಕುದುರೆ ಸ್ವಲ್ಪ ಮಾತ್ರ ಮುಂದೆ ಹೋಗಿರಬಹುದು. ಕರಡಿಕೆಂಗಣ್ಣನು ಗಟ್ಟಿಯಾಗಿ ಅವನನ್ನು ಕುರಿತು, "ನಿಲ್ಲು! ಕಾಳೀವರ್ಮಾ! ಮುಂದೆ ನೋಡು! ನಿನ್ನ ಇದಿರಾಗಿ ಬರುವವರು ಯಾರೆಂಬುದನ್ನು ಗಮನಿಸಿದೆಯಾ ?" ಎಂದನು.

ಈ ಎಚ್ಚರಿಕೆಯನ್ನು ಕೇಳಿ ಕಾಳೀವರ್ಮನು ಮುಂದೆ ನೋಡಿದನು. ದಪ್ಪವಾದೊಂದು ಶಿರೀಷ ವೃಕ್ಷದ ಹಿಂದಿನಿಂದ ಮೂವರು ಆಶ್ವಿಕರು ವೇಗವಾಗಿ ಬರುತ್ತಿದ್ದರು. ಅವರಲ್ಲಿ ಮಧ್ಯದಲ್ಲಿರುವವನು ಪಟ್ಟೆಬಟ್ಟೆಗಳ ಪೋಷಾಕು ಧರಿಸಿದ್ದನು. ತಲೆಯಲ್ಲಿ ದೊಡ್ಡ ಅಧಿಕಾರೀ ರುಮಾಲಿದ್ದಿತು. ಉಳಿದಿಬ್ಬರು ಕವಚಧಾರಿಗಳು. ಅವರ ಕೈಗಳಲ್ಲಿ ಕತ್ತಿಗಳೂ, ತೋಳುಗಳಲ್ಲಿ ಢಾಲುಗಳೂ ಇದ್ದುವು.

ಅವರನ್ನು ನೋಡಿದ ಕೂಡಲೇ ಕಾಳೀವರ್ಮನು ಕುದುರೆಯನ್ನು ನಿಲ್ಲಿಸಿ, ಅವರನ್ನೇ ದುರುಗುಟ್ಟಿ ನೋಡತೊಡಗಿದನು. ಹಾಗೆ ಬರುವವರಲ್ಲಿ ಪಟ್ಟೇ



ಪೋಷಾಕಿನವನು, ಕಾಳೀವರ್ಮನ ಕಡೆಗೆ ಬೆರಳು ತೋರಿಸಿ, ಪ್ರಧಾನ ಕಟುಕನನ್ನು ನೋಡಿ, "ಎಲೋ ಕಟುಕನಾಯಕಾ, ಇವನ ಮರಣಶಿಕ್ಷೆ ಇನ್ನೂ ನೆರವೇರಿಸಲಿಲ್ಲವೇ ? ಬೇಗನೇ ಇವನ ಶವವನ್ನು ಕೊಂಡೊಯ್ಯಬೇಕೆಂದು ನಾವು ಬಂದರೆ, ಅವನನ್ನು ಹೀಗೆ ಬಿಟ್ಟುದರ ಅರ್ಥವೇನು ? ಏನಾಯಿತು ನಿನಗೆ? ಅರೆ ! ಏನಿದೆಲ್ಲಾ ?" ಎಂದನು ಕೋಪದಿಂದ.

ಕಟುಕನು ಗಡಗಡ ನಡುಗುತ್ತ, ಕೋಣದ ಮೇಲಿನಿಂದ ಇಳಿದು, ಏನು ಹೇಳಬೇಕೆಂದು ತಿಳಿಯದೆ ನಾಲಗೆ ತಡವುತ್ತಿರಲು, ಕರಡಿಕೆಂಗಣ್ಣನು ಆ ಮೂವರು ಹೊಸ ಆಶ್ವಿಕರ ಬದಿಗೆ ತಿರುಗಿ, ಪಟ್ಟೆ ಪೋಷಾಕಿನವನನ್ನು ಕುರಿತು, "ಸ್ವಲ್ಪ ಶಾಂತನಾಗು. ದೊಡ್ಡ ಮನುಷ್ಯನಂತಿರುವೆ ! ನೀನು ಜಿತಕೇತು ಮಹಾರಾಜರ ಪ್ರಧಾನಾಮಾತ್ಯ ತಾನೇ ? ಜೀವಗುಪ್ತನೆಂಬುದು ನಿನ್ನ ಹೆಸರು ಹೌದಾ ? ನನ್ನ ಮಾತು ನಿಜತಾನೇ ?" ಎಂದನು.



ರಾಜನ ಮೇಲೆ ಒಂದಿಷ್ಟೂ ಗೌರವಭಾವವಿಲ್ಲದೆ, ತನ್ನನು ಕೂಡ ಹೀನಭಾವದಿಂದ ನೋಡಿ ಪ್ರಶ್ನಿಸುವ, ಈ ವಿಕಾರರೂಪದವನು, ಯಾವನೋ ಕಪಟಿ ಬೈರಾಗಿಯಾಗಿರಬೇಕೆಂದೆಣಿಸಿ ಜೀವಗುಪ್ತನು ಕೋಪದಿಂದ ಕಣ್ಣು ತಿರುಗಿಸುತ್ತ, "ಯಾವನಿವನು ಹಾಳು ಬೈರಾಗಿ ? ಬುದ್ಧಿ ಬೇರೆ ಕೆಟ್ಟ ಹಾಗಿದೆ ! ಛಿ ! ಛಿ ! ತಮಾಶೆ ನೋಡುತ್ತ ಬೊಂಬೆಗಳ ಹಾಗೆ ನಿಂತಿರುವಿರಲ್ಲಾ ! ಮೊದಲು ಇವನನ್ನು ಇಲ್ಲಿಂದ ಒದ್ದೋಡಿಸಿರಿ !" ಎಂದನು ಅಧಿಕಾರವಾಣಿಯಿಂದ.

ಅದನ್ನು ಕೇಳಿ ಅವನೊಂದಿಗೆ ಬಂದ ಇಬ್ಬರು ಆಶ್ರಿತರು, ಕತ್ತಿಗೆ ಕೈಹಾಕಿ, ಹಾಗೆಯೇ ತಟಸ್ಥರಾದರು. ಕೆಂಗಣ್ಣನ ನಗುವೂ, ಅವನ ಕೈಯಲ್ಲಿದ್ದ ಮಂತ್ರದಂಡವೂ ಅವರನ್ನು ಬೆರಗುಂಪಡಿಸಿತ್ತು. ಅವರ ಕುದುರೆಗಳು ಕೂಡಾ ಹೆದರಿ ಹೀಂಕರಿಸುತ್ತ ಓಡುವ ತವಕದಲ್ಲಿ ನಾಲ್ಕಡಿ ಹಿಂದಿಟ್ಟುವು. ಏನಾಯಿತೆಂಬುದು ಅರ್ಥವಾಗದ ಜೀವಗುಪ್ತನು ಆಶ್ಚರ್ಯದಿಂದ ತನ ಅಂಗರಕ್ಷಕರನ್ನು ದುರುಗುಟ್ಟಿ ನೋಡಿ, "ಏನಾಯಿತು ? ಹುಲಿಯನ್ನು ನೋಡಿದವರ ಹಾಗೆ ಮರಗಟ್ಟಿ ಹೋಗಿರುವಿರಲ್ಲಾ ?" ಎಂದು ಕೇಳಿದನು.

"ಅಯ್ಯಾ, ಹುಲಿಯಲ್ಲ. ಆ ಬೈರಾಗಿಯ ಕೈಯಲ್ಲಿರುವ ದಂಡದ ಹಿಡಿಗೆ ಬಿಗಿದಿರುವ ಕರಡಿಯ ತಲೆಯನ್ನು ನೋಡಿರಿ ! ಅದು ಮುಚ್ಚಿದ ಬಾಯಿಯನ್ನು ತೆರೆದು ಕೋರೆ ಹಲ್ಲುಗಳನ್ನು ತೋರಿಸಿತು ! ಕಣ್ಣುಗಳಿಂದ ಬೆಂಕಿಯ ಕಿಡಿಗಳು ಹಾರಿದುವು ! ಅವನ ಮೇಲೆ ನಾವು ದುಡುಕಿಬಿಟ್ಟರೆ ಒಂದಕ್ಕೊಂದು ಆದೀತೇನೋ !" ಎಂದರು ಆಶ್ರಿತರು.

ಜೀವಗುಪ್ತನು ಕರಡಿಕೆಂಗಣ್ಣನ ದಂಡವನ್ನು ನೋಡಿ, "ಏನೋ ಬೈರಾಗೀ, ನಿನ್ನ ಮಾತು, ರೀತಿ, ಚೇಷ್ಟೆಗಳನ್ನು ನೋಡುವಾಗ, ತುಂಬ ಗರ್ವಿಷ್ಠನಂತೆ ಕಾಣುವೆ. ಏನಾದರೂ ಮೋಡೀಮಾಯೆ ಕಲಿತಿರುವೆಯೋ ? ನೀನು ಇಲ್ಲಿಗೆ ಬಂದ ಉದ್ದೇಶವಾದರೂ ಏನದು ?" ಎಂದು ಕೇಳಿದನು.

ಕರಡಿಕೆಂಗಣ್ಣನು ಜೀವಗುಪ್ತನನ್ನು ತೀಕ್ಷ್ಣದೃಷ್ಟಿಯಿಂದ ನೋಡುತ್ತ–"ಓತೀಕಾಟವು ಬಲಿತು ಊಸರವಳ್ಳಿಯಾಗುತ್ತಂತೆ. ಸನ್ಯಾಸಿ ಬೆಳೆದು ಬೈರಾಗಿಯಾಗುತ್ತಾನಂತೆ. ಯಾರಿಗೆ ಬೇಕು ಅಂಥಾ ಗತಿ ? ನಾನು ಸನ್ಯಾಸಿಯೂ ಅಲ್ಲ, ಬೈರಾಗಿಯೂ ಅಲ್ಲ. ಮಹಾಮಾಂತ್ರಿಕ ಕರಡೀಕೆಂಗಣ್ಣ ! ಜೈ ಆದಿಭಲ್ಲೂಕ ಗುರುಪಾದಾ ! ನೋಡಿರಿ, ನಾನು ಎಂಥವನೆಂದು !" ಎಂದು ಕೂಗಿ ಹೇಳಿ, ಮಂತ್ರದಂಡದಿಂದ ಬದಿಯಲ್ಲಿದ್ದ ಬಂದು ಒಣಮರದ ಕಾಂಡವನ್ನು ಗಟ್ಟಿಯಾಗಿ ಹೊಡೆದನು.

ಆ ಹೊಡೆತಕ್ಕೆ ಮರದ ಕಾಂಡದೊಳಗಿನಿಂದ ಛಟ್‌ಛಟ್ ಧ್ವನಿಯಿಂದ ಬೆಂಕಿಯ ಕಿಡಿಗಳೆದ್ದು ನೋಡ ನೋಡುತ್ತಿದ್ದಂತೆ ಇಡಿಯಮರವೇ ಸುಟ್ಟು ಹೋಗತೊಡಗಿತು. ಮಂತ್ರಿ ಜೀವಗುಪ್ತನ ಕುದರೆ



ಹಿಂದಿನ ಕಾಲುಗಳಲ್ಲಿ ನಿಂತು ಕುಣಿಯುತ್ತ ಬಹು ದೂರ ಓಡಿತು. ಅವನ ಅಂಗರಕ್ಷಕರಿಬ್ಬರು ಭಯ ಕಂಪಿತರಾಗಿ ತಮ್ಮ ಕುದುರೆಗಳನ್ನು ಮಂತ್ರಿಯ ಹಿಂದೆಯೇ ಓಡಿಸಿದರು.

ಒಂದೆರಡು ನಿಮಿಷಗಳವರೆಗೆ ಯಾರ ಬಾಯಿಯಲ್ಲಿಯೂ ಮಾತು ಹೊರಡಲಿಲ್ಲ. ತುಸುದೂರದಲ್ಲಿದ್ದು ಇದನೆಲ್ಲಾ ಗಮನಿಸಿಕೊಂಡಿದ್ದ ಕಾಳೀವರ್ಮನು ತನ್ನ ಕುದುರೆಯನು ಕರಡಿಕೆಂಗಣ್ಣನ ಹತ್ತಿರ ನಡೆಯಿಸಿ, ಕುದುರೆಯಿಂದಿಳಿದು. "ಆಹ! ನೀವು ಸಾಧಾರಣ ಮೋಡಿಮಾಯೆಯ ಇಂದ್ರಜಾಲಕರಲ್ಲ. ಮಹಾಮಂತ್ರವೇತ್ತರೇ ನಿಜ. ಕಪಟಿಯೂ ದುಷ್ಟನೂ ಬುದ್ಧಿಗೇಡಿಯೂ ಆದ ಈ ಮಂತ್ರಿಯನ್ನು ಹೆದರಿಸಿದ ಹಾಗೆಯೇ ಇವನ ರಾಜ ಜಿತಕೇತುವನ್ನೂ ಹೆದರಿಸಿ, ಬುದ್ಧಿ ತಂದುಕೊಂಡು ರಾಜ್ಯವಾಳುವಂತೆ ಮಾಡಿಸಲು ನಿಮಗೆ ಸಾಧ್ಯವಿದೆ. ನಿಮ್ಮ ಅಪಾರ ಶಕ್ತಿಯನ್ನು ಒಳ್ಳೆಯ ಕಾರ್ಯಕ್ಕೆ ಏಕೆ ಪ್ರಯತ್ನಿಸಬಾರದು ? ಈಗ ಈ ಒಣಮರವನ್ನು ಸುಟ್ಟುಹಾಕಿ ಏನು ಪ್ರಯೋಜನ ?" ಎಂದು ಕೇಳಿದನು.

"ಭಳಿರೇ! ನೀನು ಧೈರ್ಯಶಾಲಿ ಮಾತ್ರವಲ್ಲ, ಬುದ್ಧಿಶಾಲಿ ಕೂಡಾ. ಈ ಮರವನ್ನು ಸುಟ್ಟುಹಾಕಿದ್ದರಿಂದ ತಾನೇ ನಿನಗೆ ನನ್ನ ಶಕ್ತಿ ಗೊತ್ತಾಯಿತು ? ಯುವಕಾ, ನೀನು ನನ್ನ ಮನಸ್ಸಿನಲ್ಲಿರುವುದನ್ನೇ ಕಂಡುಹಿಡಿದು ಹೇಳಿದ ಹಾಗಿದೆ" ಎಂದು ಕರಡಿಕೆಂಗಣ್ಣನು ಕಾಳೀವರ್ಮನನ್ನು ಮೆಚ್ಚಿ, ಮಂತ್ರಿ ಜೀವಗುಪ್ತನೊಂದಿಗೆ—"ಎಲೈ ಮಂತ್ರಿಯೇ. ನನ್ನ ಶಕ್ತಿ ಎಂತಹುದೆಂದು ಗೊತ್ತಾಯಿತಷ್ಟೆ ? ಈಗ ಹೇಳು. ಇಲ್ಲಿ ಆಜ್ಞೆ ಮಾಡಬೇಕಾದವನು ನೀನೋ ನಾನೋ ?" ಎಂದು ಕೇಳಿದನು.

ಜೀವಗುಪ್ತನು ಸುಡುತ್ತಿರುವ ಮರವನ್ನು ನೋಡುತ್ತ, ತಾನು ಯಾವುದೋ ದೊಡ್ಡ ಪ್ರಾಣಾಪಾಯದಲ್ಲಿ ಸಿಕ್ಕಿಕೊಂಡಿರುವೆನೆಂದು ಅಂಜುತ್ತ, ನಡುಗುವ ಕಂಠದಲ್ಲಿ, "ಅಯ್ಯಾ, ಮಾಂತ್ರಿಕಮಹಾತ್ಮ! ನಿಮ್ಮ ಅಮೋಘವಾದ ಶಕ್ತಿಯನ್ನು ಕಣ್ಣಾರೆ ಕಂಡು ದಿಗ್ಭ್ರಮಿಸಿದ್ದೇನೆ. ನಿಮ್ಮಂಥವರು ಋಷಿಗಳಿಗೆ ಸಮಾನರು. ಇಲ್ಲಿ ಮಾತ್ರವಲ್ಲ, ರಾಜನ ಮನೆಗೂ ಚಿತ್ತೈಸಿ ಜಿತಕೇತು ಮಹಾರಾಜರಿಗೂ ನೀವು ಆಜ್ಞೆಗಳನ್ನೂ ಆಲೋಚನೆಗಳನ್ನೂ ಕೊಡಬಹುದು. ನಿಮ್ಮ ಅಮೂಲ್ಯ ಆಲೋಚನೆಗಳನ್ನು ಮಹಾರಾಜರು ಮಾನ್ಯಮಾಡುತ್ತಾರೆ. ದಯ ಮಾಡಬೇಕು" ಎಂದನು.

"ಎಂತಹ ಮಹಾಮಂತ್ರಿಗೆ ಎಂತಹ ದುರ್ಗತಿ ಬಂತು !" ಎಂದು ಹೇಳಿಕೊಳ್ಳುತ್ತ, ಕಾಳೀವರ್ಮನು ಸುತ್ತಲಿರುವ ಆಶ್ವಿಕರ ಕಡೆಗೂ ಕಟುಕನಾಯಕನ ಕಡೆಗೂ ನೋಡಿದನು.

ಎಲ್ಲರೂ ಕರಡಿಕೆಂಗಣ್ಣನ ದಾಸಾನುದಾಸರಂತೆ ನಿಂತಿದ್ದಾರೆ. ಮಾಂತ್ರಿಕ ಕರಡಿಕೆಂಗಣ್ಣನು ತನ್ನ ದಂಡ

ವನ್ನು ಎತ್ತಿ ಹಿಡಿದು, "ನನ್ನ ಆಜ್ಞೆ ಏನೆಂಬುದನ್ನು ಎಲ್ಲರೂ ಕೇಳಿರಿ!" ಎಂದು ಕೂಗಿ ಕಟುಕನಾಯಕ ನೊಂದಿಗೆ, "ಎಲೋ ಕಟುಕನಾಯಕಾ, ತಲೆಗಳನ್ನು ಕಡಿದುರುಳಿಸಬಲ್ಲವನಾದ ನಿನಗೆ ಕಡಿದ ತಲೆಗಳನ್ನು ಮತ್ತೆ ಶರೀರಕ್ಕೆ ಅಂಟಿಸಿ ಹೊಲಿಯಲಿಕ್ಕೂ ಗೊತ್ತಿರ ಬೇಕು. ಗೊತ್ತಿದೆಯಷ್ಟೆ? ಈಗ ಸತ್ತುಬಿದ್ದಿರುವ ಆ ಮುಂಡಕ್ಕೆ ಅದರ ತಲೆಯನ್ನಿಟ್ಟು ಹೊಲಿದು. ಅದನ್ನು ಕುದುರೆಯ ಮೇಲೆ ಕೂಡಿಸಿಟ್ಟು, ಅದು ಬೀಳದಂತೆ ಹಗ್ಗದಿಂದ ಕಟ್ಟು. ಬೇಗ ಆಗಲಿ ಈ ಕೆಲಸ" ಎಂದನು.

ಕಟುಕನು ಕೂಡಲೇ ಅವನು ಹೇಳಿದ ಹಾಗೆಯೇ ಎಲ್ಲವನ್ನೂ ಮಾಡಿದನು. ಆದರೆ ಭೀತಿಯ ನಡು ಕದ ಗಡಿಬಿಡಿಯಲ್ಲಿ ಅವನು ಮುಖವನ್ನು ಬೆನ್ನಿನ ಕಡೆಗಿಟ್ಟು ಹೊಲಿದು ಕುದುರೆಯ ಮೇಲೆ ಕೂಡಿ ಸಿದ್ದನು. ಕುದುರೆಯ ಮೇಲೆ ಹಿಮ್ಮೊಗದ ಕಳೇ ಬರವು ಸವಾರಿ ಮಾಡುವಂತಾಯಿತು.

ಈ ತಪ್ಪನ್ನು ನೋಡಿ ಕರಡಿಕೆಂಗಣ್ಣನೂ, ಜೀವ ಗುಪ್ತನೂ ಹೊರತು ಉಳಿದೆಲ್ಲರೂ ಗಹಗಹಿಸಿ ನಕ್ಕರು. ಕರಡಿಕೆಂಗಣ್ಣನು ಜೀವಗುಪ್ತನನ್ನು ನೋಡಿ, "ಎಲೋ ಮಂತ್ರೀ, ನೀನು ಕಟುಕನಾಯಕನ ವಾಹ ನದ ಮೇಲೆ ಏರಿ, ನಿನ್ನ ವಾಹನವನ್ನು ಕಟುಕನಾಯ ಕನಿಗೆ ಕೊಡು" ಎಂದು ಅಪ್ಪಣೆ ಮಾಡಿದನು.

ಜೀವಗುಪ್ತನು ಮರುಮಾತಾಡದೆ. ಕಂಪಿಸುತ್ತ ಹೋಗಿ ಕೋಣದ ಮೇಲೆ ಏರಿ ಕುಳಿತನು. ಹಾಗೆಯೇ ಕಟುಕನು ಮಂತ್ರಿಯ ಕುದುರೆಯ ಮೇಲೇರಿ ಕಡಿವಾಣ ಹಿಡಿದುಕೊಂಡನು. "ಹುಂ, ಇನ್ನು ಎಲ್ಲರೂ ನಗರಕ್ಕೆ ನಡೆಯಿರಿ" ಎಂದು ಕರಡಿ ಕೆಂಗಣ್ಣ ಆಜ್ಞೆಮಾಡಿದನು.

ಜಿತಕೇತು ರಾಜನ ಮಂತ್ರಿಗೆ ಆದ ಅವಮಾನ ವನ್ನು ನೋಡಿ ಕಾಳೀವರ್ಮನು ಸಂತೋಷಿಸುತ್ತ, "ಈ ಮೆರವಣಿಗೆಯನ್ನು ನೋಡಿ ನಗರದ ಪ್ರಜೆ ಗಳು ತುಂಬಾ ವಿನೋದಿಸುತ್ತಾರೆ. ಇನ್ನು ನನ್ನ ದಾರಿಹಿಡಿದು ನಾನು ಹೋಗಿ ಬಿಡುತ್ತೇನೆ" ಎನ್ನುತ್ತ ತನ್ನ ಕುದುರೆಯನ್ನು ಹೊರಡಿಸಲು ನೋಡಿದನು. ಆಗ ಕರಡೀಕೆಂಗಣ್ಣನು ತನ್ನ ದಂಡವನ್ನು ಮೇಲೆತ್ತಿ, "ಕಾಳೀವರ್ಮಾ! ನನ್ನ ಆಜ್ಞೆ ನಿನಗೆ ಕೇಳಿಸಿಲ್ಲ ವೇನು? ಅತ್ತಿತ್ತ ಹೊರಡುವೆ? ನೀನೂ ನಮ್ಮೊಂದಿಗೇ ಇರತಕ್ಕದ್ದು. ನನ್ನ ಆಜ್ಞೆಗೆ ನೀನೂ ಕಟ್ಟುಪಟ್ಟವನೇ. ನಡೆ ಹೀಗೆ!" ಎಂದನು.

"ಆಜ್ಞೆಯೆ? ನನ್ನನ್ನು ಇಲ್ಲಿ ಆಜ್ಞಾಪಿಸುವ ಸಮರ್ಥನು ಯಾರವನು? ಬರಲಿ ಮುಂದೆ ನೋಡೋಣ!" ಎನ್ನುತ್ತ ಕಾಳೀವರ್ಮ ಒರೆಯಿಂದ ಕತ್ತಿಯನ್ನು ಹಿರಿದನು.

(ಇನ್ನೂ ಇದೆ)





# ಕರಡಿಕೆಂಗಣ್ಣ

## ೪

[ಜಲಪಾತದಾಚೆಯಿಂದ ಬಂದ ಕರಡಿಕೆಂಗಣ್ಣ ಮಾಂತ್ರಿಕನು ಕಾಳೀವರ್ಮನ ಸಾಹಸವನ್ನು ಮೆಚ್ಚಿಕೊಂಡನು. ಆ ಸಮಯದಲ್ಲಿ ಆ ಶಿರೀಷವನಕ್ಕೆ ಜಿತಕೇತುರಾಜನ ಮಂತ್ರಿ ಬಂದನು. ಕರಡಿಕೆಂಗಣ್ಣನ ಕರಾಮತಿಯನ್ನು ನೋಡಿ ಮಂತ್ರಿ ಹೆದರಿ ಅವನು ಹೇಳಿದಂತೆ ಕೇಳುವವನಾದನು, ಅವನನ್ನು ಕೋಣದ ಮೇಲೇರಿಸಿ ಕರಡಿಕೆಂಗಣ್ಣನು ಎಲ್ಲರನ್ನೂ ನಗರಕ್ಕೆ ಹೊರಡಿಸಲು, ಕಾಳೀವರ್ಮನು ಕೋಪದಿಂದ ಕರಡಿಕೆಂಗಣ್ಣನ ಮೇಲೆ ಕತ್ತಿ ಹಿರಿದನು.]

**ಕಾ**ಳೀವರ್ಮನ ಧೈರ್ಯವನ್ನೂ, ಅದಕ್ಕೆ ತಕ್ಕಂತೆ ತನ್ನಂತಹವನನ್ನು ಲಕ್ಷ್ಯಮಾಡದೆ ಕತ್ತಿ ಹಿರಿದ ಸಾಹಸವನ್ನೂ ನೋಡಿ ಕರಡಿಕೆಂಗಣ್ಣ ಮಾಂತ್ರಿಕನು ತುಂಬಾ ಬೆರಗಾಗಿ, ಅಲ್ಲಿದ್ದ ಎಲ್ಲರಲ್ಲಿ ಏನು ಪ್ರತಿಕ್ರಿಯೆ ಮೂಡುವುದೋ ಎಂದು ನೋಡಿದನು. ಮಂತ್ರಿ ಜೀವಗುಪ್ತನ ಹೊರತು ಉಳಿದೆಲ್ಲರೂ ಇನ್ನಿಷ್ಟು ಭಯಕಂಪಿತರಾಗಿ ನಡುಗುತ್ತಿದ್ದರು. ಜೀವಗುಪ್ತನು ಏನನ್ನೋ ನಿರ್ಧರಿಸಿದವನಂತೆ, ತಾನು ಕುಳಿತಿದ್ದ ಕೋಣವನ್ನು ಕಾಳೀವರ್ಮನ ಕಡೆಗೆ ಹೊರಡಿಸಿದನು. ಆಗ ಕರಡಿಕೆಂಗಣ್ಣನು ಅವನನು ತಡೆದು, "ಏನಯ್ಯಾ, ಮಹಾಮಂತ್ರಿ ! ಈಗ ನೀನು ಯಾವ ಕೆಲಸ ಮಾಡಲು ಚಲಿಸುತ್ತಿದ್ದೀ ? ಕಾಳೀವರ್ಮನು ನನ್ನ ಮೇಲೆ ರೇಗಿಬೀಳುವಂತೆ ಮಾಡಲು ಪ್ರಾರಂಭಿಸಿದಿಯೇನು ? ನಿಜತಾನೇ ?" ಎಂದು ಕೇಳಿದನು.

ಆ ಪ್ರಶ್ನೆ ಕೇಳಿ ಜೀವಗುಪ್ತನ ಬಾಯಿಯ ಪಸೆ ಆರಿದಂತಾಗಿ, ನಾಲಗೆಯಿಂದ ತುಟಿ ಸವರಿಕೊಂಡು, "ಅಯ್ಯಾ, ಮಹಾಮಾಂತ್ರಿಕರೇ, ನೀವು ನನ್ನನ್ನು ಅಪಾರ್ಥ ಮಾಡಿಕೊಳ್ಳಬಾರದು. ತಮ್ಮಂತಹ ಮಹಾಮಾಂತ್ರಿಕರ ಆಜ್ಞೆಯನ್ನು ಶಿರಸಾವಹಿಸುವುದೇ ಒಳ್ಳೆಯದೆಂದು ನಾನು ಈ ಯುವಕನಿಗೆ



ಹೇಳಬೇಕೆಂದು ನೋಡಿದೆ, ಅಷ್ಟೇ" ಎಂದನು. "ಓಹೋ!" ಎಂದು ಕರಡಿಕೆಂಗಣ್ಣನು ಅವನನ್ನು ನೋಡಿ ಕಿರುನಗೆಯೊಂದಿಗೆ ತಲೆಯಾಡಿಸುತ್ತ, "ನಿನ್ನ ಈ ಯುವಕ ಕಾಳೀವರ್ಮನು ಬೇಗದಲ್ಲೇ ನಿಮಗೆಲ್ಲರಿಗೂ ಆಜ್ಞೆ ಮಾಡುವವನಾಗುತ್ತಾನೆ. ಎಚ್ಚರವಿರಲಿ!" ಎಂದು ಹೇಳಿ, ಇನ್ನೂ ಹಿಡಿದ ಕತ್ತಿಯನ್ನು ಬಿಡದೆ ತನ್ನನ್ನು ಕೋಪದಿಂದ ನೋಡುವ ಕಾಳೀವರ್ಮನೊಂದಿಗೆ, "ಕಾಳೀವರ್ಮಾ, ನಿನ್ನ ಶೌರ್ಯಪರಾಕ್ರಮಗಳು ಎಷ್ಟೆಂಬುದೆಲ್ಲಾ ನಾನು ಅಳೆದುಕೊಂಡಾಯಿತು. ಅವಸರಪಡಬೇಡ. ನಿನಗೆ ಇದೆಲ್ಲ ಬೇಕಾದಷ್ಟಿದ್ದರೂ ಪಾಪ, ಜೀವನಾನುಭವ ಏನೂ ಸಾಲದು. ಈಗಿನ ಪರಿಸ್ಥಿತಿಯಲ್ಲಿ ನಿನ್ನ ದಾರಿ ಹಿಡಿದು ನೀನೂ, ನನ್ನ ದಾರಿಹಿಡಿದು ನಾನೂ ಹೊರಟುಹೋದೆವೆಂದುಕೋ. ಆಮೇಲೆ ಏನು ನಡೆಯುವುದೆಂಬುದನ್ನು ಆಲೋಚನೆ ಮಾಡಿರುವೆಯಾ?" ಎಂದು ಕೇಳಿದನು.

"ಅದನ್ನು ಕುರಿತು ಅಷ್ಟೇನೂ ಆಲೋಚನೆ ಮಾಡುವ ಅಗತ್ಯವೇನಿಲ್ಲ. ನೀನು ಮತ್ತೆ ಆ ಜಲಪಾತದ ಹಿಂದಿರುವ ಗುಹೆಯೊಳಗೆ ಹೋಗುವಿ. ನಾನು ನನ್ನ ಹಳ್ಳಿಯನ್ನು ಸೇರಿ ಹಾಯಾಗಿ ವ್ಯವಸಾಯ ಮಾಡುತ್ತ ಪ್ರಶಾಂತವಾಗಿ ಜೀವನ ನಡೆಸುತ್ತೇನೆ. ಇದೇನು ದೊಡ್ಡ ಮಾತು ಅಂತ ಕೇಳುವೆಯೋ?" ಎಂದನು ಕಾಳೀವರ್ಮ.

"ಹೇಳಿದೆನಲ್ಲಪ್ಪಾ, ನೀನು ಎಷ್ಟು ದೊಡ್ಡ ಧೈರ್ಯಶಾಲಿಯೋ ಅಷ್ಟೇ ಮುಗ್ಧಭಾವನೆಯುವನೆಂದು ಈ ನಿನ್ನ ಮಾತಿನಿಂದಲೇ ಗೊತ್ತಾಯಿತು ಬಿಡು" ಎಂದು ಕರಡಿಕೆಂಗಣ್ಣನು ಜೀವದತ್ತನನ್ನು ನೋಡಿ, "ಎಲೋ ಮಹಾಮಂತ್ರೀ, ಈ ಕಾಳೀವರ್ಮನು ತನ್ನ ಗ್ರಾಮಕ್ಕೆ ಹೋಗಿ ಸೇರಿದ ಮೇಲೆ ಅವನನ್ನು ಹಿಡಿದು ತರಲು ಎಷ್ಟು ಮಂದಿ ಸೈನಿಕರನ್ನು ಕಳುಹಿಸಲಿರುವಿಯೋ ಮುಚ್ಚುಮರೆ ಮಾಡದೆ ಹೇಳು. ನಿನ್ನ ಮನಸ್ಸಿನಲ್ಲಿ ಏನು ಆಲೋಚನೆ ನಡೆಯುವುದೆಂದು ನನಗೆ ಗೊತ್ತಿದೆ. ರಾಜನ ಹತ್ತಿರ ಹೇಳಿ ಆರಿಸಿದ ವೀರರಾಗಿ ಎಷ್ಟು ಮಂದಿಯನ್ನು ಕಳುಹಿಸಲಿರುವಿಯೆಂದು ನಿನ್ನ ಬಾಯಿಯಿಂದಲೇ ಹೊರಗೆ ಬರಲಿ! ಸುಳ್ಳುಪೊಳ್ಳು ಹೇಳಿದರೆ ಸುಟ್ಟುಹೋದ ಮರದ ಹಾಗೆ ನಿಂತಲ್ಲೇ ನಿನ್ನನ್ನು ಭಸ್ಮಮಾಡಿ ಬಿಡುತ್ತೇನೆ" ಎನ್ನುತ್ತ ತನ್ನ ಕರಡಿತಲೆಯ ದಂಡವನ್ನು ಮೇಲಕ್ಕೆತ್ತಿದನು.

ಜೀವಗುಪ್ತನು ಮಹಾಭೀತಿಯಿಂದ, "ಬೇಡ ಬೇಡ, ಹೇಳುತ್ತೇನೆ. ನನ್ನ ಆಲೋಚನೆಯನ್ನೆಲ್ಲಾ ತಾವು ತಿಳಿದುಬಿಟ್ಟಿದ್ದೀರಾದ್ದರಿಂದ ನಾನು ಅಡಗಿಸಿಟ್ಟು ಪ್ರಯೋಜನವೂ ಇಲ್ಲ. ಅಯ್ಯಾ, ಮಾಂತ್ರಿಕೋತ್ತಮ ಮಹಾಮುನಿಗಳೇ, ನಾನು ಜಿತಕೇತು ರಾಜನ ಉಪ್ಪು ತಿಂದುಕೊಂಡಿರುವವನಾದುದರಿಂದ ಈ ಕಾಳೀವರ್ಮನನ್ನು ಹತಮಾಡಲು ಅವರಿಗೆ ತಕ್ಕ ಆಲೋಚನೆ ಹೇಳಬೇಕಾದುದೇ ನ್ಯಾಯ

ವಲ್ಲವೇ ? ಅವರ ಕ್ಷೇಮಕ್ಕಾಗಿ ತಕ್ಕ ಆಲೋಚನೆ ನಾನು ಹೇಳಬೇಕಾದುದು ತಪ್ಪಾಗಲಾರದಷ್ಟೇ ? ಮಂತ್ರಿಯಾದುದರಿಂದ ಅದು ನನ್ನ ಧರ್ಮವೂ ಆಗುತ್ತದೆಂದು ತಾವು ಗ್ರಹಿಸುವಿರೆಂದೇ ನಂಬು ತ್ತೇನೆ " ಎಂದನು.

ಕರಡಿಕೆಂಗಣ್ಣನು ಮಂತ್ರದಂಡವನ್ನು ಗಟ್ಟಿಯಾಗಿ ನೆಲಕ್ಕೆ ತಾಗಿಸಿ, "ಕೇಳಿದೆಯಾ ಕಾಳೀವರ್ಮಾ ? ಈಗ ನಿನಗೆ ಈ ಚಂದ್ರಶಿಲಾನಗರದಲ್ಲೇ ಭದ್ರತೆ ಇಲ್ಲ ವೆಂದು ಗೊತ್ತಾಯಿತಷ್ಟೆ ? ಅಂದ ಮೇಲೆ ಗ್ರಾಮ ದಲ್ಲಿ ಹಾಯಾಗಿ ಬದುಕಿರಬೇಕೆಂಬ ನಿನ ಯೋಚನೆ ಎಂಥ ಹೆಡ್ಡುತನ ತಿಳಿಯಿತಷ್ಟೆ ?" ಎಂದನು.

ಈಗ ಕಾಳೀವರ್ಮನಿಗೆ ತನ್ನ ವಿಷಮ ಪರಿಸ್ಥಿತಿ ಅರ್ಥವಾಯಿತು. ಅಷ್ಟೊಂದು ದೊಡ್ಡ ಸೈನ್ಯಬಲ ವಿರುವ ಜಿತಕೇತು ರಾಜನನ್ನು ತಾನೊಬ್ಬನಾಗಿ, ಅಥವಾ ಕೆಲವಾರು ಮಂದಿ ಅನುಚರರ ಸಹಾಯ ದಿಂದ ಇದಿರಿಸಿ ನಿಲ್ಲುವುದು ಅಸಾಧ್ಯವೇ. ಜಿತಕೇತು ರಾಜನ ಸಿಂಹಾಸನವನ್ನು ತಾನು ಆಕ್ರಮಿಸುವುದೋ, ಅದಾಗದಿದ್ದರೆ ದೇಶಬಿಟ್ಟು ಹೋಗುವುದೋ, ಈ ಎರಡರಲ್ಲಿ ಒಂದು ತನ್ನ ಮುಂದಿರುವ ದಾರಿ...

ಕಾಳೀವರ್ಮನು ಹೀಗೆ ಆಲೋಚಿಸುತ್ತ, ತನ್ನ ಕತ್ತಿಯನ್ನು ಒರೆಯೊಳಗೆ ಸೇರಿಸಿ, ಕರಡಿಕೆಂಗಣ್ಣ ನನ್ನು ನೋಡಿ, "ಗುರೂ ! ತಾವು ಬಹಳ ದೊಡ್ಡ ವರು. ನೀವು ಹೇಳಿದ್ದು ನಿಜವೇ. ನನ್ನ ಕ್ಷೇಮದ ಸಂಗತಿ ನನಗಿಂತಲೂ ನನ್ನನ್ನು ಬೆಳೆಯಿಸಿ ದೊಡ್ಡವ ನನ್ನಾಗಿ ಮಾಡಿದ ಬಲಭದ್ರನಿಗೂ ನಿಮಗೂ ಹೆಚ್ಚಿಗೇ ತಿಳಿದ ಹಾಗಿದೆ. ಈಗ ತಮ್ಮ ಆಜ್ಞೆ ಏನು ? ಹೇಳಬೇಕು " ಎಂದನು.

ಕರಡಿಕೆಂಗಣ್ಣನು ತನ್ನ ಮಂತ್ರದಂಡದಿಂದ ಕಾಳೀ ವರ್ಮನ ಭುಜವನ್ನು ತಟ್ಟಿ, "ಕಾಳೀವರ್ಮಾ, ನಿನ್ನ ಅದೃಷ್ಟದೇವತೆಯೇ ನಿನ್ನನ್ನು ಪ್ರೋತ್ಸಾಹಿಸಿ ನನ್ನನ್ನು ಗುರುವೆಂದು ಸಂಬೋಧಿಸಲು ಹೇಳಿದೆ. ಒಳ್ಳೇ



ದಪ್ಪ. ನಿನಗೆ ನಾನು ಮಾಡುವುದು ಆಜ್ಞೆಯಲ್ಲ, ಸಲಹೆಗಳು. ಈಗ ನಾವೆಲ್ಲರೂ ನಗರಕ್ಕೆ ಹೋಗು ತ್ತಿದ್ದೇವೆ. ಆ ಜಿತಕೇತು ರಾಜನ ದರ್ಪವು ಎಷ್ಟರ ಮಟ್ಟಿನದೆಂದು ನೋಡಬೇಕು. ಎಲೋ ಮಂತ್ರಿ ಜೀವಗುಪ್ತಾ, ನಾನು ಆ ಕೋಣದ ಮೇಲೆ ಏರಿ ಕೊಳ್ಳುತ್ತೇನೆ. ನೀನು ಅದರ ಮೂಗುದಾರ ಹಿಡಿದು ಕೊಂಡು ನಗರದ ಕಡೆಗೆ ಕರೆದುಕೊಂಡು ಹೋಗು " ಎಂದನು. ಮಂತ್ರಿ ಜೀವಗುಪ್ತನು ಮರುಮಾತಾಡದೆ ಕೋಣದ ಮೇಲಿನಿಂದ ಇಳಿದು ಅದರ ಮೂಗು ದಾರ ಹಿಡಿದುಕೊಂಡನು. ಕರಡಿಕೆಂಗಣ್ಣನು ಆ ಕೋಣದ ಮೇಲೆ ಏರಿ ಕುಳಿತನು.

" ಈ ಕೋಣವು ಬಹಳ ಕಾಲದ ಹಿಂದೆ, ದಾರಿ ತಪ್ಪಿ ಈ ಲೋಕದಲ್ಲಿದ್ದ ಒಬ್ಬ ಯಮಕಿಂಕರನ ವಾಹನವಾಗಿತ್ತು. ಈ ಮಾತನ್ನು ನಂಬದಿರುವವರು ನಿಮ್ಮಲ್ಲಿ ಯಾರಾದರೂ ಇರುವರೇನು ?" ಎಂದು ಎಲ್ಲರನ್ನೂ ನೋಡಿದನು ಕರಡಿಕೆಂಗಣ್ಣ.



ಯಾರೂ ಅವನ ಮಾತನ್ನು ಅಲ್ಲವೆಂಬ ಗೋಜಿಗೆ ಹೋಗಲಿಲ್ಲ. ಕಟುಕರವನು ಮಾತ್ರ ಆಶ್ಚರ್ಯ ಪಡುತ್ತ ಏನೋ ಗೊಣಗಿಕೊಂಡನು. ಅವನು ಆ ಕೋಣವನ್ನು ಚಿಕ್ಕ ಕರುವಾಗಿದ್ದಾಗ, ಒಬ್ಬ ಬಡ ರೈತನಿಂದ, ಅವನಿಗೆ ಚಿಕ್ಕಾಸು ಕೂಡಾ ಕೊಡದೆ ಎಳೆದುಕೊಂಡು ಹೋಗಿದ್ದ. ಎಂದಾದರೂ ರಾಜನು ಆ ರೈತನಿಗೆ ಶಿರಚ್ಛೇದದ ಶಿಕ್ಷೆ ವಿಧಿಸಿದರೆ ಅವನ ತಲೆಯನ್ನು ಕಡಿಯದೆ ಬಿಟ್ಟುಬಿಡುವುದಾಗಿ ಮಾತ್ರ ಅವನಿಗೆ ಮಾತು ಕೊಟ್ಟಿದ್ದ.

ಕರಡಿಕೆಂಗಣ್ಣನು ತನ್ನ ಮಂತ್ರದಂಡದ ಕರಡಿ ತಲೆಯನ್ನು ಕೋಣದ ಹಣೆಯ ಮೇಲೆ ಒಂದುಸಾರಿ ತಾಗಿಸಿ, "ಹೇ, ಕಿಂಕರಾ! ಕ್ಷುದ್ರಮಾನವನ ಕೈಗೆ ಸಿಕ್ಕಿ ಜನ್ಮದೊಂದಿಗೆ ಬಂದ ನಿನ್ನ ಅಪೂರ್ವ ಶಕ್ತಿಗಳನ್ನು ಕಳೆದುಕೊಂಡೆನೆಂದು ಸಂಶಯಪಡುವಿಯಾ? ಅದೇ ನಿಲ್ಲ. ಎಲ್ಲಿ ನೋಡೋಣ, ಭೂಮಿಯ ಮೇಲೆ ಎರಡು ಗಜ ಎತ್ತರಕ್ಕೆ ಗಾಳಿಯಲ್ಲೆದ್ದು ನಗರದ ಕಡೆಗೆ ಸ್ವಲ್ಪ ದೂರ ಪ್ರಯಾಣ ಮಾಡು" ಎಂದನು. ಆ ಕೂಡಲೇ ಕೋಣದ ಮೂಗಿನ ಹೊಳ್ಳೆಗಳಿಂದ ಭುಸ್ಸೆಂಬ ತುಫಾನಿನಂತಹ ಶ್ವಾಸಹಾಯ್ದು ಹೊರ ಬಂದಿತು. ತಲೆಯನ್ನು ಮೇಲೆತ್ತಿ ಕರ್ಣಕಠೋರ ವಾಗಿ ಕೇಂಕರಿಸಿ ನೆಲದಿಂದ ಅವಲೀಲೆಯಾಗಿ ಆಕಾಶಕ್ಕೆದ್ದು ಗಾಳಿಯಲ್ಲಿ ತೇಲುತ್ತಾ ನಗರಕ್ಕೆ ಹೊರಟಿತು. ಅದು ಹಾಗೆ ಮೇಲಕ್ಕೆ ಹಾರಿದಾಗ, ಅದರ ಮೂಗುದಾರ ಹಿಡಿದಿದ್ದ ಜೀವದತ್ತನು ದಾರ ವನ್ನು ಜಾರಬಿಟ್ಟು ಮೇಲೆ ನೋಡುತ್ತ, ಬೀಳುತ್ತ ಏಳುತ್ತ ಓಡತೊಡಗಿದನು.

ಕರಡಿಕೆಂಗಣ್ಣನು ಸ್ವಲ್ಪದೂರ ಹೋಗಿ ಕೋಣ ವನ್ನು ನೆಲಕ್ಕಿಳಿಸಿದನು. ಜೀವಗುಪ್ತನು ಮತ್ತೆ ಅದರ ಮೂಗುದಾರ ಹಿಡಿದನು. ಕರಡಿಕೆಂಗಣ್ಣನು ಹಿಂದೆ ಬರುವವರನ್ನು ನೋಡಿ "ಎಂತಹ ಮಹಾಮಂತ್ರಿಗೆ ಏನು ಗತಿ ಬಂತು ನೋಡಿದಿರಾ? ಇವನ ಮೇಲಿ ನವನಾದ ಆ ಜಿತಕೇತು ರಾಜನನ್ನು ಸಹಾ ಹಿಡಿದು ತಕ್ಕ ರೀತಿಯಲ್ಲಿ ಶಿಕ್ಷೆ ಕೊಡದೆ ಬಿಡಲಾರೆ. ಜೈ, ಆದಿಭಲ್ಲೂಕಾ!" ಎಂದನು.

ಅದುವರೆಗೂ ನಡೆಯುವುದನ್ನು ನೋಡುತ್ತ ಮೌನವಾಗಿದ್ದ ಕಾಳೀವರ್ಮನು, ಕರಡಿಕೆಂಗಣ್ಣನ ಸಮೀಪಕ್ಕೆ ಹೋಗಿ, "ಅಯ್ಯಾ, ನಿಮ್ಮನ್ನು ನಾನು ಗುರುವನ್ನಾಗಿ ಭಾವಿಸುವೆನೆಂದು ಹೇಳಿಯಾಯಿತು. ಹಾಗೆಂದ ಮಾತ್ರಕ್ಕೆ ನನಗೆ ಇಷ್ಟವಿಲ್ಲದ ಆಜ್ಞೆಗಳನ್ನು ನೀವು ಮಾಡಿದರೆ ನಾನು ತಲೆ ಬಗ್ಗಿಸುವೆನೆಂದು ತಿಳಿಯಬಾರದು. ನೀವು ನಿಜವಾಗಿಯೂ ದುಷ್ಟ ರಾಜನನ್ನು ಶಿಕ್ಷಿಸುವಿರೇನು?" ಎಂದು ಕೇಳಿದನು.

"ಕಾಳೀವರ್ಮಾ, ನಾವು ಗುರು ಶಿಷ್ಯರೆಂದುಕೊಂಡ ಮೇಲೆ, ಗುರುವು ಶಿಷ್ಯನಿಗೆ ಒಳಿತಾಗುವಂತಹ ಆಜ್ಞೆ ಗಳನ್ನೇ ಮಾಡುತ್ತಾನೆ, ಅದಿರಲಿಬಿಡು. ನಿನಗೆ ಜಿತಕೇತು ರಾಜನ ಸಿಂಹಾಸನವನು ಆಕ್ರಮಿಸ ಬೇಕೆಂದು ಆಶೆಯಿದೆಯೇ? ಇದ್ದರೂ ತಪ್ಪೆಂದು

ಕೊಳ್ಳಬೇಡ." ಎಂದು ಕೇಳಿ ಕಾಳೀವರ್ಮನ ಮುಖವನ್ನು ಪರೀಕ್ಷಿಸಿ ನೋಡಿದನು.

"ನನಗೆ ಅಂತಹ ದುರಾಶೆ ಇಲ್ಲವೇ ಇಲ್ಲ. ನಾನು ಬಯಸುವುದೇನಂದರೆ, ಆ ರಾಜನು ನಿರ್ದೋಷಿಗಳಿಗೆ ಶಿರಚ್ಛೇದದಂತಹ ರಾಕ್ಷಸೀ ಶಿಕ್ಷೆಗಳನ್ನು ಕೊಡಬಾರದು. ವಿಚಾರಣೆಯಿಲ್ಲದೆ 'ಮನಬಂದಂತೆ ಪರಿಪಾಲನೆ ಮಾಡಬಾರದು, ಅಷ್ಟಾದರೆ ಸಾಕಿತ್ತು" ಎಂದನು ಕಾಳೀವರ್ಮ.

"ಪ್ರಯತ್ನಿಸಿ ನೋಡುತ್ತೇನೆ, ಆದರೆ ಹುಟ್ಟುವಾಗಲೇ ಸಿಂಹಾಸನದ ವಾರಸರೆಂಬ ಅಂಟಿನಿಂದ ಕೂಡಿದ ಈ ಜಿತಕೇತುರಾಜನಂಥವರು ಸುಲಭದಲ್ಲಿ ಬದಲಾವಣೆ ಹೊಂದಲಾರರು. ಅಲ್ಲವೇನಯ್ಯಾ ಮಹಾಮಂತ್ರೀ?" ಎಂದು ಕೇಳಿದನು ಕರಡಿಕೆಂಗಣ್ಣ.

"ಆಹಾ! ರತ್ನದಂತಹ ಮಾತು ಹೇಳಿದಿರಿ ಮಹಾಮಾಂತ್ರಿಕರೇ! ಸರ್ವಜ್ಞರು ನೀವು!" ಎಂದನು ಮಂತ್ರಿ ಜೀವಗುಪ್ತ.

ಹೀಗೆ ಮಾತಾಡುತ್ತ ನಗರದ ಕಡೆಗೆ ಸ್ವಲ್ಪ ದೂರ ಹೋಗಲು, ಇಬ್ಬರು ಕುದುರೇ ಸವಾರರು ವೇಗವಾಗಿ ಅವರ ಮುಂದೆ ಬಂದರು, ಅವರು ಆ ದೇಶದ ರಾಜಭಟರಂತೆ ಕಾಣಲಿಲ್ಲ.

ಆ ಹೊಸ ಅಶ್ವಿಕರು ತಮ್ಮ ಕುದುರೆಗಳನ್ನು ದಾರಿಗೆ ಅಡ್ಡನಿಲ್ಲಿಸಿ, "ಇದೇನಿದು ನಿಮ್ಮ ರೀತಿ? ಕೋಣದ ಮೇಲೆ ಒಬ್ಬ ಸನ್ಯಾಸಿಯನ್ನು ಕೂಡಿಸಿ, ಪಟ್ಟೆ ಪೀತಾಂಬರ ಧರಿಸಿ, ರತ್ನ ಕುಂತಲಗಳಿರುವ ದೊಡ್ಡವರು ಕೋಣದ ಮೂಗುದಾರ ಹಿಡಿದು ನಡೆಯುವುದೆಂದರೇನಿದು ಅನ್ಯಾಯವಾಗಿದೆಯಲ್ಲಾ! ಆ ಕರ್ರಗಿನ ಬಟ್ಟೆ ಬರೆಯಿಂದ ಪಿಶಾಚಿಯಂತಿರುವವನು ಪಂಚಕಲ್ಯಾಣಿಯಂಥ ಕುದುರೇ ಮೇಲೆ ಸವಾರಿ ಮಾಡುವುದೇ? ಏನಿದೆಲ್ಲಾ? ಯಾರು ನೀವು?" ಎಂದು ಕೋಪ ದರ್ಪಗಳಿಂದ ಕೇಳಿದರು. ಕಾಳೀವರ್ಮನು ಅವರಿಗೆ ಉತ್ತರ ಕೊಡಬೇಕೆಂದು



ಮುಂದೆ ಬರಲು, ಕರಡಿಕೆಂಗಣ್ಣನು ಗಟ್ಟಿಯಾಗಿ ನಕ್ಕು, ಆ ಸವಾರರನ್ನು ನೋಡಿ, "ಓಹೋ! ನೀವು ನಮ್ಮ ಜಿತಕೇತುರಾಜನ ಭಟರಲ್ಲವೆಂದು ಗೊತ್ತಾಗುತ್ತದೆ. ಆದುದರಿಂದಲೇ ನಾವು ಯಾರೆಂದು ನಿಮಗೆ ಗೊತ್ತಾಗಲಿಲ್ಲ. ನಾವು ಯಾರೆಂಬುದು ನಮಗೂ ಗೊತ್ತಿಲ್ಲ. ಅದನ್ನು ಮರೆತು ಹೋದುದರಿಂದ ಆ ಸಂಗತಿ ತಿಳಿದುಕೊಳ್ಳಲಿಕ್ಕಾಗಿ ಅಲ್ಲಿ ಕಾಣುವ ನಗರದ ಕಡೆಗೆ ಹೋಗುತ್ತಿದ್ದೇವೆ. ಆಯಿತಷ್ಟೇ? ದಾರಿ ಬಿಡಿ!" ಎಂದನು.

"ಎಲೋ ಬೈರಾಗೀ! ನಮ್ಮೊಡನೆ ಹುಡುಗಾಟವಾಡುವಿಯಾ? ನಾವು ಯಾರು ಗೊತ್ತೇನು? ಉದಯಗಿರಿಯ ರಾಜರಾದ ದುರ್ಮುಖರ ವೀರ ಸೈನಿಕರು. ಈಗ ತಾನೇ ಇಲ್ಲಿಯ ಶಿರೀಷವನಕ್ಕೆ ಹೋಗಿ ಬರುತ್ತಿದ್ದೇವೆ. ಅಲ್ಲಿ ಕಾಳೀವರ್ಮ ಎಂಬ ದುರಳನಾಗಲಿ, ಅವನ ಶವವಾಗಲಿ ಕಾಣಲೇ ಇಲ್ಲ. ಹೇಳಿದ ಮಾತು ತಪ್ಪಿದ ಜಿತಕೇತುರಾಜನ ಕಡೆಗೆ



ನಮ್ಮ ರಾಜರು ಸೈನ್ಯದೊಂದಿಗೆ ಹೊರಟು ಬಂದಿದ್ದಾರೆ. ಎಚ್ಚರವಿಟ್ಟು ಮಾತಾಡಬೇಕು!" ಎಂದರು ಆ ಸವಾರರು.

"ಹಾಗಿದ್ದರೆ ಆ ಸಮಾಚಾರವನ್ನೆಲ್ಲ ನಮ್ಮ ಹತ್ತಿರ ಹೇಳುದ ಅಗತ್ಯವೇನು ಬಂತು? ಸರಿ, ಬೊಗಳಿ ಯಾಯಿತಷ್ಟೇ, ಇನ್ನು ನಿಮ್ಮ ದಾರಿ ಹಿಡಿದು ತೊಲಗಿರಾಚೆ!" ಎಂದು ಕರಡಿಕೆಂಗಣ್ಣ ಕೋಪದಿಂದ ಹೇಳಿದನು.

ಅಷ್ಟರಲ್ಲಿ ದುರ್ಮುಖರಾಜನ ಅಶ್ವಿಕರಲ್ಲೊಬ್ಬನು ಕಟುಕ ನಾಯಕನನ್ನು ನೋಡಿ, "ಅರೆ, ಇಲ್ಲಿರುವೆಯಾ? ನಿನ ಗುರುತು ಥಕ್ಕನೆ ಸಿಗಲಿಲ್ಲ. ನೀನು ಶಿರೀಷವನದಲ್ಲಿರುವ ಜಿತಕೇತುರಾಜನ ಪ್ರಧಾನ ಕಟುಕನಲ್ಲವೇನು?" ಎಂದು ಹೇಳಿ, ಅವನಿಗೆ ಗೇಲಿ ಮಾಡುವವನಂತೆ ಕಿಟಕಿಟನೆ ನಕ್ಕನು.

ಈ ಮೊದಲೇ ತಾನು ನಾಲ್ಕು ಮಂದಿಯ ಮುಂದೆ ನಗೆಗೀಡಾದಂತೆ ನೊಂದುಕೊಂಡಿದ್ದ ಕಟುಕನು ಹಲ್ಲು ಕಡಿಯುತ್ತ, ತನ್ನ ಚಿಪಗೊಡಲಿಯನ್ನು ಮೇಲೆತ್ತಿ "ಎಲೋ ಸೊಕ್ಕಿದ ಶತ್ರುಬಂಟಾ! ನಾನು ಯಾರೆಂದು ಗೊತ್ತಾಗಿಯೂ, ಗೊತ್ತಾಗದವನಂತೆ ವೇಷ ಕಟ್ಟಿ ಹಲ್ಲು ತೋರಿಸುವಿಯಾ? ಆಕೋ, ಅಲ್ಲಿ ಕುದುರೆಯ ಮೇಲಿರುವ ಹಿಮ್ಮೊಗದ ಶವವನ್ನು ನೋಡು! ನಿನಗೂ ಅದೇ ಗತಿ ಬೇಕೇನು?" ಎಂದನು.

ಕಟುಕನ ಶೌರ್ಯದ ಮಾತು ಕೇಳಿ ಕಾಳೀವರ್ಮನಿಗೆ ಉತ್ಸಾಹವೆದ್ದಿತು. ಅವನು ತನ್ನ ಕುದುರೆಯನ್ನು ಕಟುಕನಾಯಕನಬಳಿಗೆ ಓಡಿಸಿ, ಕತ್ತಿಯಿಂದ ಅವನ ಭುಜ ತಟ್ಟಿ, "ಭಲೇ ಭಲೆ! ನಾಯಿ ಬೊಗಳಿದರೆ ಬಲವಾದ ದೊಣ್ಣೆ ಎತ್ತಬೇಕಂತೆ! ಸರಿಯಾಗಿ ಹೇಳಿದಿ! ಹತ್ತರೊಟ್ಟಿಗೆ ಹನ್ನೊಂದಾಗಿ ಇವರಿಬ್ಬರ ತಲೆಗಳನ್ನೂ ಕಡಿದುಬಿಡುವೆಯೇನು? ಕಡಿ ಕಡಿ!" ಎಂದನು.

"ಎಲ್ಲವೂ ಕರಡಿಕೆಂಗಣ್ಣ ಮಹಾ ಮಾಂತ್ರಿಕರ ದಯೆ! ಅವರ ಆಜ್ಞೆಯಾದರೆ ಆ ಕೆಲಸ ಕೂಡಾ ಮಾಡಿಬಿಡುತ್ತೇನೆ. ಇತ್ತೀಚಿಗೆ ಒಂದೆರಡು ವಾರಗಳಿಂದ ನನ್ನ ಕೊಡಲಿಗೆ ನೆತ್ತರಿನ ಪಸೆಯೇ ಸಿಕ್ಕಿಲ್ಲ!" ಎಂದನು.

ಆಗ ದುರ್ಮುಖರಾಜನ ಅಶ್ವಿಕಭಟರಲ್ಲೊಬ್ಬನು ಕುದುರೆಯನ್ನು ತಟ್ಟಿ ಗಟ್ಟಿಯಾಗಿ ಕೂಗಿ "ಓಹೋ! ಇವರಾರೋ ನರಮಾಂಸ ಭಕ್ಷಕರು! ಮನುಷ್ಯನನ್ನು ಕೊಂದು ಕುತ್ತಿಗೆ ತಿರುಗಿಸಿ, ಕುದುರೆಯ ಮೇಲಿಟ್ಟು ನಗರಕ್ಕೆ ತೆಗೆದುಕೊಂಡು ಹೋಗುವುದೆಂದರೇನು? ಇಂಥಾ ಆಟ ನರಭಕ್ಷಕರದೇ!" ಎಂದನು.

ಕರಡಿಕೆಂಗಣ್ಣನು "ಛೀ ಛೀ!" ಎಂದು ಛೀತ್ಕರಿಸಿ, ಆ ಕುದುರೇ ಸವಾರರನ್ನು ಕಾಳೀವರ್ಮನಿಗೆ ತೋರಿಸುತ್ತ "ಕಾಳೀವರ್ಮ! ಈ ನಾಯಿಗಳ ಬೊಗಳುವಿಕೆಯನ್ನು ಇನ್ನೆಷ್ಟು ಹೊತ್ತು ಸಹಿಸುವುದು? ನನ್ನ ತಾಳ್ಮೆ ತಪ್ಪಿಹೋಗುತ್ತಿದೆ!" ಎಂದು ಗರ್ಜಿಸಿದನು. ಒಡನೇ ಕಾಳೀವರ್ಮನು, "ಎಲವೋ ದುರ್ಮು

ಖಿನ ದುಷ್ಟಬಂಟರೇ. ನೀವು ಮಾತಾಡದೆ ನಿಮ್ಮ ದಾರಿ ಹಿಡಿದು ಹೋಗುವಿರಾ, ತಲೆಗಳನ್ನು ಕಡಿಸಿ ಕೊಳ್ಳುವಿರಾ ?" ಎಂದು ಗರ್ಜಿಸಿ ಕೇಳಿದನು.

ಕಾಳೀವರ್ಮನ ವೀರಾವೇಶವನ್ನು ನೋಡಿ, ಜೀವ ಗುಪ್ತನೊಂದಿಗೆ ಬಂದಿದ್ದ ಆಶ್ವಿಕ ಭಟರಿಗೂ ಆವೇಶ ಬಂತು. ಅವರು ಢಾಲು ಮೇಲೆತ್ತಿ ಕತ್ತಿ ಹಿರಿದು, ತಮ್ಮ ಕುದುರೆಗಳನ್ನು ಆ ಸವಾರರ ಕಡೆಗೆ ಹಾರಿ ಸುತ್ತ, "ಇವರಿಬ್ಬರ ಸಮಾಚಾರ ನಮಗೆ ಬಿಡಿ! ಈ ಸೊಕ್ಕು ಹಿಡಿದವರು ತುಂಬ ಅವಮಾನವಾಗಿ ಬೊಗಳುತ್ತಾರೆ! ಪೂರಾ ನಿಲ್ಲಿಸಿಬಿಡುತ್ತೇವೆ" ಎನ್ನುತ್ತ ಅವರ ಮೇಲೆ ಬಿದ್ದರು.

ದುರ್ಮುಖಿನ ಆಶ್ವಿಕರು ಕೂಡಾ ಕತ್ತಿ ಹಿರಿದು ಆತ್ಮರಕ್ಷಣೆ ಮಾಡಿಕೊಳ್ಳುತ್ತ, ತಪ್ಪಿಸಿಕೊಂಡು ಓಡುತ್ತ, "ನೀವೆಲ್ಲರೂ ತಕ್ಕ ಫಲ ಅನುಭವಿಸುವಿರಿ! ಎಚ್ಚರವಾಗಿರಿ! ದುರ್ಮುಖಿ ಮಹಾರಾಜರು ಸಮೀಪದಲ್ಲೇ ಮಾವಿನ ತೋಪಿನಲ್ಲಿ ಬೀಡು ಬಿಟ್ಟಿದ್ದಾರೆ. ಈ ಕ್ಷಣವೇ ಬಂದು ನಿಮ್ಮೆಲ್ಲರನ್ನೂ ಚಿತ್ರ ವಧೆ ಮಾಡುತ್ತಾರೆ! ನೋಡುತ್ತಿರಿ!" ಎಂದು ಕೂಗಿ ಕೂಗಿ ಹೇಳಿದರು.

ಜೀವಗುಪ್ತನ ವೀರಭಟರಿಬ್ಬರೂ ಆ ಶತ್ರುಗಳನ್ನು ಬಹುದೂರದವರೆಗೆ ಓಡಿಸಿಕೊಂಡುಹೋದರು. ಕಡೆಗೆ ಅವರು ತಮ್ಮ ಕತ್ತಿಯ ಪೆಟ್ಟಿಗೆ ಸಿಕ್ಕುವುದಿಲ್ಲ ವೆಂದಾದ ಮೇಲೆ, ಅಷ್ಟಕ್ಕೇ ಬಿಟ್ಟು ಹಿಂದಿರುಗಿ ಬಂದರು.

ಅಷ್ಟರಲ್ಲಿ ಜೀವಗುಪ್ತನ ಭಟರಲ್ಲಿ ಒಬ್ಬನು, ಒಂದು ಕಡೆಗೆ ಕಣ್ಣಿಟ್ಟು ನೋಡಿ, ಬೇಗಬೇಗನೆ ಬರುತ್ತ ದೊಡ್ಡ ಸ್ವರದಿಂದ, "ಅಯ್ಯೋ, ಅತ್ತ ಕಡೆಯಿಂದ ಹತ್ತುಮಂದಿ ಶತ್ರುವಿನ ಕಡೆಯ ಕುದುರೇ ಸವಾರರು ನಮ್ಮ ಕಡೆಗೇ ಬರುತ್ತಿದ್ದಾರೆ!" ಎಂದು ಕೂಗಿದನು.

ನೋಡ ನೋಡುತ್ತಿದ್ದಂತೆ ಅವನು ಹೇಳಿದಂತೆಯೇ ಹತ್ತುಮಂದಿ ದುರ್ಮುಖಿನ ಕಡೆಯ ವೀರರು



ಸಮೀಪಕ್ಕೆ ಬರುವುದು ಕಂಡಿತು. ಆದರೆ ಅವರು ಕತ್ತಿಗಳನ್ನು ಹಿರಿದು ಯುದ್ಧಕ್ಕೆ ಬರುವವರಂತೆ ಕಾಣಲಿಲ್ಲ. ಅವರೆಲ್ಲ ಸ್ವಲ್ಪ ದೂರದಲ್ಲೇ ಗಕ್ಕನೆ ನಿಂತುಬಿಟ್ಟರು.

ಜೀವಗುಪ್ತನೇ ಮೊದಲಾದವರು ಆಶ್ಚರ್ಯದಿಂದ ನೋಡುತ್ತಿರಲು, ಅವರಲ್ಲೊಬ್ಬನು ತನ್ನ ದುಸ್ತಿನೊಳಗಿನಿಂದ ಉದ್ದವಾದ ಒಂದು ಪತ್ರವನ್ನು ಎತ್ತಿಕೊಂಡು ದೊಡ್ಡ ಸ್ವರದಿಂದ ಈ ರೀತಿಯಾಗಿ ಓದಿ ಹೇಳಿದನು:

"ಇದು ದುರ್ಮುಖಿ ಮಹಾರಾಜರ ಆಜ್ಞೆ! ಇಲ್ಲಿರುವವರೆಲ್ಲರೂ ಕೂಡಲೇ ನಮ್ಮೊಂದಿಗೆ ಹೊರಟು, ಮಾವಿನ ತೋಪಿನಲ್ಲಿ ತಂಗಿರುವ ದುರ್ಮುಖಿ ಮಹಾರಾಜರ ಬಳಿಗೆ ಬರತಕ್ಕದ್ದು. ತಪ್ಪಿದಲ್ಲಿ ಬಲವಂತವಮಾಡಬೇಕಾಗುತ್ತದೆ!"

ಇದನ್ನು ಕೇಳಿ ಎಲ್ಲರೂ ಬೆರಗಾದರು. ಕರಡಿ ಕೆಂಗಣ್ಣನು ತಾನು ಕುಳಿತ ಕೋಣವನ್ನು ದುರ್ಮುಖಿನ

ಕಡೆಯುವರ ಬಳಿಗೆ ಕರೆದೊಯ್ಯುವಂತೆ ಮಂತ್ರಿ ಜೀವಗುಪ್ತನಿಗೆ ಹೇಳಿ, ದುರ್ಮುಖನ ಆಶ್ವಿಕರನ್ನು ನೋಡಿ, "ದುರ್ಮುಖರಂತಹ ಮಹಾಪ್ರಭುಗಳು ಆಜ್ಞೆ ಮಾಡಿದ್ದಾರೆಂದರೆ ಅದಕ್ಕೆ ಇದಿರಾವುದಿದ್ದೀತು ? ಹೂಂ, ಅವರ ಮಾವಿನ ತೋಪಿಗೆ ಹೋಗೋಣ, ನಡೆಯಿರಿ" ಎಂದನು.

"ಇದೇನು ಗುರುಗಳೇ ?" ಎಂದು ಕಾಳೀವರ್ಮನು ಆಶ್ಚರ್ಯದಿಂದ ಕೇಳಿದನು. "ನಿನ್ನ ಕಣ್ಣೆದಿರಿನಲ್ಲೇ ಎಲ್ಲವೂ ಗೊತ್ತಾಗುತ್ತದೆ. ಸುಮ್ಮನಿರು" ಎಂದ ಕರಡಿಕೆಂಗಣ್ಣ.

ದುರ್ಮುಖನ ಆಶ್ವಿಕಭಟರು ಅವರನ್ನೆಲ್ಲಾ ನೆಟ್ಟಗೆ ಮಾವಿನ ತೋಪಿಗೆ ಕರೆದುಕೊಂಡು ಹೋದರು.

ದುರ್ಮುಖರಾಜನು ಒಂದು ಎತ್ತರವಾದ ಆಸನದ ಮೇಲೆ ಕುಳಿತುಕೊಂಡಿದ್ದನು. ಅವನ ಎರಡು ಬದಿಗಳಲ್ಲಿ ಒಬ್ಬೊಬ್ಬರು ಬಿಚ್ಚುಗತ್ತಿಯ ವೀರರು ನಿಂತಿದ್ದರು. ಸ್ವಲ್ಪದೂರ ಮಂತ್ರಿಗಳೂ ಇತರ ಅಧಿಕಾರಿಗಳೂ ನಿಂತುಕೊಂಡಿದ್ದರು.

ಕರಡಿಕೆಂಗಣ್ಣನನ್ನೂ, ಅವನೊಂದಿಗಿದ್ದವರನ್ನೂ ನೋಡಿದ ಕೂಡಲೇ ದುರ್ಮುಖನು "ಬಂದಿರಾ ನನ್ನ ಮುಂದೆ ? ಎಲೈ ದುಷ್ಟರೇ, ನಿಮ್ಮನ್ನು ಕುರಿತು ಸಕಲ ಸಮಾಚಾರವೂ ನನಗೆ ಗೊತ್ತಾಗಿದೆ. ನಿಮ್ಮನ್ನೆಲ್ಲಾ ಬದುಕಲು ಬಿಡುವುದೇ ತಪ್ಪು. ಈ ಕಟುಕನಾಯಕನಿಂದ ಹಿಡಿದು ನಿಮ್ಮೆಲ್ಲರ ತಲೆಗಳನೂ ಹಾರಿಸಿಬಿಡುತ್ತೇನೆ. ಕಟ್ಟಕಡೆಗೆ ಕಾಳೀವರ್ಮನ ತಲೆ !" ಎಂದನು ಹಲ್ಲು ಕಡಿಯುತ್ತ.

ದುರ್ಮುಖನ ಗರ್ಜನೆ ನಿಂತಕೂಡಲೇ, ಕರಡಿ ಕೆಂಗಣ್ಣನು ಗಡಗಡ ನಡುಗಿ "ಜೈ ಆದಿಭಲ್ಲೂಕಾ!" ಎಂದು ಗಟ್ಟಿಯಾಗಿ ಕೂಗಿ, ಕೋಣದ ಮೇಲಿನಿಂದ ಕೆಳಗೆ ಹಾರಿ, ಹೆದರಿ ನಡುಗುತ್ತಿದ್ದ ಕಟುಕನಾಯಕನನ್ನು ನೋಡಿ, "ಕೇಳಿದೆಯಾ ? ಈಗ ಮೊದಲನೇ ಬಲಿ ನೀನೇ ! ಈ ದುರ್ಮುಖನು ಹೇಳುತ್ತಾನೆ. ನಿನ್ನ ತಲೆಯನ್ನು ಈ ದುರ್ಮುಖನೇ ಕಡಿಯುತ್ತಾನೋ, ನೀನೇ ದುರ್ಮುಖನ ತಲೆ ಕಡಿಯುತ್ತೀಯೋ ಈ ಕ್ಷಣದಲ್ಲಿ ಗೊತ್ತಾಗಿಬಿಡುತ್ತದೆ ! ಜೈ ಆದಿಭಲ್ಲೂಕಾ !" ಎನ್ನುತ್ತ ತನ್ನ ಮಂತ್ರದಂಡದ ಕರಡಿ ತಲೆಯಿಂದ ಅವನ ಬೆನ್ನನ್ನು ಸವರಿದನು.

ಮರುಕ್ಷಣದಲ್ಲಿ ಕಟುಕನಾಯಕನು ಕರ್ರಗಿನ ಕರಡಿಯಾಕಾರವನ್ನು ತಾಳಿ, ತನ್ನ ಚಪಗೊಡಲಿಯನ್ನು ಗಿರ್ರನೆ ತಿರುಗಿಸುತ್ತ ಕುದುರೆಯ ಮೇಲಿನಿಂದ ಕೆಳಗೆ ಧುಮುಕಿದನು. ಅವನ ಭೀತಿ ನಡುಕಗಳೆಲ್ಲ ಎಲ್ಲಿ ಹಾರಿಹೋದುವೋ ಏನೋ ! ಅವನು ಧುಮುಕಿದ ರಭಸದಲ್ಲೇ ಯಾವುದೋ ಭೀಕರಮೃಗದಂತೆ ಕರ್ಣಕಠೋರವಾಗಿ ಗರ್ಜಿಸುತ್ತ ದುರ್ಮುಖರಾಜನ ಕಡೆಗೆ ಕುಪ್ಪಳಿಸಿಕೊಂಡು ಓಡಿದನು. (ಇನ್ನೂ ಇದೆ)





# ಕರಡಿಕೆಂಗಣ್ಣ

೫

[ಜಿತಕೇತುರಾಜನನ್ನು ಶಿಕ್ಷಿಸಲು ಕರಡಿಕೆಂಗಣ್ಣನು ಕಾಳೀವರ್ಮ ಮೊದಲಾದವರನ್ನು ಕರೆದುಕೊಂಡು ನಗರದ ಕಡೆಗೆ ಹೋಗುವಾಗ, ದುರ್ಮುಖರಾಜನ ಸೈನಿಕರು ಅವರ ದಾರಿಯನ್ನು ಅಡ್ಡಗಟ್ಟಿದರು. ಕರಡಿಕೆಂಗಣ್ಣನು ದುರ್ಮುಖನ ಬಳಿಗೆ ಹೋಗಿ, ಕಟುಕನಾಯಕನನ್ನು ತನ್ನ ಮಂತ್ರದಂಡದಿಂದ ಮುಟ್ಟಿದ ಕೂಡಲೇ, ಅವನು ಭಯಂಕರ ಭಲ್ಲೂಕವಾಗಿ ಚಪಗೊಡಲಿಯನ್ನು ತಿರುಗಿಸುತ್ತಾ ದುರ್ಮುಖನ ಕಡೆಗೆ ಓಡಿದನು.]

ಮನುಷ್ಯನಾಗಿದ್ದ ಕಟುಕರನಾಯಕನು ಭಯಂಕರವಾದ ಕರಡಿಯ ರೂಪತಾಳಿದುದನ್ನು ನೋಡಿ ಎಲ್ಲರೂ ಭಯಾಶ್ಚರ್ಯಗಳಿಂದ ಸ್ತಂಭಿಸಿಹೋದರು. ಕಟುಕಕರಡಿ ಹಲ್ಲು ತೋರಿಸಿ ಕಿರಿಚುತ್ತ, ತಳತಳನೆ ಹೊಳೆಯುವ ಚಪಗೊಡಲಿಯನ್ನೆತ್ತಿಕೊಂಡು ತನ್ನ ಕಡೆಗೆ ಬರುವುದನ್ನು ನೋಡಿ ದುರ್ಮುಖರಾಜನು ಮರಗಟ್ಟಿದಂತಾದನು.

ಅಷ್ಟರಲ್ಲಿ ಕರಡಿರೂಪದ ಕಟುಕಪ್ರಮುಖ ತನಗೆ ಅಡ್ಡನಿಂತಿದ್ದ ದುರ್ಮುಖರಾಜನ ಅಂಗರಕ್ಷಕರಿಬ್ಬರನ್ನು ಕಾಲಿನಿಂದ ಬಲವಾಗಿ ಒದ್ದು ಜಾಡಿಸಲು, ಅವರಿಬ್ಬರೂ ದಡಾರನೆ ಮಗುಚಿ ಬಿದ್ದರು. ಮರುನಿಮಿಷದಲ್ಲಿ ಕಟುಕಕರಡಿ ದುರ್ಮುಖರಾಜನ ಉಚ್ಚಾಸನದ ಮೇಲೆ ಹಾರಿತು.

ಅದು ತನ್ನನ್ನು ಅಪ್ಪಚ್ಚಿ ಮಾಡುವುದರೊಳಗೆ ಎಚ್ಚೆತ್ತ ದುರ್ಮುಖನು ಆಚೆಗೆ ಹಾರಿ ತಪ್ಪಿಸಿಕೊಂಡು, "ಏನು ನೋಡ್ತೀರೋ! ಯಾರಲ್ಲಿ? ನಮ್ಮ ಸೈನಿಕರೆಲ್ಲಾ ಎಲ್ಲಿ ಸತ್ತರು? ಈ ಹುಚ್ಚು ಕರಡಿಯನ್ನು ಬಡಿಯಿರಿ! ಕಡಿಯಿರಿ!" ಎಂದು ಕೂಗುತ್ತಾ ಸ್ವಲ್ಪದೂರದವರೆಗೆ ಓಡಿ ತನ್ನ ಕುದುರೆಯ ಮೇಲೆ ಹಾರಿ ಕುಳಿತನು.



ಅವನೊಂದಿಗೇ ಮತ್ತೊಬ್ಬ ಅಂಗರಕ್ಷಕನೂ ಓಡುತ್ತಾ ಹೋಗಿ ಇನ್ನೊಂದು ಕುದುರೆಯ ಮೇಲೆ ಏರಿಕೊಂಡು ರಾಜನನ್ನು ಅನುಸರಿಸಿದನು. ಅವನು ರಾಜನ ಸಮೀಪ ಹೋಗಿ ತೇಕುತ್ತ, "ಮಹಾರಾಜರೇ, ನಾವೀಗ ಇಲ್ಲಿಂದ ಓಡಿ ಹೋಗುವುದೇ ಒಳ್ಳೆಯದು. ನಮ್ಮ ಸೈನಿಕರು ಎಲ್ಲಿಯೋ ನದಿಯ ಬದಿಯಲ್ಲಿ ಗುಡಾರಗಳಲ್ಲಿದ್ದಾರೆ. ಅವರಿಗೆ ಸುದ್ದಿ ಕಳುಹಿಸಿ, ಅವರು ಸಿದ್ಧರಾಗಿ ಬರುವುದರೊಳಗೆ, ಈ ದುಷ್ಟಮಾಂತ್ರಿಕ ತನ್ನ ಕರಡಿಯ ಮೂಲಕ ನಮ್ಮೆಲ್ಲರನ್ನೂ ಹತ ಮಾಡುತ್ತಾನೆ. ನಾವೀಗ ಅವನ ಮಂತ್ರಕ್ಕೆ ಸಿಕ್ಕದೆ ಆದಷ್ಟು ಬೇಗ ಓಡಿಬಿಡಬೇಕಾದ ಗಳಿಗೆಯಿದು!" ಎಂದನು.

ಅಂಗರಕ್ಷಕನು ಹೀಗೆ ಪುಕ್ಕಲು ಮಂತ್ರ ಹೇಳುತ್ತಿರಲು, ದುರ್ಮುಖರಾಜನು ಹಿಂದಿರುಗಿ ನೋಡಿದನು. ಕರಡಿಯಾದ ಕಟುಕರನಾಯಕ ಹಿಂದೆಯೇ ಓಡಿ ಬರುತ್ತಿದ್ದಾನೆ! ಅವನು ಕುದುರೆಯನ್ನು ಒದ್ದು ಹುರುಡಿಸಿ ಜೋರಾಗಿ ಓಡಿಸತೊಡಗಿದನು. ಕುದುರೆಯೂ ಕರಡಿಯನ್ನು ನೋಡಿ ಹೆದರಿ, ಕಡಿವಾಣವನ್ನು ಬಿಡಿಸಿಕೊಳ್ಳುತ್ತ ಅತಿವೇಗವಾಗಿ ಓಟ ತೆಗೆಯಿತು.

ದರ್ಪತೋರಿಸಿ ಆಜ್ಞೆಮಾಡಿದ ದುರ್ಮುಖರಾಜನು ತನ್ನ ಅಂಗರಕ್ಷಕನೊಂದಿಗೆ ಹೆದರಿ ನೀರಾಗಿ ಓಡುವ ಚೆಂದವನ್ನು ನೋಡಿ ಕಾಳೀವರ್ಮನಿಗೆ ಏಕೋ ನಿರುತ್ಸಾಹವೆನಿಸಿತು.

ಅವನು ಕರಡಿಕೆಂಗಣ್ಣನೊಂದಿಗೆ, "ಗುರುವೇ, ಇಲ್ಲಿಯ ನೆರೆಹೊರೆ ರಾಜ್ಯಗಳ ರಾಜರೆಂದು ಹೆಮ್ಮೆಪಡುವ ಇಬ್ಬರು ರಾಜರಲ್ಲಿ ಒಬ್ಬನು ಕೈಗೆ ಸಿಕ್ಕಿಯೂ ತಪ್ಪಿಸಿಕೊಂಡು ಹೋಗುತ್ತಿದ್ದಾನೆ. ಕರಡಿಯಾದ ನಮ್ಮ ಕಟುಕನಾಯಕ ಅವನ ಬೆನ್ನು ಹತ್ತಿ ಹಿಡಿದುಕೊಳ್ಳುವನೆಂಬ ನಂಬುಗೆ ನನಗೆ ಕಾಣುವುದಿಲ್ಲ. ರಾಜನು ಕುದುರೇ ಮೇಲೆ ಬಲುವೇಗವಾಗಿ ಓಡುತ್ತಿದ್ದಾನೆ" ಎಂದನು.

ಕರಡಿಕೆಂಗಣ್ಣನು ತಲೆಯಾಡಿಸುತ್ತಾ, ಓಡುತ್ತಿರುವವರನ್ನು ನೋಡಿ, "ಚಿಂತಿಸಬೇಡ ಕಾಳೀವರ್ಮಾ. ಸ್ವಲ್ಪ ತಾಳು. ಆ ರಾಜ ನಮ್ಮ ಕಟುಕನಾಯಕನ ಚಪಗೊಡಲಿಗೆ ಸಿಗದೇಹೋದರೆ ನೀನೂ ಸುಮ್ಮನಿರುವವನಲ್ಲ, ನಾನೂ ಸುಮ್ಮನಿರುವವನಲ್ಲ. ನೋಡೋಣ ಬಿಡು" ಎಂದು ಹೇಳಿ, ಅಲ್ಲಿ ಪ್ರಾಣಭೀತಿಯಿಂದ ನಡುಗುತ್ತಾ ನಿಂತಿರುವ ದುರ್ಮುಖನ ಮಂತ್ರಿಯೇ ಮೊದಲಾದವರನ್ನು ನೋಡಿ, ಕೆಂಗಣ್ಣಿನಿಂದ ಹೆದರಿಸುತ್ತ, "ಓಹೋ! ವೀರಾಧಿವೀರರಾದ ನೀವೆಲ್ಲಾ ಚಂದ್ರಶಿಲಾನಗರದ ಮೇಲೆ ದಾಳಿ ತೆಗೆಯಲು ಬಂದವರಲ್ಲವೇ? ನಿಮ್ಮ ಜತೆಯಲ್ಲಿ ಸೈನ್ಯವೂ ಬಂದಿರ ಬೇಕಷ್ಟೆ? ಸೈನ್ಯವೆಲ್ಲಾ ಎಲ್ಲಿದೆ? ಆಂ?" ಎಂದು ಕೇಳಿದನು.

ಆ ಪ್ರಶ್ನೆಗೆ ಉತ್ತರ ಕೊಡದೆ 'ನೀನು ಉತ್ತರ ಕೊಡು, ಅವನು ಕೊಡಲಿ' ಎಂಬಂತೆ ಅವರೆಲ್ಲ

ಮುಖಮುಖ ನೋಡಿಕೊಳ್ಳುತ್ತಿರಲು, "ಏನಾಯಿತು ನಿಮಗೆ? ಕಿವಿ ಕೆಪ್ಪೇ? ಬಾಯಿ ಬಿದ್ದಿತೇ?" ಎಂದು ಅಧಟಿದನು ಕರಡಿಕೆಂಗಣ್ಣ.

ಆಗ ಅವರಲ್ಲೊಬ್ಬ ನಡುಗುವ ಸ್ವರದಿಂದ, "ಮಹಾಮಾಂತ್ರಿಕರಾದ ತಮಗೆ ಗೊತ್ತಿಲ್ಲದ್ದೇನೂ ಇಲ್ಲ. ಆದರೂ ಕೇಳುವಿರಿ, ಹೇಳುತ್ತೇವೆ. ಅವರೆಲ್ಲಾ ನದಿಯ ಬದಿಯಲ್ಲಿ ಗುಡಾರಗಳಲ್ಲಿದ್ದಾರೆ. ಬರಲಿರುವ ಯುದ್ಧದಲ್ಲಿ ಶತ್ರುಗಳನ್ನು ಸದೆಬಡೆಯುಲು ಈಗ ತಮ್ಮ ಆಯುಧಗಳನ್ನು ಮಸೆದುಕೊಂಡಿರಬಹುದು" ಎಂದನು.

ಅದನ್ನು ಕೇಳಿ ಕರಡಿಕೆಂಗಣ್ಣನು ಗಡಗಡನೆ ನಕ್ಕನು. ಒಂದು ಬದಿಯಲ್ಲಿ ನಿಂತು ಅತ್ಯಾಶ್ಚರ್ಯದಿಂದ ನೋಡುತ್ತಿದ್ದ ಜೀವಗುಪ್ತನನ್ನು ನೋಡಿ ಕರಡಿಕೆಂಗಣ್ಣ ಮಾಂತ್ರಿಕನು, "ಎಲೋ ಚಂದ್ರಶಿಲಾ ನಗರದ ಮಹಾಮಂತ್ರಿಯೇ! ದುರ್ಮುಖನ ಕಡೆಯ ಮಂತ್ರಿಗಳು ಹೇಳಿದ ಮಾತನ್ನು ಕೇಳಿದೆಯಾ?" ಎಂದನು.

"ಕೇಳಿದೆನಯ್ಯಾ ಕೇಳಿದೆನು. ಇದನ್ನೆಲ್ಲಾ ನೋಡುವಾಗ ನನಗೆ ಬುದ್ಧಿಯೇ ಕೆಡುವ ಹಾಗಾಗಿದೆ. ಹಿಂದೆ ಮುಂದೆ ಒಂದೂ ತೋರುವುದಿಲ್ಲ. ನಿಮ್ಮ ಆಜ್ಞೆಯನ್ನೇ ಎದುರುನೋಡುತ್ತಿದ್ದೇನೆ" ಎಂದ ಮಂತ್ರಿ ಜೀವಗುಪ್ತ.

"ಭೇಷ್! ಭೇಷ್! ಹಾಗನ್ನು. ನಾನೂ ಕಾಳೀವರ್ಮನೂ ಈ ರಾಜ್ಯಗಳ ಗೊಡವೆ ಬಿಟ್ಟು ಹಿಮಾಲಯಪರ್ವತ ಶಿಖರಗಳಾಚೆಗಿರುವ ಕಣಿವೆಯೊಳಗೆ ಹೋಗಿ ಸೇರುವುದರೊಳಗೆ, ಇನ್ನೂ ಕೆಲವರಿಗೆ ಹಿಡಿದ ಅಹಂಕಾರವನ್ನು ಬಿಡಿಸಿ ಅವರ ಬುದ್ಧಿಯನ್ನೂ ಪೂರ್ತಿ ಕೆಡಿಸಬೇಕೆಂದಿದ್ದೇನೆ. ಆಗಬಹುದಷ್ಟೆ?" ಎಂದು ಕರಡಿಕೆಂಗಣ್ಣನು ಮಂತ್ರದಂಡವನ್ನು ಗಟ್ಟಿಯಾಗಿ ನೆಲಕ್ಕೆ ಠಂಗಠಂಗನೆ ಕುಟ್ಟಿದನು. "ಎಲ್ಲವೂ ತಮ್ಮ ದಯೆ!" ಎಂದು ಮಂತ್ರಿ



ಜೀವಗುಪ್ತನು ತಲೆಬಾಗಿ ಕೈಮುಗಿದನು. ಕರಡಿಕೆಂಗಣ್ಣನು ಮತ್ತೇನೋ ಹೇಳಲಿರುವಾಗ, ಕಾಳೀವರ್ಮನು ಮಾವಿನ ತೋಪಿನಾಚೆಗೆ ದೂರಕ್ಕೆ ಕಣ್ಣೋಡಿಸುತ್ತ "ಗುರುವೇ, ಅತ್ತ ಕಡೆಯಿಂದ ಬಹಳ ಮಂದಿ ಸೈನಿಕರು ಕತ್ತಿಗಳನ್ನೂ ಈಟಿಗಳನ್ನೂ ಎತ್ತಿ ಹಿಡಿದುಕೊಂಡು ನಮ್ಮ ಕಡೆಗೆ ಬರುತ್ತಿದ್ದಾರೆ!" ಎಂದು ಹೇಳಿ ಒರೆಯೊಳಗಿನಿಂದ ಕತ್ತಿಯನ್ನು ಹಿರಿದು, ಅಲ್ಲಿ ನಿಂತಿರುವ ಜಿತಕೇತುರಾಜನ ಸೈನಿಕರನ್ನು ನೋಡಿ ಸಿದ್ಧರಾಗುವಂತೆ ಹೂಂ ಎಂದು ಕಣ್ಣುಹಾರಿಸಿ ಸನ್ನೆಮಾಡಿದನು.

ಆಗ ಕರಡಿಕೆಂಗಣ್ಣನು ಭಯಕಂಪಿತರಾಗಿ ನಿಂತಿದ್ದ ದುರ್ಮುಖರಾಜನ ಕಡೆಯವರನ್ನು ನೋಡಿ, "ಅಲ್ಲಿ ಬರುವ ಸೈನಿಕರು ನಿಮ್ಮ ಕಡೆಯವರೇ. ಈಗ ನಿಮ್ಮಲ್ಲಿ ಒಬ್ಬನು ಮುಂದಾಗಿ ಹೋಗಿ ಇಲ್ಲಿ ನಿಮ್ಮ ರಾಜನಿಗೆ ಹಿಡಿದ ದುಃಸ್ಥಿತಿ ಏನೆಂಬುದನ್ನು ಆ ಸೈನಿಕರ ದಳಪತಿಯೊಂದಿಗೆ ಹೇಳಿರಿ. ನಿಮ್ಮ ಮಾತು



ಕೇಳದೆ ಅವನು ಮೂರ್ಖತನದಿಂದ ನನ್ನವರ ಮೇಲೆ ದಾಳಿ ಮಾಡಲು ಯತ್ನಿಸಿದ ಪಕ್ಷದಲ್ಲಿ ನಿಮ್ಮನ್ನೆಲ್ಲಾ ಹುಲಿಗಳನ್ನಾಗಿ, ಅವರನ್ನೆಲ್ಲಾ ಚಿಗರೆಗಳನ್ನಾಗಿ ಮಾರ್ಪಡಿಸಿ ನಿಮ್ಮ ಹೊಟ್ಟೆಗಳಿಗೆ ಅವರನ್ನೇ ಆಹಾರವಾಗಿ ಒಡ್ಡಿಬಿಡುತ್ತೇನೆ! ಜೋಕೆ!" ಎಂದನು.

"ನಿಜ ನಿಜ! ಮಹಾಮಾಂತ್ರಿಕರಾದ ನೀವು ಹಾಗೂ ಮಾಡುವಿರಿ. ನಮ್ಮ ಕಣ್ಣೆದಿರೇ ಕಟುಕನಾಯಕನನ್ನು ಭಯಂಕರ ಶಕ್ತಿಯು ಕರಡಿಯಾಗಿ ಮಾಡಿದಿರಲ್ಲಾ? ಏನಾಶ್ಚರ್ಯ! ಅಬ್ಬಬ್ಬಾ!" ಎಂದನು ಜೀವಗುಪ್ತ.

ಇದನ್ನು ಕೇಳಿ ದುರ್ಮುಖರಾಜನ ಮಂತ್ರಿ ಮೊದಲಾದವರಿಗೆ ಏನೂ ತೋರದೆ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಆಮೇಲೆ ಅವರಲ್ಲಿ ಒಬ್ಬನು ಅಲ್ಲಿಂದ ಹೊರಟು, ತಮ್ಮ ಕಡೆಗೆ ಬರುವ ಸೈನಿಕರ ಬಳಿಗೆ ಹೋಗಿ, ದಳಪತಿಯನ್ನು ಸಂಧಿಸಿ, ನಡೆದ ಸಂಗತಿಯನ್ನೆಲ್ಲಾ ಹೇಳಿ, "ಹೀಗಾದುದು ನಿಜ. ನಮ್ಮ ಮಹಾರಾಜರು ಜೀವದೊಂದಿಗೆ ನಮ್ಮ ಕಣ್ಣಿಗೆ ಬೀಳುವವರೆಗೆ ನಾವು ಈ ಭಯಂಕರನಾದ ಮಂತ್ರಗಾರನು ಹೇಳಿದ ಹಾಗೆ ಕೇಳುವುದೇ ಒಳ್ಳೆಯದು. ಹೆಚ್ಚು ಕಡಿಮೆಯಾದರೆ ಆಗಬಾರದ್ದೇ ಆದೀತು! ಆದುದರಿಂದ ನೀವು ದುಡುಕಬಾರದು" ಎಂದನು.

ಆ ಮಾತು ಕೇಳಿ ದಳಪತಿಗೆ ಕೋಪವೇ ಬಂದಿತು. ಅವನು ತನ್ನೊಂದಿಗಿರುವ ಐವತ್ತುಮಂದಿ ಸೈನಿಕರನ್ನು ನೋಡಿ, "ಇವನು ಹೇಳಿದ್ದನ್ನು ನೀವೂ ಕೇಳಿದಿರಷ್ಟೆ? ಇದೆಲ್ಲವೂ ಕೇವಲ ಕಣ್ಣುಕಟ್ಟು ಆಟವೆಂದೇ ನನಗೆ ತೋರುತ್ತದೆ. ನಾವಿಷ್ಟುಮಂದಿ ಆಯುಧಪಾಣಿಗಳು ಒಮ್ಮೆಗೇ ಹೋಗಿ ಆ ಮಂತ್ರವಾದಿಯ ಮೇಲೆ ಬಿದ್ದು, ಅವನನ್ನೂ ಅವನ ಅನುಚರರನ್ನೂ ಚಚ್ಚಿಹಾಕಬಹುದು. ಏನನ್ನುವಿರಿ?" ಎಂದನು.

"ಆದರೂ ಅವನು ಮಂತ್ರಗಾರನೆಂಬುದನ್ನು ಮರೀಬಾರದು. ಅವನು ಛೂ ಅಂದು ಒಮ್ಮೆಗೇ ನಮ್ಮನ್ನೆಲ್ಲಾ ಚಿಗರೆಯಾಗಿ ಹುಲಿಗಳಾಗಿ ಮಾರ್ಪಡಿಸಿಬಿಟ್ಟರೆ ಏನು ಗತೀ? ಕಣ್ಣುಕಟ್ಟು ವಿದ್ಯೆ ಅಂದರೆ ಬೆಂಕೀ ಇದ್ದ ಹಾಗೆ. ನಮಗೆ ಎಂಥ ದುರ್ಗತಿ ಬಂದೀತೆಂಬುದನ್ನು ಆಲೋಚಿಸಲೇ ಬೇಕಲ್ಲವೇ?" ಎಂದು ಗುಂಪಿನಲ್ಲಿದ್ದ ಒಬ್ಬ ಸೈನಿಕನು ಹೇಳಿ, ಎಲ್ಲರ ಕಡೆಗೂ ನೋಡಿದನು.

"ಅಯ್ಯಾ, ದಳಪತಿಗಳೇ, ನಾವು ದುರ್ಮುಖಿ ಮಹಾರಾಜರ ಉಪ್ಪು ತಿನ್ನುವವರಾದುದರಿಂದ, ಆಗತ್ಯಬಿದ್ದರೆ ಅವರಿಗಾಗಿ ಪ್ರಾಣವನ್ನಾದರೂ ಕೊಡಬೇಕಾದ್ದೇ. ಆದರೆ ಈಗ ಕೇಳಿದ ಸಮಾಚಾರದಿಂದ, ಮಹಾರಾಜರು ಇನ್ನೂ ಜೀವದೊಂದಿಗಿದ್ದಾರೆಂಬ ನಂಬುಗೆ ಏನು? ಮಂತ್ರದ ಮನುಷ್ಯ ಕರಡಿ ಅವರ ಬೆನ್ನಟ್ಟಿದೆಯಲ್ಲ? ಆ ಭಯಂಕರ ಭಲ್ಲೂಕದ ಚಪಗೊಡಲಿಯಿಂದ ಮಹಾರಾಜರ ತಲೆ ಉರುಳಿಬಿದ್ದಿ

ರಲೂಬಹುದಷ್ಟೆ? ಹಾಗಿದ್ದರೆ ನಮ್ಮ ಸಾಹಸವೂ ರಾಜಭಕ್ತಿಯೂ ವ್ಯರ್ಥತಾನೇ? ಸುಮ್ಮಸುಮ್ಮನೆ ಬಾವಿಗೆ ಬೀಳಲೇ ಬೇಕೆ?" ಎಂದು ಇನ್ನೊಬ್ಬ ಸೈನಿಕನು ಮುಂದೆ ಬಂದು ಹೇಳಿದನು.

ಆ ಸೈನಕನ ಮಾತನ್ನು ಕೇಳುವಾಗ ದಳಪತಿಯ ಮನಸ್ಸಿನಲ್ಲಿ ಒಂದು ಮಿಂಚು ಹೊಳೆಯಿತು. ಆದರ ಬೆನ್ನಿಗೆ ದುರಾಶೆಯ ಹೆಡೆಯೊಂದು ಆಡತೊಡಗಿತು. ಅವನು ಸುತ್ತಲೂ ನೋಡುತ್ತ, ಮಹಾರಾಜರು ಸತ್ತುಗಿತ್ತು ಹೋಗಿದ್ದರೆ ಸಿಂಹಾಸನಕ್ಕಾಗಿ ತಾನೇಕೆ ಪ್ರಯತ್ನಿಸಬಾರದು? ಎಂದುಕೊಳ್ಳುತ್ತ, ಸೈನಿಕರನ್ನು ಕುರಿತು, "ಹಾಗಾದರೆ ಒಂದು ಮಾಡುವ. ನಾವೀಗ ಚಂದ್ರಶಿಲಾನಗರದ ಕಡೆಗೆ ದಾಳಿ ಹೊರಡುವುದನ್ನು ನಿಲ್ಲಿಸಿ, ಉಳಿದ ಸೈನಿಕರೊಂದಿಗೆ ಕೂಡಿ ಉದಯಗಿರಿ ನಗರಕ್ಕೆ ಹಿಂದಿರುಗಿಬಿಡುವುದೇ ಒಳ್ಳೆಯದು. ಈ ಮಂತ್ರವಾದಿಯ ತಂಟೆಯೇ ನಮಗೆ ಬೇಡ" ಎಂದನು.

ಹೀಗೆ ಅವನು ಆಲೋಚನೆ ಮಾಡುತ್ತಿರಲು, ಕರಡಿಕೆಂಗಣ್ಣನು ಅಲ್ಲಿಗೆ ಬಂದು ತನ್ನ ಬಳಿಯಲ್ಲಿದ್ದ ಕಾಳೀವರ್ಮನಿಗೆ ಕಣ್ಣು ಸನ್ನೆ ಮಾಡಿ, "ಕಾಳೀವರ್ಮ, ಈ ದುರ್ಮುಖರಾಜನ ಸೈನಿಕರಿಗೆಲ್ಲ ನಿನ್ನನ್ನೇ ನಾಯಕನನ್ನಾಗಿ ನಿಯಮಿಸುತ್ತೇನೆ. ಈ ದಳಪತಿ ತನ್ನ ಕತ್ತಿಯನ್ನು ನಿನ್ನ ಕೈಗೆ ಒಪ್ಪಿಸತಕ್ಕದ್ದು. ಕೇಳಿ ನೋಡು! ಒಳ್ಳೆಯ ಮಾತಿನಲ್ಲಿ ಕೊಟ್ಟರೆ ಸರಿ" ಎಂದನು. ಈ ಮಾತು ದಳಪತಿಯ ಎದೆಯನ್ನು ಜುಪ್ಪೆನಿಸಿತು.

ಕಾಳೀವರ್ಮನು ಆ ದಳಪತಿಯ ಬಳಿಗೆ ಹೋಗಿ, "ನಮ್ಮ ಗುರುಗಳು ಹೇಳಿದ ಮಾತು ಕೇಳಿದೆಯಷ್ಟೆ? ಎಲ್ಲಿ, ನಿನ್ನ ಕತ್ತಿಯನ್ನು ನನ್ನ ಕೈಗೆ ಕೊಡುವೆಯಾ? ಅಥವಾ ನೆಲಕ್ಕೆ ಜಾರಬಿಡುವೆಯಾ? ಎರಡರಲ್ಲೊಂದು ಬೇಗ ಮಾಡು" ಎಂದನು. ಆ ದಳಪತಿ ಅನುಮಾನಪಡುತ್ತ, ಕಾಳೀವರ್ಮನ



ಕಡೆಗೂ, ಕರಡಿಕೆಂಗಣ್ಣನ ಕಡೆಗೂ ನೋಡುತ್ತ, ಕತ್ತಿ ಹಿಡಿದ ಕೈ ನಡುಗುತ್ತಿರಲು, "ಕತ್ತಿಯನ್ನು ನಿಮ್ಮ ಸ್ವಾಧೀನ ಮಾಡುವುದೆಂದರೆ, ನಾನು ನನ್ನ ಒಡೆಯರಾದ ದುರ್ಮುಖ ಮಹಾರಾಜರಿಗೆ ದ್ರೋಹ ಬಗೆದಂತೆ ಆಗುವುದಿಲ್ಲವೇ? ನನ್ನನ್ನು ರಾಜದೋಹ ಮಾಡುವಂತೆ ನಿಮ್ಮಂಥವರು ಹೇಳಬಹುದೇ?" ಎಂದನು.

"ನಿನ್ನದು ಬುದ್ಧಿವಂತಿಕೆಯ ಅಭಿಪ್ರಾಯವೇನೋ ಹೌದು. ಆದರೆ ನಿನ್ನ ರಾಜ ಒಂದು ಕರಡಿಗೆ ಹೆದರಿ, ನಿಮ್ಮನ್ನೆಲ್ಲಾ ನಿಮ್ಮ ನಿಮ್ಮ ಕರ್ಮಕ್ಕೇ ಬಿಟ್ಟು ಓಡಿಹೋಗಿದ್ದಾನೆ. ಅದು ಯಾವ ಬಗೆಯ ಪ್ರಭುಲಕ್ಷಣ?" ಎಂದು ಹೇಳಿ ಕರಡಿಕೆಂಗಣ್ಣನು, ದಳಪತಿಯ ಹತ್ತಿರವಿದ್ದ ಒಬ್ಬ ಸೈನಿಕನ ಕೈಯನ್ನು ಹಿಡಿದು ಹಿಂದಕ್ಕೆ ತಿರುಗಿಸಿ, ಅವನ ಬೆನ್ನಿನ ಮೇಲೆ ಮಂತ್ರದಂಡವನ್ನು ತಾಗಿಸಿ, "ಇಗೋ ಇವನ ಬೆನ್ನಿನ ಮೇಲೆ ನಾನು ಅಂಜನ ಹಾಕುತ್ತೇನೆ. ದುರ್ಮುಖ



ರಾಜ ಯಾವ ದುರವಸ್ಥೆಯಲ್ಲಿದ್ದಾನೆಂದು, ನೀನೂ ನಿನ್ನ ಸೈನಿಕರೂ ನೋಡಿರಿ ! ನಿಮ್ಮ ಧರ್ಮಸಂದೇಹ ತೀರಿಹೋಗಲಿ !" ಎಂದನು.

ಆ ಮರುಕ್ಷಣದಲ್ಲಿ ಆ ಸೈನಿಕನ ಬೆನ್ನಿನ ಮೇಲೆ ವಸ್ತ್ರದ ಭಾಗದಲ್ಲಿ ಕರಿನೀಲಿಯ ನೆರಳು ಆವರಿಸಿತು. ಅದು ತಳತಳನೆ ಹೊಳೆಯತೊಡಗಿತು. ಅದರಲ್ಲಿ ಅರಣ್ಯದ ಮರಗಳೂ, ಅವುಗಳ ನಡುವೆ ಕುದುರೆಯ ಮೇಲೆ ಅತಿವೇಗವಾಗಿ ಓಡುತ್ತಿರುವ ದುರ್ಮುಖರಾಜನೂ, ಅವನಂತೆಯೇ ಓಡುತ್ತಿರುವ ಅಂಗರಕ್ಷಕನೂ ಕಂಡು ಬಂದರು. ಕರಡಿಯಾದ ಕಟುಕನಾಯಕನು ಅವರನ್ನು ಓಡಿಸಿಕೊಂಡು ಓಡುತ್ತಿದ್ದನು. ಮುಂದೆ ಹೋಗುತ್ತಿದ್ದ ಕುದುರೆಯನ್ನು ಮರಗಳ ಗುಂಪಿನಿಂದ ಹೊರ ಬಂದ ಆನೆಯೊಂದು ಅಡ್ಡ ಬಂದು ಸೊಂಡಿಲಿನಿಂದ ಹೊಡೆಯಲು ನೋಡಿತು. ದುರ್ಮುಖನು ಕೆಟ್ಟದನಿಯಿಂದ ಅರಚುತ್ತ, ಆನೆಯಿಂದ ತಪ್ಪಿಸಿಕೊಂಡು ಅಂಗರಕ್ಷಕನೊಂದಿಗೆ ಯಾವುದೋ ಒಂದು ಬದಿಗೆ ಓಡಿದನು. ಅಷ್ಟರಲ್ಲಿ ಆನೆಗೆ ಇದಿರಾಗಿ ಕರಡಿಕಟುಕನು ಓಡಿ ಬಂದನು. ಆನೆ ಆ ಕರಡಿಯನ್ನು ಸೊಂಡಿಲಿನಿಂದ ಹಿಡಿದು ಮೇಲಕ್ಕೆತ್ತಲು ನೋಡಿತು. ಕಟುಕನು ಭೀಕರವಾಗಿ ಕೂಗುತ್ತ ಆನೆಯ ಸೊಂಡಿಲಿನ ಮೇಲೆ ತನ್ನ ಚಪಗೊಡಲಿಯ ಏಟನ್ನು ಹಾಕತೊಡಗಿದನು. ಆ ಪೆಟ್ಟಿಗೆ ಸೊಂಡಿಲು ಅರ್ಧತುಂಡಾಗಿ ಜೋಲಾಡುತ್ತಿರಲು, ಆನೆ ಘೀಂಕರಿಸುತ್ತ ಹಿಂದಕ್ಕೆ ತಿರುಗಿತು. ಆಗ ಕಟುಕಕರಡಿ ಆನೆಯ ಕುಂಭಸ್ಥಳದ ಮೇಲೆ ಹಾರಿ ಕುಳಿತು, ಕೊಡಲಿಯ ಹಿಡಿಯಿಂದ ಹೊಡೆಯುತ್ತ, "ಆ ದುಷ್ಟದುರ್ಮುಖನೆಲ್ಲಿ ? ಓಡು ಅವನ ಬೆಂಬತ್ತಿ ! ಅವನನ್ನು ಹಿಡಿದು ತಲೆ ಕಡಿಯಬೇಕು !" ಎಂದು ಅರಚಿ ಹೇಳಿತು.

ಇಷ್ಟಾಗುವಾಗ ದುರ್ಮುಖರಾಜನು ಕಾಡಿನೊಳಗೆ ಬಹುದೂರ ಓಡಿ ಹೋಗಿದ್ದನು. ಅವನಿಗೆ ಕಟುಕಕರಡಿಯೊಂದಿಗೆ ಆನೆ ಕೂಡಾ ತನ್ನ ಬೆಂಬತ್ತಿ ಬರುವುದೆಂಬ ಭ್ರಮೆಯಾಗಿತ್ತು.

ಅವನನ್ನು ಬಿಡದೆ ಅನುಸರಿಸಿಕೊಂಡಿದ್ದ ಅಂಗರಕ್ಷಕನು, "ಮಹಾರಾಜರೆ, ನಾವು ಸಿಕ್ಕಾಬಟ್ಟೆ ಓಡುತ್ತ, ನಮ್ಮ ರಾಜ್ಯದ ಮೇರೆಯನ್ನು ಕೂಡಾ ದಾಟಿಹೋದ ಹಾಗಿದೆ. ಇದು ಯಾವ ಪ್ರದೇಶವೋ ?" ಎಂದನು.

ದುರ್ಮುಖರಾಜನು ಕೋಪದಿಂದ, "ಎಲೋ ಮೂರ್ಖನೇ, ಪ್ರಾಣಕ್ಕಿಂತ ರಾಜ್ಯದ ಮೇರೆ ಬೆಲೆಬಾಳುವಂಥಾದ್ದೇನು ?" ಎಂದು ಕುದುರೆಯನ್ನು ಚಾಟಿಯಿಂದ ಬಲವಾಗಿ ಹೊಡೆದನು.

ಈ ದೃಶ್ಯವು ಕಾಣುತ್ತಿರಲು ಕರಡಿಕೆಂಗಣ್ಣನು ಸೈನಿಕನ ಬೆನ್ನಿನ ಮೇಲೆ ಮಂತ್ರದಂಡದಿಂದ ಗಟ್ಟಿಯಾಗಿ ತಿವಿದನು.

ಅವನು ನೋವಿನಿಂದ ಹಾರಿಬೀಳಲು, ಕರಡಿಕೆಂಗಣ್ಣನು, "ಛೆಛೇ ! ನಾನು ಹಾಕಿದ ಅಂಜನವನ್ನು

ಇವನು ಹಾಳು ಮಾಡಿಬಿಟ್ಟ! ಸರಿ. ಈಗ ನಿಮ್ಮ ರಾಜ ದುರ್ಮುಖನು ಜೀವ ಹಿಡಿದುಕೊಂಡು ಪಲಾಯನ ಮಾಡುವುದನ್ನು ನೋಡಿದಿರಷ್ಟೇ? ಅವನೀಗ ಬದುಕಿದ್ದರೂ ಸತ್ತ ಹಾಗೆತಾನೆ? ಈಗೇನು ಹೇಳುವಿರಿ?" ಎಂದು ದಳಪತಿಯನ್ನೂ ಸೈನಿಕರನ್ನೂ ಕೇಳಿದನು.

ಕರಡಿಕೆಂಗಣ್ಣನ ಮಹಾಶಕ್ತಿಯನ್ನು ಕಣ್ಣಾರೆ ಕಂಡ ದುರ್ಮುಖನ ಸೈನಿಕರು ಏಕಕಂಠದಿಂದ, "ತಮ್ಮ ಅಪ್ಪಣೆಯೇ ನಮಗಿನ್ನು ಶಿರಸಾವಹ್ಯ" ಎಂದು ಕೂಗುತ್ತ ಕೈಜೋಡಿಸಿ ತಲೆಬಾಗಿಸಿದರು.

"ಹಾಗಾದರೆ ಒಳ್ಳೆಯದು. ನೀವೆಲ್ಲರೂ ನನ್ನ ಹಿಂದೆ ಚಂದ್ರಶಿಲಾನಗರಕ್ಕೆ ಬನ್ನಿ. ಅಲ್ಲಿಯ ಚಿತ್ರಕೇತುರಾಜನ ಸಮಾಚಾರ ಯಾವ ತರಗತಿಯದೆಂದು ನೋಡಬೇಕು. ಈ ಕ್ಷಣದಿಂದ ನಿಮಗೆಲ್ಲಾ ನಾಯಕನಾಗಿರುವವನು ಈ ಕಾಳೀವರ್ಮ! ತಿಳಿಯಿತೇ? ದುರ್ಮುಖನ ದಳಪತಿಯೇ! ನಿನಗೂ ಸಹ!" ಎಂದ ಕರಡಿಕೆಂಗಣ್ಣ.

ಆಮೇಲೆ ಎಲ್ಲರೂ ಕೂಡಿ ಚಂದ್ರಶಿಲಾನಗರದ ಕಡೆಗೆ ಹೊರಟರು. ಇದೇ ಸಮಯದಲ್ಲಿ ಕಾಡು ಬಿದ್ದು ಓಡುತ್ತಿದ್ದ ದುರ್ಮುಖರಾಜನನ್ನೂ, ಅವನ ಅಂಗರಕ್ಷಕನನ್ನೂ ಮರದ ಕೊಂಬೆಗಳಲ್ಲಿ ಅಡಗಿದ್ದ ನಾಗಮಲ್ಲನೆಂಬ ಕಳ್ಳರ ನಾಯಕನು ನೋಡಿಬಿಟ್ಟನು. ಅವನೊಂದಿಗೆ ಇಬ್ಬರು ಅನುಚರರೂ ಇದ್ದರು. ನಾಗಮಲ್ಲನು ಅನುಚರರೊಂದಿಗೆ, "ಎಲೋ, ಮುಂದಿನ ಕುದುರೆಯಲ್ಲಿ ಬರುವವನ ದುಸ್ತುಗಿಸ್ತು ನೋಡಿದರೆ ಯಾವನೋ ದೊಡ್ಡ ಸಂಪನ್ನನಾಗಿರುವಂತೆ ಕಾಣುತ್ತದೆ. ಅವನ ಹಿಂದೆ ಬರುವವನು ಅವನ ನೌಕರನೋ ಸೈನಿಕನೋ ಇರಬೇಕು. ಇಬ್ಬರನೂ ಜೀವದೊಂದಿಗೆ ಹಿಡಿದುಬಿಟ್ಟರೆ, ಆಮೇಲೆ ಅವರ ಸಂಬಂಧಿಕರಿಂದ, ಇವರ ಬಿಡುಗಡೆಗಾಗಿ ಗುಡ್ಡದಷ್ಟು ಹಣ ಎಳೆಯಬಹುದು. ಇಂಥ ಸಂದರ್ಭ ಬಿಡಬಾರದು" ಎಂದನು.

"ಹೌದು ಹೌದು" ಎಂದರು ಇಬ್ಬರೂ. ಅವರಿಬ್ಬರ ಕೈಯಲ್ಲಿಯೂ ಹಗ್ಗದ ಸುರುಳಿಗಳಿದ್ದುವು.



ಒಬ್ಬನು ತನ್ನ ಹಗ್ಗದ ಸುರುಳಿಯನ್ನು ಅತ್ತಿತ್ತ ಬೀಸುತ್ತ, "ದೊರೇ ! ಇವರ ಎದುರಿಗೆ ಹೋಗಿ ಜೀವದಿಂದ ಹಿಡಿಯುವ ಕೆಲಸ ನಡೆಯುವಂಥಾದ್ದಲ್ಲ. ಅವರು ಕತ್ತಿಗಳನ್ನು ಹಿರಿದು ನಮ್ಮನ್ನು ಚೆನ್ನಾಗಿ ಎದುರಿಸಬಲ್ಲವರು. ಮೊದಲು ಒಬ್ಬನನ್ನು ಈ ಹಗ್ಗದ ಉರುಳಿನಲ್ಲಿ ಬಂಧಿಸಿಬಿಟ್ಟರೆ ಹೇಗಿರುತ್ತೇ ?" ಎಂದನು.

"ಓ ! ಭಲೇ ಚೆನ್ನಾಗಿರುತ್ತೆ, ಒಳ್ಳೇ ಉಪಾಯ ! ಅಕೋ, ಸಮೀಪಿಸುತ್ತಿದ್ದಾರೆ. ಅಳವಿಗೆ ಬಂದ ಕೂಡಲೇ ಮುಂದಿನ ಪ್ರಮುಖನನ್ನು ಹಿಡಿದುಬಿಡು. ಉರುಳು ಸರಿಯಾಗಿ ಅವನ ಸೊಂಟಕ್ಕೆ ಬೀಳಲಿ, ಹಾಗೇ ಎತ್ತಿಬಿಡು ಮೇಲೆ. ಎರಡನೇಯವನ ಸಮಾಚಾರ ನಾವಿಬ್ಬರೂ ನೋಡುತ್ತೇವೆ" ಎಂದ ಚೋರ ನಾಯಕ ನಾಗಮಲ್ಲ.

ದುರ್ಮುಖರಾಜನೂ ಅವನ ಅಂಗರಕ್ಷಕನೂ ಇಂತಹ ಮಹಾರಣ್ಯದಲ್ಲಿ ಕರಡಿಕೆಂಗಣ್ಣ ಮಾಂತ್ರಿಕನಿಂದಲೂ, ಅವನು ಸೃಷ್ಟಿಸಿದ ಕರಡಿಯಿಂದಲೂ ಅಪಾಯ ಬರುವುದನ್ನೇ ನೋಡಿಕೊಂಡು ಓಡಿ ಬರುತ್ತಿದ್ದರು. ಬೇರೆ ಬಗೆಯ ಅಪಾಯವನ್ನು ಅವರು ಊಹಿಸಿ ಕೂಡ ಇರಲಿಲ್ಲ. ಅವರು ಕಟುಕ ಕರಡಿಯಿಂದಲೂ, ಹುಚ್ಚಾನೆಯಿಂದಲೂ ಸಾಧ್ಯವಾದಷ್ಟು ದೂರ ಓಡುವ ಆತುರದಲ್ಲೇ ಇದ್ದರು.

ದುರ್ಮುಖನ ಕುದುರೆ ದೊಡ್ಡದೊಂದು ಮರದ ಬುಡದಿಂದಾಗಿ ಓಡುತ್ತಿರುವಾಗ, ಕೊಂಬೆಯಲ್ಲಿ ಹೊಂಚಿಕೊಂಡಿದ್ದ ನಾಗಮಲ್ಲನ ಅನುಚರನು ಕೈಯಲ್ಲಿದ್ದ ಹಗ್ಗದ ಉರುಳನ್ನು ಗುರಿನೆಟ್ಟು ಅವನ ಮೇಲೆ ಬೀಸಿದನು.

ಆಕಸ್ಮಿಕವಾಗಿ ಥಕ್ಕನೆ ತನ್ನ ಸೊಂಟದ ಮೇಲೆ ಹೆಬ್ಬಾವು ಬಿದ್ದು ಸುತ್ತಿಕೊಂಡಿತೇನೋ ಎಂದು ಅವನು ಅದುರಿ ಬೀಳುವುದರೊಂದಿಗೆ, ಕುದುರೆ ವೇಗವಾಗಿ ಮುಂದಕ್ಕೆ ಜಾರಿಕೊಂಡು ಓಡಿತು. ದುರ್ಮುಖನು ಹಗ್ಗದ ಉರುಳಿನಲ್ಲಿ ಸಿಕ್ಕಿ ಮೇಲಕ್ಕೆ ಎಳೆಯಲ್ಪಡುತ್ತಿದ್ದನು.

ಏನು ನಡೆಯಿತೆಂಬುದೇ ಅರ್ಥವಾಗದೆ ಅವನು ಕೆಟ್ಟದನಿಯಿಂದ ಕೂಗುತ್ತಿರಲು, ನೇತಾಡುತ್ತಾ ಮೇಲೆ ಮೇಲೆ ಹೋಗಲ್ಪಟ್ಟನು. ಯಮದೂತನೇ ತನ್ನನ್ನು ಎಳೆಯುವವನೆಂದು ಅವನು ಒದ್ದಾಡುತ್ತಿರಲು, ನಾಗಮಲ್ಲನೂ, ಇನ್ನೊಬ್ಬ ಕಳ್ಳನೂ ಕಿವಿಗಳು ಒಡೆಯುವ ಹಾಗೆ ಭೀಕರವಾಗಿ ಕೂಗುತ್ತ, ಕತ್ತಿಗಳನ್ನು ಝಳಪಿಸಿಕೊಂಡು ಸರಸರನೆ ಕೆಳಗಿಳಿಯತೊಡಗಿದರು. ಆಗಲೇ ದುರ್ಮುಖನ ಅಂಗರಕ್ಷಕನೂ ಆ ಮರದ ಬುಡಕ್ಕೆ ಬಂದನು. ಕಳ್ಳರಿಬ್ಬರೂ ಅವನ ಮುಂದೆ ಹಾರಿ ಗರ್ಜಿಸಿದರು.

(ಇನ್ನೂ ಇದೆ)





# ಕರಡಿಕೆಂಗಣ್ಣ

೭

[ಚಂದ್ರಶಿಲಾನಗರದ ಮೇಲೆ ದಾಳಿಹೊರಟ ದುರ್ಮುಖರಾಜನ ಮೇಲೆ, ಕರಡಿಕೆಂಗಣ್ಣನು ಕಟುಕನಾಯಕನನ್ನು ಕರಡಿಮಾಡಿ ಕೆರಳಿಸಿಬಿಟ್ಟನು. ಅದನ್ನು ನೋಡಿ, ದುರ್ಮುಖನು ತನ್ನ ಅಂಗರಕ್ಷಕನೊಂದಿಗೆ ಕುದುರೆಯ ಮೇಲೆ ಕಾಡಿನೊಳಗೆ ಸಿಕ್ಕಾಬಟ್ಟೆ ಓಡಿದನು. ಆಗ ಆಕಸ್ಮಾತ್ತಾಗಿ ನಾಗಮಲ್ಲನೆಂಬ ಕಳ್ಳರನಾಯಕ ಅವನನ್ನು ಉರುಳಿನಲ್ಲಿ ಸಿಕ್ಕಿಸಿ ಮರದ ಮೇಲೆ ಎಳೆಯತೊಡಗಿದನು. ಅವನ ಕುದುರೆ ಮುಂದೆ ಓಡಿತು.]

**ಮೊ**ದಲೇ ಹೆದರಿದ ದುರ್ಮುಖರಾಜನೂ, ಅಂಗರಕ್ಷಕನೂ ಇನ್ನಷ್ಟು ಗಾಬರಿಯಿಂದ ಅಯೋಮಯದಲ್ಲಿ ಬೀಳುವ ಘಟನೆ ಒಂದರ ಹಿಂದೊಂದಾಗಿ ನಡೆಯುತ್ತಿದ್ದಿತು.

ತನ್ನ ಕುದುರೆಯ ಮುಂದೆ ಭೀಕರವಾಗಿ ಅರಚುತ್ತಾ ಹಾರಿದ ಕಳ್ಳರನ್ನು ನೋಡಿದ ಕೂಡಲೇ ದುರ್ಮುಖರಾಜನ ಅಂಗರಕ್ಷಕನು ಕುದುರೆಯ ಕಡಿವಾಣವನ್ನು ಗಟ್ಟಿಯಾಗಿ ಎಳೆಯುತ್ತ, "ಅಯ್ಯಯ್ಯಾ! ನೀವಾರೋ ನಾನರಿಯೆ! ನನ್ನ ಸೊಂಟದಲ್ಲಿ ಕತ್ತಿ ನೇತಾಡುತ್ತಿದ್ದರೂ ಕೈಯಲ್ಲೇನೂ ಇಲ್ಲ. ನಿರಾಯುಧನಾಗಿದ್ದೇನೆ. ನಾನು ನಿಮಗೇನೂ ಮಾಡಲಾರೆ. ನಂಬಿ. ನಂಬಿ!" ಎಂದು ನಡುಗುವ ಸ್ವರದಿಂದ ಕಿರಿಚಿದನು. ತನ್ನ ಒಡೆಯ ಮರದ ಮೇಲಕ್ಕೆ ಎಳೆಯಲ್ಪಡುವುದೂ ಅವನ ಕಣ್ಣೆದಿರೆ! ಹೇಗಿರಬೇಡ ಅವನ ಅವಸ್ಥೆ!

ಕಳ್ಳರನಾಯಕ ನಾಗಮಲ್ಲನು ಕಣ್ಣು ತಿರುಗಿಸುತ್ತ, ಎಡಗೈಯಿಂದ ಕುದುರೆಯ ಕಡಿವಾಣವನ್ನು ಎಳೆದು ಹಿಡಿದುಕೊಂಡು, ಬಲಗೈಯಲ್ಲಿದ್ದ ಬಿಚ್ಚುಗತ್ತಿಯನ್ನು ಅಂಗರಕ್ಷಕನ ಕಂಠದ ಕಡೆಗೆ ಚಾಚಿ. "ಎಲೆಲೋ! ಏನು ಬೊಗಳುವೆ? ನಮ್ಮನ್ನು



ಯಾರೆಂದು ತಿಳಿದೆ? ನಿನ್ನ ಸೊಂಟದ ಕತ್ತಿಯನ್ನು ಕೈಗೆತ್ತಿಕೊಂಡರೂ ಹೆದರುವವರು ನಾವಲ್ಲ ಗೊತ್ತಾ? ಅಕೋ ನೋಡು. ನಿನ್ನ ಮುಂದೆ ಕುದುರೇ ಮೇಲೆ ಓಡಿ, ಮರಕ್ಕೆ ಎಳೆಯಲ್ಪಟ್ಟನಲ್ಲಾ ಒಬ್ಬ. ಈಗ ಮರದ ಕೊಂಬೆಯಲ್ಲಿ ನೇತಾಡುತ್ತಿದ್ದಾನೆ. ನೀನೂ ಹಾಗೆಯೇ ನೇತಾಡಬೇಕು ಈಗ. . ತಯಾರಾಗು!" ಎಂದು ನಕ್ಕನು.

"ಅದೇಕೆ? ಅದರಿಂದೇನು ಪ್ರಯೋಜನ? ಬೇಡಿ, ಬಿಡಿಬಿಡಿ!" ಎಂದು ಕಿರಿಚಿದನು ಅಂಗರಕ್ಷಕ. "ಎಲ್ಲಾ ತಿಳಿಯುತ್ತೆ. ನೀವಿಬ್ಬರೇನಾ, ಅಲ್ಲ ನಿಮ್ಮ ಹಿಂದೆ ಇನ್ನೂ ಯಾರಾದರೂ ನಿಮ್ಮವರು ಬರುತ್ತಾರೋ ಹೇಳಿಬಿಡು. ನಾವೂ ಅದಕ್ಕೆಲ್ಲ ತಯಾರಾಗಬೇಕಲ್ಲ?" ಎಂದು ಕೇಳಿದ ನಾಗಮಲ್ಲ.

ಅಂಗರಕ್ಷಕನಿಗೆ ಸಮಸ್ಯೆಗಿಟ್ಟುಕೊಂಡಿತು. ತಮ್ಮ ಕಡೆಯ ಇನ್ನೂ ಕೆಲವರು ಬರುತ್ತಿದ್ದಾರೆಂದರೆ ಅಪಾಯದಿಂದ ತಪ್ಪಬಹುದೋ, ಅಥವಾ ಯಾರೂ ಇಲ್ಲವೆಂದು ಹೇಳಿದರೆ ಅಪಾಯವಿಲ್ಲವೋ ಎಂದು ಅವನು ಆಲೋಚಿಸುತ್ತಿರಲು. ಕೊಂಬೆಯಲ್ಲಿ ನೇತಾಡುತ್ತ ಚಟಪಟಿಸುತ್ತಿದ್ದ ದುರ್ಮುಖರಾಜನು ಕ್ರೋಧಾರ್ತಧ್ವನಿಯಿಂದ, "ಏನಿದು ಅವಮಾನ! ನಾನು ಸಹಿಸಲಾರೆ! ಯಾರಿವರು? ಎಲ್ಲಿದ್ದೀಯೋ ಅಂಗರಕ್ಷಕಾ! ನಿನ್ನನ್ನೇನು ಮಾಡುತ್ತೇನೆ ನೋಡು!" ಎಂದು ಕೂಗಿದನು. ಆ ಕೂಗು ಅಂಗರಕ್ಷಕನನ್ನು ಇನ್ನಷ್ಟು ನಡುಗಿಸಿತು.

ಅದನ್ನು ಕೇಳಿ ನಾಗಮಲ್ಲ ಕಳ್ಳ, ಕತ್ತಿ ಝಳಪಿಸುತ್ತಾ "ಒಹ್ಹೋ! ನೀನು ಅವನ ಅಂಗರಕ್ಷಕನೇನು? ಹಾಗಾದರೆ ಅವನು ಸಾಮಾನ್ಯನಲ್ಲ. ಎಂಥವನಿಗೆ ಅಂಗರಕ್ಷಕ ನೀನು? ಕುದುರೆಯಿಂದಿಳಿದು ಎಲ್ಲಾ ಹೇಳು" ಎಂದು ಅಂಗರಕ್ಷಕನನ್ನು ಕುದುರೆಯಿಂದ ಎಳೆದನು.

ಆಗ ಮರದ ಕೊಂಬೆಯಲ್ಲಿದ್ದ ಕಳ್ಳನು ದುರ್ಮುಖರಾಜನನ್ನು ಇನ್ನೂ ಮೇಲಕ್ಕೆಳೆಯಲು ಕಷ್ಟಪಡುತ್ತಿರುವುದನ್ನು ನೋಡಿ ನಾಗಮಲ್ಲನು, "ಲೋ! ಅವನನ್ನು ಬಿಟ್ಟುಬಿಡಬೇಡ. ಹೇರಳ ಸಂಪತ್ತಿನ ಜೀವಗಳೇ ಸಿಕ್ಕಿದಂತಿವೆ. ಅವನ ಪಟ್ಟೆದುಸ್ತುಗಳಿಗೆ ಘಾಸಿಯಾಗದಂತೆ ಜಾಗರೂಕತೆಯಿಂದ ನೆಲದ ಮೇಲಕ್ಕೆ ಇಳಿಸು ನೋಡುವಾ" ಎಂದು ಅಪ್ಪಣೆ ಮಾಡಿದನು.

ಕೊಂಬೆಯಲ್ಲಿಯ ಕಳ್ಳನು ದುರ್ಮುಖರಾಜನನ್ನು ಮೆಲ್ಲಗೆ ನಲದ ಮೇಲಕ್ಕೆ ಇಳಿಸಿದನು. ಆ ಕೂಡಲೇ ದುರ್ಮುಖನು ತನ್ನ ಸೊಂಟಕ್ಕೆ ಬಿಗಿದಿದ್ದ ಹಗ್ಗವನ್ನು ಬಿಚ್ಚಲು ನೋಡಿದನು.

ಆಗ ನಾಗಮಲ್ಲನ ಸಹಚರನಾದ ಇನ್ನೊಬ್ಬ ಕಳ್ಳ ದುರ್ಮುಖನ ಬಳಿಗೆ ಬಂದು, "ಏನು ಮಾಡುವಿ? ಸೊಂಟದ ಹಗ್ಗವನ್ನು ಬಿಚ್ಚಿ ಕುತ್ತಿಗೆಗೆ ಹಾಕಿಕೊಳ್ಳುವಿಯೇನು? ಅವಸರಪಡಬೇಡ. ನೀನು ಯಾರೆಂದು ನಿಜವನ್ನು ಹೇಳದೇ ಹೋದರೆ ಆ ಕೆಲಸ

ನಾವೇ ಮಾಡುತ್ತೇವೆ. ಸುಮ್ಮನೆ ನಿಲ್ಲು ಕೈ ಕಟ್ಟಿ ಕೊಂಡು " ಎಂದನು ಚೋರನಿಂದ.

ಅಷ್ಟರಲ್ಲಿ ಮರದ ಮೇಲಿದ್ದ ಕಳ್ಳನೂ ಕೆಳಗೆ ಬಂದನು. ನಾಗಮಲ್ಲನು ದುರ್ಮುಖರಾಜನನ್ನು ನಖಶಿಖಾಂತವಾಗಿ ಪರೀಕ್ಷಿಸುತ್ತ, "ನಿನ್ನ ಬೆಲೆ ಬಾಳುವ ದುಸ್ತುಗಳು, ಶ್ರೇಷ್ಠವಾದ ಕತ್ತಿಯು ಒರೆ ಮುಂತಾದ್ದೆಲ್ಲಾ ನೋಡಿದರೆ ತುಂಬಾ ಧನಸಂಪನ್ನ ನಂತೆ ಕಾಣುವಿ. ಈಗ ನೀನಾಗಿ ನಿನ್ನ ಹತ್ತಿರವಿರುವ ಧನವನ್ನೆಲ್ಲಾ ಕೆಳಗಿಟ್ಟು, ಆಮೇಲೆ ನಿನ್ನ ಅಂಗರಕ್ಷಕ ನನ್ನು ಮನೆಗೆ ಕಳಿಸಿ ಹತ್ತು ಸಾವಿರ ವರಹಗಳನ್ನು ತರಿಸಿಬಿಡು. ಹೀಗೆ ಮಾಡದೇ ಹೋದರೆ ನಿನ್ನ ಪ್ರಾಣ ಉಳಿಯುವುದಿಲ್ಲ. ನಿನ್ನ ಶವ ಅಲ್ಲಿ ಕಾಣುವ ಬೆಟ್ಟದ ಗುಹೆಯಲ್ಲಿರುವ ಹುಲಿಗಳಿಗೋ ತೋಳ ಗಳಿಗೋ ಆಹಾರವಾಗಿ ಹೋಗುತ್ತದೆ. ಜಾಗ್ರತೆ! ಅದುವರೆಗೂ ಕದುಲುವಂತಿಲ್ಲ ನೀನು !" ಎಂದನು.

ಈ ಮಾತುಗಳನ್ನು ಕೇಳುತ್ತಿರಲು, ತಾನು ದೊಡ್ಡ ಮುಳ್ಳುಗಳ ಮೆಳೆಯಲ್ಲಿ ಬಿದ್ದೆನೆಂದು ದುರ್ಮುಖನಿಗೆ ಗೊತ್ತಾಯಿತು. ತಾನು ಇಂತಹ ದೇಶದ ರಾಜ ನೆಂದು ಹೇಳಿಬಿಟ್ಟರೆ, ಈ ಚೋರನಾಯಕನು ತನ್ನ ತಲೆಯನ್ನು ತಟ್ಟನೆ ಕಡಿದು ಇನ್ನಷ್ಟು ದೊಡ್ಡ ಬಹುಮಾನ ಸಂಪಾದಿಸಲು, ತನ್ನ ಶತ್ರುವಾದ ಚಂದ್ರ ಶಿಲಾ ನಗರದ ಜಿತಕೇತು ರಾಜನಿಗೆ ತೋರಿಸಬಹುದು. ಅದರ ಬದಲಾಗಿ ತಾನೊಬ್ಬ ಧನಿಕ ವರ್ತಕನೆಂದು ಹೇಳಿದರೆ? ಆಗ ತನ್ನ ಅಂಗರಕ್ಷಕನ ಮೂಲಕ ಹತ್ತು ಸಾವಿರ ವರಹ ತರಿಸಿಕೊಡಬೇಕಾಗುತ್ತದಲ್ಲ! ಅಷ್ಟ ರೊಳಗೆ ತಾನು ಸುಳ್ಳು ಹೇಳಿದ ಸಂಗತಿ ಹೊರಗಾಗಿ ಬಿಟ್ಟರೆ ತನ್ನಗತಿ...?

ಹೀಗೆ ದುರ್ಮುಖ ರಾಜನು ಯೋಚಿಸುತ್ತಿರಲು, ಹೇಳಿದ ಮಾತಿಗೆ ಉತ್ತರ ಕೊಡದೆ ಮೂಕ ನಂತಿರುವವನನ್ನು ನೋಡಿ ನಾಗಮಲ್ಲನು ಹಲ್ಲು ಕಡಿಯುತ್ತ, "ಏನದು ದೊಡ್ಡ ಆಲೋಚನೆ ? ನಮ್ಮ



ಕೈಯಿಂದ ಜಾರಿ ಕೊಳ್ಳುವಂಥ ಜಾಲವೇನಾದರೂ ಹೊಸೆಯುತ್ತಿರುವಿಯಾ ?" ಎನ್ನುತ್ತ ಕತ್ತಿಯನ್ನು ಮೇಲೆತ್ತಿದನು.

"ಜಾಲ ಹೊಸೆಯಲು ಸಾಧ್ಯವಿಲ್ಲವೆಂದು ನಾನು ಬಲ್ಲೆನಪ್ಪಾ, ನೀನು ಕೇಳಿದ ಹತ್ತು ಸಾವಿರ ವರಹ ಗಳನ್ನು ಹೇಗೆ ತರಿಸುವುದೆಂದು ಆಲೋಚಿಸುತ್ತಿದ್ದೇನೆ. ನಾನೊಬ್ಬ ವರ್ತಕ. ಹೆಸರು ದುರ್ಜಯ ಶೆಟ್ಟಿ, ಉದಯಗಿರಿ ಪಟ್ಟಣದವನು. ಈಗಂತೂ ನನ್ನ ಹತ್ತಿರ ಚಿಕ್ಕಾಸು ಕೂಡಾ ಇಲ್ಲ," ಎಂದನು ದುರ್ಮುಖ ರಾಜ,

ಅವನ ಮಾತು ಕೇಳಿ ನಾಗಮಲ್ಲನು ಆಶ್ಚರ್ಯ ಪಡುತ್ತ, "ಇಷ್ಟೊಂದು ಬೆಲೆ ಬಾಳುವ ದುಸ್ತು ಗಳನ್ನು ಧರಿಸಿ, ಅಂಗರಕ್ಷಕನನ್ನು ಕೂಡಾ ಜತೆಗಿಟ್ಟು ಕೊಂಡು ಚಿಕ್ಕಾಸು ಕೂಡಾ ಇಲ್ಲದೆ ಕಾಡಿನಲ್ಲಿ ಪ್ರಯಾಣ ಮಾಡುವುದೆಂದರೇನು ? ನಿನ್ನ ಮಾತನ್ನು ಕಣ್ಣು ಮುಚ್ಚಿ ನಂಬಬೇಕನ್ನುವಿಯಾ ?" ಎಂದು



ಹೇಳಿ ಬದಿಯಲ್ಲಿದ್ದ ತನ್ನ ಸಹಚರರೊಂದಿಗೆ, "ಹುಂ, ಇವನು ಸಾಧಾರಣಕ್ಕೆ ಸತ್ಯವನ್ನು ಬಾಯಿಬಿಡುವವನಲ್ಲ. ಇವನ ಸೊಂಟದ ಕಟ್ಟನ್ನು ಬಿಚ್ಚಿ. ಕುತ್ತಿಗೆಗೆ ಬಿಗಿಯಿರಿ. ಇವನನ್ನು ಯಾವ ಕೊಂಬೆಗೆ ನೇತಾಡಿಸಿ ಕೊಲ್ಲಬೇಕೆಂಬುದನ್ನು ನಾನು ನೋಡಿ ಹೇಳುತ್ತೇನೆ" ಎಂದನು.

ನಾಗಮಲ್ಲನು ಸಮೀಪದಲ್ಲಿದ್ದ ಒಂದು ಬಲವಾದ ಮರದ ಕೊಂಬೆಯನ್ನು ನೋಡುತ್ತಿರಲು, ದೂರದಲ್ಲಿ ಆನೆಯ ಘೀಂಕಾರವೂ, ಅದರೊಂದಿಗೆ ಕರಡಿ ಕಟುಕ ನಾಯಕನ ಕರ್ಕಶ ಸ್ವರವೂ ಕೇಳಿಬಂದಿತು.

ಅದನ್ನು ಕೇಳಿ ದುರ್ಮುಖಿ ರಾಜನೂ ಅಂಗರಕ್ಷಕನೂ ಮಹಾ ಭಯದಿಂದ ನಡುಂಗಲು ತೊಡಗಿದರು. ಅಂಗರಕ್ಷಕನು ಆ ಕಡೆಗೇ ನೋಡುತ್ತ, "ಮಹಾರಾಜರೇ! ಆ ಕಟುಕ ಕರಡಿ ದಾರಿ ತಪ್ಪಿ ಬೇರೆ ಕಡೆಗೆ ಹೋಯಿತೆಂದುಕೊಂಡರೆ, ಇತ್ತಲೇ ಬರುತ್ತಾ ಇದೆಯಲ್ಲಾ! ಇನ್ನೇನು ಗತಿಯೋ ಮಹಾ ಪ್ರಭುಗಳೇ? ಅದೀಗ ನಮ್ಮೆಲ್ಲರನ್ನೂ ಜಜ್ಜಿ ಹಾಕಿ ಬಿಡುತ್ತದಲ್ಲಾ!" ಎಂದು ಕೂಗಿದನು.

ಇದನ್ನೆಲ್ಲ ಕೇಳಿ ಕಳ್ಳರನಾಯಕನಿಗೂ ಏನೇನೋ ತೋರತೊಡಗಿತು. ಅವನು ಬಾಯಿ ತೆರೆದು, ಕಣ್ಣುಗಳನ್ನು ತೇಲಬಿಟ್ಟು, ತನ್ನ ಅನುಚರರನ್ನು ನೋಡಿ, "ಕೇಳಿದಿರಾ ಇವರ ಮಾತು? ಇವನು ತನ್ನ ಹೆಸರು ದುರ್ಜಯ ಶೆಟ್ಟಿ ಅನ್ನುತ್ತಾನೆ. ಅವನು ಇವನನ್ನು ಮಹಾರಾಜಾ, ಪ್ರಭುಗಳೇ ಅನ್ನುತ್ತಾನೆ. ಇದಕ್ಕಿಂತ ವಿಚಿತ್ರವಾಗಿ ಕಟುಕಕರಡಿಯಂತೆ! ಅದು ಕಾಡಿನಲ್ಲಿ ದಾರಿ ತಪ್ಪೀತು ಎಂದುಕೊಂಡನಂತೆ! ಏನಿದೆಲ್ಲಾ?" ಎಂದು ಕತ್ತಿಯನ್ನು ಮೇಲೆತ್ತಿ. "ಏನು ಬೊಗಳುವಿರಿ? ಬುದ್ಧಿಗಿದ್ಧಿ ನೆಟ್ಟಗಿದೆಯೋ? ಹುಚ್ಚುಚ್ಚಾಗಿ ಹೇಳಿ ನಮ್ಮ ಬುದ್ಧಿ ಕೆಡಿಸ ಬೇಕೆಂದಿರುವಿರೇನು?" ಎಂದನು ಕಣ್ಣು ತಿರುಗಿಸುತ್ತ.

ದುರ್ಮುಖಿ ರಾಜನಿಗೆ ಏನೂ ತೋರದೆ ಬಾಯಿ ಒಣಗಿಹೋಯಿತು. ಏನು ಉತ್ತರ ಕೊಡುವುದೆಂದೇ ತೋರಲಿಲ್ಲ. ಆಗ ಆನೆಯ ಘೀಂಕಾರವೂ ಇನ್ನಿಷ್ಟು ಸಮೀಪದಲ್ಲಿ ಕೇಳಿಸಿತು. ಅದರೊಂದಿಗೆ ಕಟುಕ ಕರಡಿಯ ಗರ್ಜನೆಯೂ ಹೊರಟಿತು. ಈಗ ನಾಗಮಲ್ಲನೂ ಸ್ವಲ್ಪ ಹೆದರುತ್ತ ತನ್ನ ಸಹಚನೊಬ್ಬನನ್ನು ನೋಡಿ, "ಲೋ, ನೀನು ಮರಹತ್ತಿ ನೋಡು. ಒಂದೇಬಾರಿಗೆ ಆನೆಯ ಘೀಂಕಾರ ಮತ್ತು ಕರಡಿಯ ಕೂಗಿನಂತಹ ಮನುಷ್ಯನ ಶಬ್ದ ಕೇಳಿ ಬರುವುದೆಂದರೆ ಹೇಗೆ ಸಾಧ್ಯ? ಇವರ ಮಾತಿನಲ್ಲಿ ಎಷ್ಟು ನಿಜವೋ ಎಷ್ಟು ಸುಳ್ಳೋ. ಬೇಗ ನೋಡಿ ಹೇಳು" ಎಂದು ಆಜ್ಞೆ ಮಾಡಿದನು.

ಕಳ್ಳರಲ್ಲೊಬ್ಬನು ಬೇಗಬೇಗನೆ ಮರವನ್ನು ಹತ್ತಿ, ನೋಡಿದವನೇ ಕೆಟ್ಟ ದನಿಯಿಂದೊಮ್ಮೆ ಕೂಗಿ, "ನಾಗಮಲ್ಲಾ! ಆ ದುರ್ಜಯ ಶೆಟ್ಟಿಯೂ ಅವನ ನೌಕರನೂ ಹೇಳಿದ ಮಾತು ನಿಜ. ತುಂಡಾಗಿ ನೇತಾಡುತ್ತಿರುವ ಅರ್ಧಸೊಂಡಿಲಿನ ಆನೆಯೊಂದು

ಬರುತ್ತಿದೆ. ಅದರ ಮೇಲೆ ಚಪಗೊಡಲಿ ಹಿಡಿದು ಕೊಂಡಿದ್ದ ಮನುಷ್ಯ ಕರಡಿಯೂ ಇದೆ. ಅಯ್ಯೊಯ್ಯೋ! ಅಡ್ಡ ಬಂದ ಮರದ ಕೊಂಬೆಗಳೆಲ್ಲಾ ಅವನ ಚಪ ಗೊಡಲಿಯ ಹೊಡೆತಕ್ಕೆ ಕಡ್ಡಿಗಳು ಮುರಿದು ಬೀಳುವ ಹಾಗೆ ಚೆಲ್ಲಾ ಚೆದರಾಗಿ ಬೀಳುತ್ತಿವೆ!" ಎಂದನು ನಡುಗುತ್ತ.

ನಾಗಮಲ್ಲನು ಭಯಾಶ್ಚರ್ಯಗಳಿಂದ ದಿಕ್ಕು ಗಳನ್ನು ನೋಡುತ್ತ, ಈಗೇನು ಮಾಡುವುದೆಂದು ಆಲೋಚಿಸುವಾಗ, ದುರ್ಮುಖರಾಜನು ಅವನಿಗಿಂತ ಹೆಚ್ಚಿನ ಭಯದಿಂದ ಅವನ ಕೈಯನ್ನು ಹಿಡಿದು, "ಈಗ ನಿಮಗೂ ನಮಗೂ ಗಂಡಾಂತರವೇ ಸರಿ! ನಾವಿಲ್ಲಿಂದ ಬೇಗನೇ ಓಡದಿದ್ದರೆ ಕೆಡುತ್ತೇವೆ. ಹಣಕ್ಕಾಗಿ ನೀನು ನಿನ್ನ ಜೀವವನ್ನೇ ಬಿಡುವೆಯೇನು? ಬೇಕಾದರೆ ನನ್ನ ಮನೆಯಲ್ಲಿದ್ದ ಹಣದಿಂದ ನಿನ ಗೊಂದು ರಾಜ್ಯವನ್ನೇ ತೆಗಿಸಿಕೊಟ್ಟೇನು!" ಎಂದನು ನಡುಗುತ್ತ.

ಅಂಗರಕ್ಷಕನು ಕುದುರೆಯ ಮೇಲೇರಿ ಓಡಿ ಹೋಗಲು ಪ್ರಯತ್ನಿಸುತ್ತ ಅದರ ಕಡಿವಾಣವನ್ನು ಹಿಡಿದು ನಾಗಮಲ್ಲನೊಂದಿಗೆ, "ಅಯ್ಯಾ ಮಲ್ಲಾ! ಈ ಕ್ಷಣದಲ್ಲಿ ನೀನು ಮಹಾರಾಜರ ಪ್ರಾಣವನ್ನು ಕಾಪಾಡಿದೆಯೆಂದರೆ ಅವರು ನಿನಗೆ ಅರ್ಧ ರಾಜ್ಯ ವನ್ನೇ ಧಾರೆಯೆರೆದು ಕೊಡುತ್ತಾರೆ. ನಾನು ಕುದುರೇ ಮೇಲೆ ವಾಯುವೇಗದಿಂದ ರಾಜಧಾನಿಗೆ ಹೋಗಿ ಒಂದು ಸೈನ್ಯವನ್ನೇ ತೆಗೆದುಕೊಂಡು ಬಂದು ಬಿಡು ತ್ತೇನೆ. ಆಗದೇ ಮಹಾರಾಜರೇ? ಹೋಗಿ ಬರಲಾ?" ಎಂದನು.

"ಆ ಕೆಲಸ ನಾನೇ ಮಾಡುವುದೊಳ್ಳೆಯದು. ಆದರೆ ಈಗ ರಾಜಧಾನಿಗೆ ಹೋಗುವ ಮಾರ್ಗವೋ ದಿಕ್ಕೋ ಒಂದೂ ತಿಳಿಯುವುದಿಲ್ಲವಲ್ಲಾ!" ಎಂದು ದುರ್ಮುಖ ರಾಜನು ಕುದುರೆಯ ಕಡಿವಾಣವನ್ನು ತಾನು ಹಿಡಿದುಕೊಂಡನು.



ನಾಗಮಲ್ಲನು ತನ್ನ ಅನುಚರರನ್ನು ನೋಡಿ ಕಣ್ಣು ಹಾರಿಸಿ, ದುರ್ಮುಖ ರಾಜ ಮತ್ತು ಅಂಗ ರಕ್ಷಕರನ್ನು ಅಡ್ಡಗಟ್ಟಿ ನಿಂತು ಕಣ್ಣು ತಿರುಗಿಸಿ ಹೆದರಿ ಸುತ್ತ, "ಇಬ್ಬರೂ ಓಡಲಿಕ್ಕೋ ನೋಡುವಿರಿ? ನಿಮಗೆ ಬುದ್ಧಿಗಿದ್ದಿ ಇದೆಯೋ ಅಥವಾ ಭಾರೀ ಬುದ್ಧಿವಂತಿಕೆಯ ಮೋಸಗಾರರೋ? ಅಲ್ಲಿ ನೀವೇ ಹೇಳುವ ಆ ಗಂಡಾಂತರಗಳು ಮೇಲೆ ಬಂದು ಬೀಳಲಿರುವಾಗ, ಎಲ್ಲಿಯೋ ಇರುವ ರಾಜಧಾನಿಗೆ ಹೋಗಿ ಸೈನ್ಯವನ್ನು ತರುವುದೆಂದರೇನರ್ಥ?" ಎಂದು ಕೇಳಿದನು.

"ಅರ್ಥವೆಲ್ಲ ಮತ್ತೆ ಗೊತ್ತಾದರೆ ಸಾಲದೆ? ಮೊದಲು ಗಂಡಾಂತರದಿಂದ ಪಾರಾಗಬೇಕು" ಎಂದ ಅಂಗರಕ್ಷಕ.

ನಾಗಮಲ್ಲನು ತನ್ನ ಅನುಚರರನ್ನು ನೋಡಿ, "ಈ ಭಲೇ ಆಸಾಮಿಗಳನ್ನು ಹಗ್ಗದಿಂದ ಕಟ್ಟಿ ಅಲ್ಲಿ ಕಾಣುವ ಬೆಟ್ಟದ ಗುಹೆಯ ಕಡೆಗೆ ಎಳೆದುಕೊಂಡು



ನಡೆಯಿರಿ. ಆ ಕಟುಕಕರಡಿಗಿರಡಿ ಆನೆಗೀನೆ ಎಲ್ಲಾ ಈ ಪ್ರಾಂತದಿಂದ ಹೋದ ಮೇಲೆ ಇವರು ಯಾರು ಏನೆಂಬ ನಿಜವನ್ನು ತಿಳಿದುಕೊಳ್ಳೋಣ. ಒಳ್ಳೇ ಗಿರಾಕಿ ಗಂಟು ಬಿತ್ತು ಇವತ್ತು !" ಎಂದನು.

ಹೀಗೆ ಹೇಳಿ ನಾಗಮಲ್ಲನು ಹೊರಟನು. ಅವನ ಸಹಚರರು ದುರ್ಮುಖರಾಜನನ್ನೂ, ಅಂಗರಕ್ಷಕನನ್ನೂ ಹಗ್ಗದಿಂದ ಕಟ್ಟಿ ಎಳೆದುಕೊಂಡು ಸಾಗಿದರು. ಅವರಿಬ್ಬರ ಉರುಳಾಟ ಯಾವುದೂ ಆ ಕಳ್ಳರ ಮುಂದೆ ನಡೆಯಲಿಲ್ಲ.

ಅವರು ದೊಡ್ಡದೊಂದು ಗುಹೆಯನ್ನು ಸಮೀಪಿಸುವಷ್ಟರಲ್ಲಿ ಕರಡಿಯಾದ ಕಟುಕನಾಯಕನು ಮರಗಳ ಗುಂಪಿನಿಂದ ಆನೆಯ ಮೇಲೇರಿಕೊಂಡು ಅಲ್ಲಿಗೇ ಬಂದು ದುರ್ಮುಖರಾಜನನ್ನು ನೋಡಿ, "ಸಿಕ್ಕಿದೆಯಾ ದುಷ್ಟಾ! ಇನ್ನು ನೀನು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ನಿನ್ನನ್ನೀಗಲೇ ನನ್ನ ಚಪಗೊಡಲಿಗೆ ಬಲಿ ಹಾಕಿಬಿಡುತ್ತೇನೆ" ಎಂದು ಕೂಗುತ್ತ ಆನೆಯ ಮೇಲಿನಿಂದ ಕೆಳಗೆ ಧುಮುಕಿ. ಅವರನ್ನು ಓಡಿಸಿಕೊಂಡು ಬರತೊಡಗಿದನು.

ನಾಗಮಲ್ಲನೇ ಮೊದಲಾದವರು ಹೆದರಿ ಓಡೋಡುತ್ತಾ ಹೋಗಿ ಒಂದು ಗುಹೆಯೊಳಗೆ ಗಬಗಬನೆ ನುಗ್ಗಿದರು. ಕಟುಕಕರಡಿ ಆ ಗುಹೆಯನ್ನು ಸಮೀಪಿಸುವುದರೊಳಗೆ, ಕಳ್ಳರು ಗುಹೆಯ ಬಾಯಿಗೆ ದೊಡ್ಡದೊಂದು ಕಲ್ಲನ್ನು ಅಡ್ಡವಿಟ್ಟುಬಿಟ್ಟರು. ಆದರೂ ಗುಹೆಯೊಳಗಿದ್ದವರೆಲ್ಲ ಹೆದರಿ ಗಡಗಡನೆ ನಡುಗುತ್ತಿದ್ದಾರೆ.

ಕಟುಕಕರಡಿಗಾರ ಗುಹೆಯ ಬಾಯಿಯ ಬಂಡೆಯನ್ನು ಕಾಲಿನಿಂದ ತುಳಿಯುತ್ತ, "ಒಳ್ಳೆಯ ಮಾತಿನಲ್ಲಿ ಗುಹೆಯೊಳಗಿನವರೆಲ್ಲ ಹೊರಗೆ ಬನ್ನಿ. ನನಗೆ ಬೇಕಾದ್ದು ದುಷ್ಟದುರ್ಮುಖರಾಜನ ತಲೆ ಮಾತ್ರ. ಉಳಿದವರಿಗೆ ಯಾವ ಭಯವೂ ಇಲ್ಲ," ಎಂದು ಕೂಗಿ ಹೇಳಿದನು.

ಆ ಕೂಗನ್ನು ಕೇಳಿ ನಾಗಮಲ್ಲನು ತನ್ನ ಇಬ್ಬರು ಅನುಚರರೊಂದಿಗೆ, "ಭೇಷ್ ಭೇಷ್ ! ಇದು ಇನ್ನೂ ಚೆನ್ನಾಗಿದೆ. ಆ ಪಿಶಾಚಿಯಂಥ ಕರಡಿಮನುಷ್ಯನಿಗೆ ಬೇಕಾದ್ದು ದುರ್ಮುಖರಾಜನ ತಲೆಯಂತೆ. ಯಾರು ಆ ದುರ್ಮುಖರಾಜ ? ಎಲ್ಲಿದ್ದಾನೆ ? ತಲೆ ಬಾಲ ತಿಳಿಯದ ಎಂಥ ಕಥೆಯಿದು ?" ಎಂದು ಹೇಳಿ ದುರ್ಮುಖರಾಜನನ್ನು ನೋಡಿ, "ದುರ್ಮುಖರಾಜನೆಂದರೆ ಇಲ್ಲಿಗೆ ಸಮೀಪದಲ್ಲಿರುವ ಉದಯಗಿರಿ ರಾಜ್ಯವನ್ನು ಆಳುವವನು. ನಾನು ಅರಣ್ಯವನ್ನು ಬಿಟ್ಟು ನಗರದ ವಿಚಿತ್ರನೋಡಲು ಹೋಗುವವನೇ ಅಲ್ಲ. ಆ ರಾಜನನ್ನು ನೋಡಿದವನೂ ಅಲ್ಲ. ಆದರೆ ಅವನ ಆಳಿಕೆಯ ಪ್ರಜಾಪೀಡಕತನವನ್ನು ತುಂಬಾ ಕೇಳಿದ್ದೇನೆ. ಅವನ ಮೇಲೆ ಈ ವಿಚಿತ್ರ ಪ್ರಾಣಿಗೆ ಏಕೆ ಇಷ್ಟು ಕೋಪವೋ ? ಒಂದು ವೇಳೆ ನೀನೇ ಆ ದುರ್ಮುಖರಾಜ ಅಲ್ಲವಷ್ಟೆ ?" ಎಂದನು ಪರೀಕ್ಷಿಸಿ ನೋಡುತ್ತಾ.

"ಇದೊಳ್ಳೇ ಪೇಚಾಟವಾಯಿತಲ್ಲ. ನಾನು ದುರ್ಜಯಶೆಟ್ಟಿ, ಉದಯಗಿರಿ ನಗರದವನೆಂದು ಮೊದಲೇ ಹೇಳಿದ್ದೇನೆ. ಯಾವುದೋ ಪಿಶಾಚಾ ವೇಶದಲ್ಲಿರುವ ಕರಡಿಮನುಷ್ಯನ ಮಾತು ಕೇಳಿ ನನ್ನ ಮೇಲೆ ಸಂದೇಹಪಡಬೇಡ. ನಾವು ಕ್ಷೇಮವಾಗಿ ಇಲ್ಲಿಂದ ಪಾರಾಗುವ ಮಾರ್ಗವಿದ್ದರೆ ನೋಡಪ್ಪ. ನೀನು ಕೇಳಿದ ಹತ್ತು ಸಾವಿರ ವರಹ ಕೊಟ್ಟುಬಿಡುತ್ತೇನೆ. ಅಲ್ಲಾ ಸ್ವಲ್ಪ ಹೆಚ್ಚು ಬೇಕಾದರೂ ಕೇಳಿಕೋ. ಕೊಡುತ್ತೇನೆ" ಎಂದ ದುರ್ಮುಖ ದೀನನಾಗಿ.

"ನಮ್ಮ ಮಹಾರಾಜರು ಹೇಳಿದ ಮಾತು ಈವರೆಗೂ ತಪ್ಪಿದವರಲ್ಲ" ಎಂದನು ಅಂಗರಕ್ಷಕ. ಅದನ್ನು ಕೇಳಿ ದುರ್ಮುಖರಾಜನು ಕೋಪದಿಂದ, "ಛೀ ಮೂರ್ಖ! ನಿನಗೂ ಏನೋ ಪಿಶಾಚಿ ಹಿಡಿಯಿತೇನು? ಈ ಅರಣ್ಯದಲ್ಲಿ ಹೊಕ್ಕಕ್ಷಣದಿಂದ ನೋಡುತ್ತಿದ್ದೇನೆ. ಸುಮ್ಮಸುಮ್ಮನೆ ನನ್ನನ್ನು ಮಹಾರಾಜಾ ಮಹಾರಾಜಾ ಅಂತ ಹೇಳುತ್ತಿರುವೆಯಲ್ಲ? ಇನ್ನು ಹಾಗೆಂದರೆ ಬಹಿರಂಗ ಶಿರಚ್ಛೇದ ಶಿಕ್ಷೆ ವಿಧಿಸುತ್ತೇನೆ! ಎಚ್ಚರಿಕೆ!" ಎಂದನು.

ನಾಗಮಲ್ಲನಿಗೆ ಧಿಗ್ಗೆನಿಸಿತು. ಅವನು ತನ್ನ ಅನುಚರರೊಂದಿಗೆ ಮೆಲ್ಲನಿಯಿಂದ, "ಎಲೋ! ನಾವು ಅದೃಷ್ಟದಿಂದಲೋ ದುರದೃಷ್ಟದಿಂದಲೋ ಉದಯಗಿರಿರಾಜ ದುರ್ಮುಖನನ್ನೇ ಹಿಡಿದ ಹಾಗಿದೆ. ರಾಜನ ಹೊರತು ಮತ್ತಾರಿಗಾದರೂ ಬಹಿರಂಗ ಶಿರಚ್ಛೇದ ಶಿಕ್ಷೆ ಕೊಡುವ ಹಕ್ಕು ಇರುವುದುಂಟೆ? ಈ ದುರ್ಜಯಶೆಟ್ಟಿ ಎಂಬವನು ಹೆದರಿ ಬಾಯಿ ಜಾರಿ ತಾನು ಯಾರೆಂಬುದನ್ನು ಹೇಳಿಬಿಟ್ಟಿರಬೇಕು" ಎಂದನು.

ದುರ್ಮುಖರಾಜನಿಗೆ ಈಗ ಎರಡು ಬಗೆಯ ಭಯ ಹಿಡಿಯಿತು. ಒಳಗಿರುವ ಕಳ್ಳರು ತನ್ನನ್ನೇನು ಮಾಡುವರೋ ಎಂಬ ಭಯದೊಂದಿಗೆ, ಗುಹೆಯ ಬಾಯಿಯ ಕಲ್ಲನ್ನು ಒದ್ದು ಉರುಳಿಸಲು ನೋಡುವ



ಕರಡಿಯಾದ ಕಟುಕನಾಯಕನ ಭಯ ಬೇರೆ ಸೇರಿಕೊಂಡಿತು. ಆ ಕಲ್ಲು ಯಾವ ಕ್ಷಣಕ್ಕೂ ಉರುಳೀತು!

ಅವನು ಏನೋ ಎಚ್ಚರಿಕೆ ಕೊಡುವವನಂತೆ ಪಕ್ಕದಲ್ಲಿದ್ದ ತನ್ನ ಅಂಗರಕ್ಷಕನನ್ನು ಮೊಣಕೈಯಿಂದ ತಿವಿದು, ಚೋರನಾಯಕನನ್ನು ನೋಡಿ, "ನಾಗಮಲ್ಲಾ, ನನ್ನನ್ನು ಕುರಿತು ನೀನು ಏನೋ ಭ್ರಮೆಯಲ್ಲಿ ಬಿದ್ದಹಾಗಿದೆ. ನಾನು ಸತ್ಯವಾಗಿಯೂ ದುರ್ಜಯಶೆಟ್ಟಿಯೇ. ನೆನಪಿಟ್ಟುಕೋ. ಈ ಭಯಂಕರವಾದ ಅರಣ್ಯಕ್ಕೆ ಸೇರಿದ ಹೊತ್ತಿನಿಂದ ನನ್ನ ನೌಕರನು ಬುದ್ಧಿ ಕೆಟ್ಟು ಹುಚ್ಚನ ಹಾಗೆ ಬೊಗಳುತ್ತಿದ್ದಾನೆ. ಇವನನ್ನು ಯಾವುದೋ ದುಷ್ಟಗ್ರಹವು ಹಿಡಿದುಬಿಟ್ಟಿದೆ" ಎಂದನು.

"ಹೌದೌದು ಮಹಾರಾಜರೇ. ನಿಮ್ಮ ಊಹೆ ನಿಜವೇ. ಅದೊಂದು ಹುಚ್ಚುಗ್ರಹವೇ!" ಎಂದು ಅಂಗರಕ್ಷಕನು ನರಳುವ ಸ್ವರದಲ್ಲಿ ಹೇಳಿದನು. ನಾಗಮಲ್ಲನು ತಲೆಯನ್ನು ಗಟ್ಟಿಯಾಗಿ ಹಿಡಿದುಕೊಂಡು,

" ಅದೇನಾದರೂ ಈಗೇನಿಲ್ಲ. ನೀನು ರಾಜನಾದರೂ ಶೆಟ್ಟಿಯಾದರೂ ಈಗೇನೂ ಮಾಡುವಂತಿಲ್ಲ. ಆ ಭಯಂಕರವಾದ ಕರಡಿ ಗುಹೆಯ ಕಲ್ಲನ್ನು ಎಬ್ಬಿಸಿ ಹಾಕಿ ಒಳಗೆ ನುಗ್ಗಿ ನಮ್ಮೆಲ್ಲರ ತಲೆಗಳನ್ನು ಚಪ ಗೊಡಲಿಯಿಂದ ಕಡಿದುಹಾಕುತ್ತದೆ " ಎಂದು ಹೇಳಿ ತನ್ನ ಅನುಚರರನ್ನು ನೋಡಿ, " ಎಲೋ. ಹೇಗೂ ನಾವು ಸಾಯುವುದಂತೂ ನಿಜ. ನಾವೇ ಮುಂದಾಗಿ ಗುಹೆಯ ಕಲ್ಲನ್ನು ಆಚೆಗೆ ಉರುಳಿಸಿ, ಕತ್ತಿಗಳೊಂದಿಗೆ ಆ ಮನುಷ್ಯ ಕರಡೀ ಮೇಲೆ ಬಿದ್ದರೆ ಹೇಗಿದ್ದೀತು ?" ಎಂದು ಕೇಳಿದನು.

ಕಳ್ಳರಿಬ್ಬರೂ ಅವನಿಗೆ ಪ್ರತ್ಯುತ್ತರ ಕೊಡುವುದರೊಳಗೆ ಅಂಗರಕ್ಷಕನು ಮಾತು ತೂರಿಸುತ್ತ, " ನಾಗಮಲ್ಲಾ, ಅದು ಸಾಮಾನ್ಯ ಮನುಷ್ಯ ಕರಡಿಯಲ್ಲ, ಕಟುಕನಾಯಕ ಕರಡಿ ! ಕರಡಿಕೆಂಗಣ್ಣ ಮಹಾ ಮಾಂತ್ರಿಕ ಸೃಷ್ಟಿಸಿದ್ದು ! ಆದರ ಬಲವು ರಾಕ್ಷಸನ ಬಲವೇ. ನಾವು ಮಾತಾಡದೆ ಈ ಗುಹೆಯೊಳಗೆ ಇದ್ದು ಬಿಡುವುದೇ ಕ್ಷೇಮ " ಎಂದನು.

ಅಷ್ಟರಲ್ಲೇ ಕಟುಕ ಕರಡಿ ಗುಹೆಯ ಬಾಯಿಯ ಕಲ್ಲನ್ನು ಎರಡು ಕೈಗಳಿಂಲೂ ಹಿಡಿದು ಎತ್ತಿ, ಗುಹೆಯೊಳಗೆ ಬಗ್ಗಿ ನೋಡುತ್ತ, " ಎಲವೋ ದುರ್ಮುಖ ರಾಜಾ, ನಿನ್ನ ತಲೆಯನ್ನು ಹೀಗೆ ಚಾಚು, ಅದನ್ನು ಕಡಿದು ತೆಗೆದುಕೊಂಡು ನನ್ನ ದಾರಿಯಲ್ಲಿ ಹೋಗುತ್ತೇನೆ. ನಿನ್ನ ಮುಂಡಗಿಂಡ ನನಗೆ ಬೇಡ." ಎಂದಿತು.

" ಓಹ್ ! ಚೆನ್ನಾಗಿದೆ ಇದರ ಕೋಪವೆಲ್ಲಾ ದುರ್ಮುಖ ರಾಜನೊಬ್ಬನ ಮೇಲೆಯೇ ಎಂದಾಯಿತು. ನಮಗೇನೂ ಭಯವಿಲ್ಲ. ದುರ್ಜಯ ಶೆಟ್ಟಿಯೆನ್ನುವ ಇವನನ್ನೇ ದುರ್ಮುಖ ರಾಜನೆಂದು ಕರೆಯುತ್ತದೆ. ಇವನನ್ನು ಹಿಡಿದು ಗುಹೆಯ ಹೊರಗೆ ದೂಡಿರಿ " ಎಂದು ಚೋರ ನಾಯಕನು ತನ್ನ ಅನುಚರರಿಗೆ ಹೇಳಿದನು.

ಕಳ್ಳರಿಬ್ಬರೂ ದುರ್ಮುಖ ರಾಜನ ತೋಳುಗಳನ್ನು ಹಿಡಿದು ಗುಹೆಯ ಹೊರಗೆ ತಳ್ಳಲು ಹೆಣಗುತ್ತಿರಲು, ಅವನೂ ತುಳ್ಳಾಡಿಕೊಂಡು ಪ್ರತಿಭಟಿಸುತ್ತಿರಲು, ಆ ಗುಹೆಗೆ ತುಸು ದೂರದಿಂದ ಒಂದು ಗಡುಸುದನಿ ಹೊರಟಿತು: " ಏನಿದು ಗಲಭೆ ? ಆಗಿನಿಂದ ನೋಡುತ್ತಾ ಇದ್ದೇನೆ. ಪಕ್ಕದ ಗುಹೆಯಲ್ಲಿ ಈ ಉಗ್ರದಂಡನೆಂಬ ಮಹಾ ರಾಕ್ಷಸನಿರುವ ಸಂಗತಿ ಮರೆತಿರೇನು ? "

ಅದಕ್ಕೆ ಉತ್ತರವಾಗಿ ಕಟುಕಕರಡಿ, " ಏನು ? ನೀನು ರಾಕ್ಷಸನೇ ? ನಿನ್ನ ಹೆಸರು ಉಗ್ರದಂಡನೇ ? ಬಾಬಾ ! ಕರಡಿಕೆಂಗಣ್ಣ ಗುರುವಿನ ಮಂತ್ರದಂಡದ ಶಕ್ತಿ ಪಡೆದ ಈ ಚಪಗೊಡಲಿ ನಿನ್ನ ಕಂಠವನ್ನೂ ಕಡಿಯಬಲ್ಲುದು " ಎನ್ನುತ್ತ ಆ ರಾಕ್ಷಸನ ಕಡೆಗೇ ಧಾವಿಸಿತು.





# ಕರಡಿಕೆಂಗಣ್ಣ

## ೨

[ ಅರಣ್ಯದಲ್ಲಿ ಕಳ್ಳರ ನಾಯಕನಾದ ನಾಗಮಲ್ಲನಿಗೆ ಸಿಕ್ಕಿದ ದುರ್ಮುಖರಾಜನು ತನ್ನ ಹೆಸರು ದುರ್ಜಯಶೆಟ್ಟಿ ಎಂದು ಹೇಳಿ ತಪ್ಪಿಸಿಕೊಳ್ಳಲು ನೋಡಿದನು. ನಾಗಮಲ್ಲನು ನಂಬದೆ ಅವನನ್ನು ಒಂದು ಗುಹೆಯೊಳಗೆ ಒಯ್ದನು. ಕಟುಕನಾಯಕ ಕರಡಿ ರೂಪದಲ್ಲಿ ಅಲ್ಲಿಗೇ ಬಂದನು. ಅವರ ಶಬ್ದ ಕೇಳಿ ಉಗ್ರದಂಡನೆಂಬ ರಾಕ್ಷಸನೊಬ್ಬ ಅಲ್ಲಿ ಬಂದನು. ಕಟುಕಕರಡಿಯವನು ರಾಕ್ಷಸನ ಮೇಲೆ ಚಪಗೊಡಲಿ ಎತ್ತಿದನು.]

**ಸೂ**ರ್ಯಕಾಂತಿಯಲ್ಲಿ ಜಗಜಗ ಹೊಳೆಯುವ ಚಪ ಗೊಡಲಿಯನ್ನೂ, ಅದನ್ನು ತನ್ನ ಕಡೆಗೆ ಎತ್ತಿ ಹಿಡಿದು ಕುಣಿಸುತ್ತ ಮುಂದೆಬರುವ ಕರಡಿಕಟುಕ ನಾಯಕನನ್ನೂ ನೋಡಿ ಉಗ್ರದಂಡ ರಾಕ್ಷಸನಿಗೆ ಮೊದಲು ಆಶ್ಚರ್ಯವಾಯಿತು. ಅಷ್ಟರಲ್ಲಿ ಏನೋ ನೆನಪಿಗೆ ಬಂದು ಅವನಲ್ಲಿ ಕಂಪನ ಉಂಟಾಗ ತೊಡಗಿತು. ಆದರೂ ಅವನು ತನ್ನ ಕಲ್ಲಿನ ಗದೆಯನ್ನು ಮುಂದಕ್ಕೆ ಚಾಚಿ, " ಎಲೋ ! ನೀನೊಬ್ಬ ಕಳ್ಳ ! ನಿಜವಾದ ಭಲ್ಲೂಕವಲ್ಲ. ಮಾನವ ಭಲ್ಲೂಕಾಧಮಾ ! ನಿಲ್ಲಲ್ಲೇ ! ಏನು ನಿನ್ನ ಪೊಗರು ? " ಎಂದು ಗರ್ಜನೆಯುದನಿಯಲ್ಲಿ ಕೇಳಿದನು. ಕರಡಿ ಕಟುಕನು ತಟ್ಟನೆ ನಿಂತು, ಉಗ್ರದಂಡನನ್ನು ಮೇಲಿಂದ ಕೆಳಗಿನವರೆಗೂ ನೋಡಿ, " ಎಲವೋ ! ಉಗ್ರದಂಡರಾಕ್ಷಸಾ ! ರಾಕ್ಷಸನೆಂಬ ಅಹಂಕಾರ ನನ್ನ ಮುಂದೆ ತೋರಿಸಬೇಡ ! ನಿನ್ನ ಹೋತದ ಗಾಂಭೀರ್ಯವನ್ನು ಸಾಕುಮಾಡು: ನಿನ್ನ ಕಾಲೂ ಗದೆಹಿಡಿದ ಕೈಯೂ ಕಂಠಸ್ವರವೂ ನಡುಗುವುದು ನನಗೆ ಕಾಣುತ್ತದೆ! ಬರೀ ಭೂತಾಕಾರ ನೋಡಿ ಹೆದರುವ ಪಿಂಡವಲ್ಲ ನಾನು!" ಎಂದನು. ಆ ಮಾತು ಕೇಳಿ ಉಗ್ರದಂಡನು ಹಲ್ಲು ಕಡಿಯುತ್ತ,



ಕಾಲುಗಳಿಂದ ನೇಲವನ್ನು ಗುದ್ದಿ, "ಓಹೋ! ನಿನ್ನ ಕಣ್ಣು ಸೂಕ್ಷ್ಮವಾಗಿದೆಯೆಂದಾಯಿತು. ನನ್ನ ಕೈಕಾಲು ಗಳು ಏಕೆ ನಡುಗುತ್ತಿವೆ ಗೊತ್ತೋ? ನಿನ್ನನ್ನು ನೋಡಿದ ಭಯದಿಂದಲೇನಲ್ಲ. ಅಸಹ್ಯದಿಂದ! ಕೋಪದಿಂದ! ಹೌದೂ, ನಿನ್ನಲ್ಲಿ ಕರಡೀ ಪಾಲೆಷ್ಟು? ಮನುಷ್ಯನ ಪಾಲೆಷು? ನಿನ್ನ ವೇಷದ ಸಂಕರ ರಹಸ್ಯ ನನಗೆ ಗೊತ್ತಾಗದೆಂದುಕೊಂಡೆಯಾ? ಏನಿದು ಈ ವಿಚಿತ್ರ ಸಂಕರ ರೂಪ?" ಎಂದನು.

ಆ ಮಾತು ಕೇಳಿ ಕಟುಕಭಲ್ಲೂಕನು ಅತ್ಯುಗ್ರನಾಗಿ, ಚಪ ಗೊಡಲಿಯಿಂದ ಸಮೀಪದಲ್ಲಿದ್ದ ಬಂಡೆಯ ಮೇಲೆ ಹೊಡೆದು, "ಎಲವೋ ರಾಕ್ಷಸಾಧಮನೇ, ಕರಡೀಕೆಂಗಣ್ಣ ಮಾಂತ್ರಿಕರಿಂದ ಸೃಷ್ಟಿಸಲ್ಪಟ್ಟ ಈ ಕಟುಕರನಾಯಕ ಕರಡಿಯಾದ ನನ್ನನ್ನು ಅವ ಹೇಳನೆ ಮಾಡುವೆಯೇನು? ಇದು ಸಂಕರವೇಷವಲ್ಲ; ಬಂಡೆಯಂತೆ ಗಟ್ಟಿಯಾದ ಶರೀರ! ಇಗೋ, ನಿನ್ನ ತಲೆಯನ್ನು ಈಗಲೇ ನೆಲದಮೇಲೆ ಹೊರಳಾಡಿ ಸುತ್ತೇನೆ!" ಎಂದು ಮುಂದಕ್ಕೆ ಕುಪ್ಪಳಿಸಿ ಹಾರಿ, ಚಪಗೊಡಲಿಯನ್ನು ಸೊಯ್ಯನೆ ತಿರುಗಿಸಿ ರಾಕ್ಷಸನ ಕಂಠದ ಕಡೆಗೆ ಬೀಸಿದನು.

ಉಗ್ರದಂಡನು ಹಿಂದಕ್ಕೆ ಕುಪ್ಪಳಿಸಿ, ಅಲ್ಲಿದ್ದ ಚಿಕ್ಕದೊಂದು ದೇವದಾರು ವೃಕ್ಷದ ಬಳಿಯಲ್ಲಿ ಸರಿದು ನಿಂತು, ಮತ್ತೆ ತನ್ನ ಕಡೆಗೆ ಚಪಗೊಡಲಿ ತಿರುಗಿಸುತ್ತಾ ಬರುವ ಕಟುಕಕರಡಿಯವನೊಂದಿಗೆ; "ಎಲೋ ಕರಡಿಯಾದ ಕಟುಕಮನುಷ್ಯಾ, ನೀನೂ ನನ್ನ ಹಾಗೇ ಮಹಾ ಬಲಿಷ್ಠನೆಂಬುದನ್ನು ಒಪ್ಪಿ ಕೊಳ್ಳುತ್ತೇನೆ. ಸ್ವಲ್ಪ ಶಾಂತಿ ವಹಿಸಿ ಆಲೋಚನೆ ಮಾಡು. ನಾವಿಬ್ಬರೂ ಜಿದ್ದಿಗೆಬಿದ್ದು ಒಬ್ಬರ ನ್ನೊಬ್ಬರು ಕೊಂದುಕೊಳ್ಳುವ ಹಣಗಾಟದಲ್ಲಿ ಕೈಕಾಲು ಮುರಿದುಕೊಂಡರೆ ಯಾರಿಗೆ ಲಾಭವಾಗುತ್ತೆ ಗೊತ್ತೇನೋ?" ಎಂದನು.

ಆ ಪ್ರಶ್ನೆ ಕೇಳಿದ ಕೂಡಲೇ ಕರಡಿಕಟುಕ ನಾಯ ಕನಿಗೆ ತಾನು ಆ ಪ್ರಾಂತಕ್ಕೆ ಬಂದ ಕೆಲಸವೇನೆಂಬುದು ನೆನಪಿಗೆ ಬಂತು. ಕರಡಿಕೆಂಗಣ್ಣ ಮಾಂತ್ರಿಕರು ತನ್ನನ್ನು ಕಳುಹಿಸಿದ್ದು, ದುಷ್ಟನಾದ ಉದಯಗಿರಿಯ ದುರ್ಮುಖಿರಾಜನ ತಲೆಯನ್ನು ಕಡಿಯಬೇಕೆಂದು. ಆ ಕೆಲಸ ಮುಗಿಸಿಕೊಂಡು ಹಿಂದಿರುಗಿ ಹೋಗುವು ದನ್ನು ಬಿಟ್ಟು ರಾಕ್ಷಸನೊಂದಿಗೆ ತಕರಾರು ಮಾಡ ಬೇಕಾದ ಅಗತ್ಯವೇನಿದೆ? ತನ್ನನ್ನು ಹೆದರಿಸಿದ ಆ ರಾಕ್ಷಸ ತಾನು ಬೀಸಿದ ಚಪಗೊಡಲಿಯನ್ನು ನೋಡಿ ಅಷ್ಟು ದೂರ ಓಡಿದನೆಂದರೆ ಅವನು ಸೋತು ಓಡಿದಂತೆಯೇ! ತಾನು ಗೆದ್ದಂತೆಯೇ! ಇದಿಷ್ಟಕ್ಕೂ ಮೂಲಕಾರಣ ಮಹಾಮಾಂತ್ರಿಕರಾದ ಕರಡಿಕೆಂಗಣ್ಣರೇ! ಅವರು ಹೇಳಿದ ಕಾರ್ಯವೇ ಮುಖ್ಯವಲ್ಲದೆ, ಈ ರಾಕ್ಷಸನೊಂದಿಗೆ ಸ್ಪರ್ಧೆ ತನಗೇಕೆ?

ಹೀಗೆ ಆಲೋಚನೆಮಾಡಿ, ಬೆರಳಿನಿಂದ ಚಪ ಗೊಡಲಿಯ ಹರಿತವೆಷ್ಟೆಂಬುದನ್ನು ನೋಡುತ್ತ



"ಎಲೋ ಉಗ್ರದಂಡಾ! ನಾನಿಲ್ಲಿಗೆ ಬಂದ ಕಾರ್ಯ ವೇನೆಂಬುದನ್ನು ಸರಿಯಾದ ಸಮಯಕ್ಕೆ ನೆನಪು ಮಾಡಿದಿ. ಮೆಚ್ಚಿದೇ ನಿನಗೆ! ಇನ್ನು ನಿನ್ನ ದಾರಿ ಹಿಡಿದು ಹೋಗಿಬಿಡು. ನಾನು ಅಲ್ಲಿ ಗುಹೆಯೊಳಗೆ ಅಡಗಿರುವ ಆ ದುರ್ಮುಖರಾಜನ ತಲೆ ಕಡಿದು ಕೊಂಡು ನನ್ನ ದಾರಿಹಿಡಿದು ಹೋಗುತ್ತೇನೆ. ನನಗಾಗಿ ಮಹಾ ಮಾಂತ್ರಿಕರು ಕಾದಿದ್ದಾರೆ." ಎಂದು ಹೇಳಿ ಹಿಂದಕ್ಕೆ ತಿರುಗಿದನು.

ಉಗ್ರದಂಡನು ಎರಡಡಿ ಮುಂದಕ್ಕಿಟ್ಟು, "ಸ್ವಲ್ಪ ತಾಳು ಕಟಕನಾಯಕನೇ! ಇದೀಗ ನೀನು ಕರಡಿ ಕೆಂಗಣ್ಣ ಎಂಬ ಮಹಾಮಾಂತ್ರಿಕರ ಹೆಸರು ಹೇಳಿದೆ ಯಲ್ಲ? ನಾನೂ ಒಬ್ಬ ಕೆಂಗಣ್ಣ ಮಾಂತ್ರಿಕನನ್ನು ನೋಡಿದ್ದೇನೆ. ಆತನೂ ನೀನು ಹೇಳುವವನೂ ಒಬ್ಬನೆಯೋ ಬೇರೆ ಬೇರೆಯೋ ಅಂತ ಸಂದೇಹ ವಾಗಿದೆ. ನೀನು ಹೇಳುವ ಈ ಮಾಂತ್ರಿಕನ ವಯಸ್ಸು ಎಷ್ಟಿರಬಹುದು? ರೂಪ ಆಕಾರ ಆಯುಧ ಮುಂತಾದ್ದು ಹೇಗಿವೆ?" ಎಂದನು.

ಕರಡಿಕಟುಕನಾಯಕನು, ದೊಡ್ಡ ಧ್ವನಿಯಿಂದ ನಕ್ಕು, "ಸೂರ್ಯ ಚಂದ್ರರ ವಯಸ್ಸೆಷ್ಟೋ ಅವರಿಗೂ ಅಷ್ಟೇ ವಯಸ್ಸು. ಅವರ ಕಣ್ಣು ಮುಂದೆಯೇ ಹಿಮಾಲಯ ಪರ್ವತಗಳು ಹುಟ್ಟಿ ಇಷ್ಟು ದೊಡ್ಡದಾಗಿವೆ. ಬ್ರಹ್ಮಪುತ್ರಾ ನದಿ ಎಳೆ ಮಗುವಾಗಿದ್ದಾಗ ಕಿವ್ವನೆ ಅರಚಿ ಸಾವಿರಾರು ಜಲ ಶಾಖೆಗಳಾಗಿ ಓಡಾಡುತ್ತಾ ಹಾರಿದುದನ್ನು ಆತ ನೋಡಿದ್ದಾನೆ. ಉಳಿದದ್ದೆಲ್ಲಾ ವಿವರಿಸಿ ಹೇಳಲಿಕ್ಕೆ ಈಗ ಸಮಯವಿಲ್ಲ, ಹೋಗಯ್ಯ" ಎಂದನು.

"ಭಲಿರೇ, ಕರಡಿಕಟುಕಾ! ನಿನ್ನ ಕೈಯಲ್ಲಿರುವ ಚಪಗೊಡಲಿ ಎಷ್ಟು ಹರಿತವೋ, ನಿನ್ನ ತಲೆ ಯೊಳಗಿನ ನಾಲಗೆಯೂ ಅಷ್ಟೇ ಹರಿತ! ನಾನೂ ನಿನ್ನ ಹಿಂದೆಯೇ ಬಂದು ಆ ಕರಡಿಕೆಂಗಣ್ಣ ಮಹಾ ಮಹಾಮಾಂತ್ರಿಕರ ದರ್ಶನ ಮಾಡಿದರೆ ಏನೂ ಅಂತ? ಬರಲೇ? ಯಾಕೆಂದರೆ ಅವರೊಂದಿಗೆ ಸ್ನೇಹ ಮಾಡಲಿಕ್ಕೆ ಸಾಧ್ಯವೋ ನೋಡಬೇಕು." ಎಂದು ಉಗ್ರ ದಂಡ ರಾಕ್ಷಸನು ತನ್ನ ಕೈಯಲ್ಲಿದ್ದ ಕಲ್ಲಿನ ಗದೆಯನ್ನು ದೂರ ಬಿಸುಟನು.

ರಾಕ್ಷಸನ ಈ ದಿಢೀರ್ ಕೆಲಸವನ್ನು ನೋಡಿ, ಕರಡಿಕಟುಕನು ಆಶ್ಚರ್ಯ ಪಡುತ್ತ, "ಇದೇ ನಿದೇನು? ನಿನ್ನ ಕಲ್ಲಿನ ಗದೆಯನ್ನು ಅಷ್ಟು ದೂರ ಬಿಸುಟುಬಿಟ್ಟೆಯಲ್ಲ! ಇದರಲ್ಲೇನಾದರೂ ವಿಶೇಷ ವಿದೆಯೆ?" ಎಂದನು.

"ಯಾಕಿಲ್ಲ? ಈ ಕ್ಷಣದಿಂದ ನಾವಿಬ್ಬರೂ. ಅಂದರೆ ನೀನೂ ನಾನೂ ಸ್ನೇಹಿತರು!" ಎಂದನು ಉಗ್ರದಂಡ ನಗುತ್ತ.

ಆದನ್ನು ಕೇಳಿ ಕರಡಿಕಟುಕನು ಹೊಟ್ಟೆ ಹುಣ್ಣಾ ಗುವ ಹಾಗೆ ನಕ್ಕು, "ಕೆಂಗಣ್ಣ ಮಾಂತ್ರಿಕರ ಕೈಯಲ್ಲಿರುವ ಭಲ್ಲೂಕ ಶಿರಸ್ಸಿನ ಮಂತ್ರದಂಡವು ತಗಲಿ ನನ್ನ ರೂಪ ಹೀಗಾದರೂ, ಅಸಲು ನಾನು



ನಾವೆಲ್ಲರೂ ಸಾಯಬೇಕು! ಈಗೇನು ಮಾಡೋಣ?" ಎಂದನು ಒಣ ತರಗೆಲೆಯಂತೆ ನಡುಗುತ್ತ.

ನಾಗಮಲ್ಲನು ದುರ್ಮುಖರಾಜನನ್ನು ನೋಡಿದನು. ದುರ್ಮುಖನು ತನಗೆ ತಾನೇ ಗೊಣಗಿಕೊಳ್ಳುತ್ತ ಅಲುಗಾಡುವ ಗುಹೆಯ ದ್ವಾರದ ಕಲ್ಲನ್ನೇ ನೋಡುತ್ತಿದ್ದನು.

ನಾಗಮಲ್ಲನು ತನ್ನ ಇಬ್ಬರು ಅನುಚರರಿಗೆ ಕತ್ತಿಗಳನ್ನು ಸಿದ್ಧವಾಗಿಟ್ಟುಕೊಳ್ಳಲು ಎಚ್ಚರಿಸಿ, ದುರ್ಮುಖನೊಂದಿಗೆ, "ಎಲೈ ದೊಡ್ಡ ಮನುಷ್ಯನೇ, ನಿನ್ನ ಅಂಗರಕ್ಷಕನ ಮಾತಿನಿಂದ ನೀನು ಬರಿಯ ಶೆಟ್ಟಿಗಿಟ್ಟಿ ಅಲ್ಲವೆಂದು, ರಾಜನೇ ಎಂದು ನಮಗೆ ನಂಬುಗೆಯಾಗಿದೆ. ನೀನೀಗ ನಿನ್ನ ತಲೆಯನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡುವುದನ್ನು ಬಿಟ್ಟು, ಗೊಣಗುತ್ತಿರುವುದು ಏನನ್ನು? ಮಂತ್ರಗಿಂತ್ರ ಹೇಳುವೆಯಾ?" ಎಂದನು ಕೋಪದಿಂದ.

"ನಾನು ಗೊಣಗುವುದು ಮಂತ್ರ. ಇಷ್ಟದೈವದ ಮಂತ್ರ! ಏನು ಮಾಡಬೇಕೆಂದು ದೈವವನ್ನು ಪ್ರಾರ್ಥಿಸುತ್ತಿದ್ದೇನೆ!" ಎಂದನು ದುರ್ಮುಖರಾಜ ನಡುಗುವ ಕಂಠದಿಂದ,

"ಓಹೋ! ಹಾಗಾದರೆ ಈ ದಿನದವರೆಗೆ ನೀನು ಮಾಡಿದ ಕೆಲಸಗಳನ್ನೆಲ್ಲಾ ನಿನ್ನ ಇಷ್ಟದೈವದ ಅನುಮತಿಯಿಂದಲೇ ಮಾಡಿರುವೆಯೆಂದಾಯಿತು. ಎಲ್ಲರೂ ನಿನ್ನ ಆಳಿಕೆಯ ಅನ್ಯಾಯವನ್ನು ಹೇಳುವುದು ಕೇಳಿದ್ದೇನೆ. ಛೀ ಛೀ! ಹೊರಗೆ ನಡಿ! ಅಧಮ ರಾಜ!" ಎಂದು ನಾಗಮಲ್ಲನು ತಿರಸ್ಕಾರದಿಂದ ದುರ್ಮುಖನನ್ನು ದೂಡಿ, ಅರ್ಧ ತೆರೆದ ಗುಹೆಯ ಬಾಗಿಲ ಬಳಿಗೆ ಹೋಗಿ, "ಓಯ್ ಭಲ್ಲೂಕ ಮಹಾನುಭಾವಾ! ಸ್ವಲ್ಪ ನಿಧಾನಿಸು. ಈ ಗುಹೆಯೊಳಗಿರುವವರಲ್ಲಿ ನಿನಗೆ ಬೇಕಾದವರು ದುರ್ಮುಖಿ ಶೆಟ್ಟಿ ಎಂದು ಸುಳ್ಳು ಹೇಳುವ ದುರ್ಮುಖರಾಜ ತಾನೇ? ಅಥವಾ ಇಲ್ಲಿ ಇರುವವರೆಲ್ಲರೂ ನಿನಗೆ

ಯಾರೆಂಬುದು ಸ್ವಲ್ಪ ಮಟ್ಟಿಗೆ ನೆನಪಿದೆ. ದುರ್ಮುಖರಾಜನ ತಲೆಯನ್ನು ಅವರಿಗೆ ಕೊಟ್ಟ ಮರುಕ್ಷಣದಲ್ಲೇ ಅವರು ನನ್ನನ್ನು ಕಟುಕ ಮಾನವನನ್ನಾಗಿ ಮಾಡಿಬಿಡುತ್ತಾರೆ. ಆದುದರಿಂದ ನಮ್ಮಿಬ್ಬರ ನಡುವೆ ಸ್ನೇಹವು ಸಾಗಲಾರದು. ನಾನು ನಿನಗೆ ತಕ್ಕ ಸ್ನೇಹಿತನಾಗಲು ಸಾಧ್ಯವೇ ಇಲ್ಲ, ಇದ್ದರೂ ನನಗೆ ಬೇಡ. ನಿನ್ನ ಗುಹೆಯ ದಾರಿ ನೀನು ನೋಡಿಕೋ ರಾಕ್ಷಸಾ!" ಎಂದು ಹೇಳಿ, ದುರ್ಮುಖನು ಸೇರಿಕೊಂಡಿರುವ ಗುಹೆಯ ಕಡೆಗೆ ನಡೆದನು.

ಈ ಸಾರಿ ಕರಡಿ ಕಟುಕನಾಯಕನು ಗುಹೆಯ ಬಾಯಿಯಲ್ಲಿರುವ ಕಲ್ಲನ್ನು ಎಳೆದು ಹೊರಳಿಸುವ ಪ್ರಯತ್ನ ಮಾಡಿದ ಕೂಡಲೇ ಒಳಗಿದ್ದ ರಾಜನ ಅಂಗರಕ್ಷಕನು ಕಳ್ಳ ನಾಗಮಲ್ಲನೊಂದಿಗೆ, "ಈ ಕಲ್ಲು ಎಷ್ಟು ಹೊತ್ತು ಹೀಗೆ ನಿಂತೀತು? ಅವನ ಶಕ್ತಿಯಿಂದ ಈಸಾರಿ ಖಂಡಿತಾ ಗುಹೆಯ ಕಲ್ಲು ಹೊರಳಿ ಹೋಗುತ್ತದೆ. ಆಮೇಲೆ ಮಹಾರಾಜರೊಂದಿಗೆ

ಆಹುತಿಯಾಗಬೇಕೆ ?" ಎಂದು ಕೇಳಿದನು. "ಬೇಡ ಬೇಡ! ನನಗೆ ಬೇಕಾದವನು ದುರ್ಮುಖ ರಾಜ ನೊಬ್ಬನೇ! ಉಳಿದ ಚಿಲ್ಲರೆ ಮನುಷ್ಯರೊಂದಿಗೆ ನನಗೇನು ಕೆಲಸ ? ಅವನನ್ನು ಗುಹೆಯೊಳಗಿನಿಂದ, ತಲೆಸಹಿತ ಹೊರಗೆದೂಡಿರಿ. ತಲೆ ಮಾತ್ರ ಕಡಿದು ಕೊಂಡು ಹೋಗಿಬಿಡುತ್ತೇನೆ. ದೇಹವನ್ನು ನೀವೇ ಇಟ್ಟುಕೊಳ್ಳಿ!" ಎಂದನು ಕರಡಿಕಟುಕ.

"ಹಾಗಾದರೆ ಸ್ವಲ್ಪ ತಾಳು" ಎಂದು ಕಳ್ಳರ ನಾಯಕನು ಹಿಂದಕ್ಕೆ ತಿರುಗಿ ದುರ್ಮುಖನನ್ನು ನೋಡಿ, "ರಾಜಾ ದುರ್ಮುಖಾ! ಇನ್ನೂ ನಾನಲ್ಲ ವೆನ್ನಬೇಡ. ಹೊರಗಿನವನು ಹೇಳಿದ ಮಾತು ನೀನೂ ಕೇಳಿದಿಯಲ್ಲವೇ? ಸಾವಂತೂ ನಿನಗೆ ತಪ್ಪುವುದಿಲ್ಲ. ರಾಜೋಚಿತವಾಗಿ ವೀರನಂತೆ ಕತ್ತಿ ಹಿರಿದು ಆ ಕರಡಿ ಮನುಷ್ಯನೊಂದಿಗೆ ಹೋರಾಡಿ ಸಾಯಬಾರದೆ ? ತೆಗೆ ಕತ್ತಿ! ನಿನ್ನಂಥ ರಾಜ ಬಲಿ ಆಡಿನಂತೆ ತಲೆ ಕಡಿಸಿಕೊಂಡರೆ, ನಿನ್ನ ಪ್ರಜೆಗಳೇ ನಕ್ಕಾರು, ನಾಚಿಕೆ ಯಲ್ಲವೆ!" ಎಂದನು.

ದುರ್ಮುಖನು ಗ್ಗೊಗ್ಗರು ಕೊರಳಿನಿಂದ, "ನಾನು ರಾಜೋಚಿತವಾಗಿ ಬದುಕಲು ಕಲಿತವನು. ರಾಜೋ ಚಿತವಾಗಿ ಸಾಯಲು ಕಲಿಯಲಿಲ್ಲವಯ್ಯಾ! ಈಗ ಛಕ್ಕನೆ ಹೇಗೆ ಕಲಿಯಲಿ?" ಎಂದು ಹೇಳಿ, ತನ್ನ ಅಂಗರಕ್ಷಕನನ್ನು ನೋಡಿ, "ಎಲೋ, ಅಂಗರಕ್ಷಕಾ! ನಿನ್ನ ಸ್ವಾಮಿಭಕ್ತಿ ಎಷ್ಟೆಂದು ತೋರಿಸಿ ಸ್ವರ್ಗಕ್ಕೆ ಹೋಗಲು ಇದೇ ನಿನಗೆ ಒಳ್ಳೆಯ ಅವಕಾಶ! ನೀನು ಮುಂದೆ ಇದ್ದು ಆ ಕಟುಕಕರಡಿಯವನನ್ನು ಇದಿರಿಸು. ಆ ಸಮಯದಲ್ಲಿ ನಾನು ತಪ್ಪಿಸಿ ಕೊಳ್ಳಲು ಎಡೆಸಿಗುವುದೋ ನೋಡುತ್ತೇನೆ. ನಿನ್ನ ಅಂಗರಕ್ಷಕನೆಂಬ ಕೀರ್ತಿ ಸೂರ್ಯಚಂದ್ರರಿರುವ ವರೆಗೂ ಉಳಿಯುವಂತೆ ಮಾಡುತ್ತೇನೆ! ಬಾ ಮುಂದೆ, ಬಾ ಬಾ" ಎಂದನು. ಆದರೆ ಅಂಗ ರಕ್ಷಕನು ಒರೆಯಿಂದ ತೆಗೆದ ಕತ್ತಿಯನ್ನು ಮತ್ತೆ



ಒರೆಯೊಳಗೆ ಸೇರಿಸಿ, "ನಾನು ಸತ್ತು ಸ್ವರ್ಗಕ್ಕೆ ಹೋಗಿಬಿಟ್ಟರೆ ನನ್ನ ಹೆಂಡತಿ ಮಕ್ಕಳ ಸುಖದುಃಖ ನನಗೆ ಹೇಗೆ ಗೊತ್ತಾಗುತ್ತದೆ? ಇನ್ನೂ ಸ್ವಲ್ಪ ಕಾಲ ಹೋದ ಮೇಲೆ ಸ್ವರ್ಗಕ್ಕೆ ಹೋದರೆ ಸಾಕು. ಪಾಪ, ಅವಳು ನಾನಿಲ್ಲದೆ ಬದುಕಲಾರೆ ಅನ್ನು ತ್ತಾಳೆ! ಅಲ್ಲದೆ ನನ್ನ ವೀರಪ್ರತಾಪ ತೋರಿಸ ಲಿಕ್ಕೂ ಸರಿಯಾದ ಜತೆ ಬೇಡವೇ? ಈ ನರ ಮೃಗದೊಂದಿಗೋ ನನ್ನ ಪರಾಕ್ರಮ?" ಎನ್ನುತ್ತಾ ಗೋಡೆಗೆ ಒರಗಿ, ಕಣ್ಣುಗಳನ್ನು ಬಿಗಿಯಾಗಿ ಮುಚ್ಚಿ ಕೊಂಡನು.

ಅಷ್ಟರೊಳಗೆ ಕರಡಿಕಟುಕನು ಭಯಂಕರವಾಗಿ ಹಲ್ಲು ಕಡಿದು, "ಎಲೋ! ಎಲ್ಲಿ ಆ ದುರ್ಮುಖ ರಾಜ? ಎಷ್ಟು ಹೊತ್ತು ನನ್ನನ್ನು ಕಾಯಿಸುವಿರಿ? ಸಾಕು ನಿಮ್ಮ ಕತೆ! ನಾನೀಗ ಗುಹೆಯೊಳಗೆ ಹೊಕ್ಕೆ ನೆಂದರೆ ಎಲ್ಲರನ್ನೂ ಕೊಯ್ದು ಹಾಕಿಬಿಡುತ್ತೇನೆ!" ಎಂದು ಗರ್ಜಿಸಿದ.



ಮುಂದೆ ಹೊರಗೆ ಧುಮುಕಿ, ವೇಗವಾಗಿ ಓಡಲು ತೊಡಗಿದನು. ಎಷ್ಟು ವೇಗವೆಂದರೆ ಕಲ್ಲು ಮುಳ್ಳು ಹಳ್ಳ ಪೊದೆ ಯಾವುದರ ಲಕ್ಷ್ಯವೂ ಅವನಿಗಿರಲಿಲ್ಲ.

ಕರಡಿಕಟುಕ ನಾಯಕ ಹಾರಿ ಕುಪ್ಪಳಿಸಿ, "ಓ! ಓ! ದುರ್ಮುಖಾ! ನಿಲ್ಲು ನಿಲ್ಲು!" ಎಂದು ಕೂಗುತ್ತಾ ಅವನ ಹಿಂದೆಯೇ ಓಡಿದನು. ದುರ್ಮುಖನು ಒಂದು ದೊಡ್ಡದಾದ ಮರದ ಮರೆಗೆ ಓಡಲು ನೋಡಿ, ಇದಿರಿನಲ್ಲಿ ಕಲ್ಲಿನ ಗದೆಯನ್ನು ಹಿಡಿದು ನಿಂತಿದ್ದ ರಾಕ್ಷಸ ಉಗ್ರದಂಡನನ್ನು ನೋಡಿ, ತಾನು ಯಮನ ಮುಂದೆಯೇ ಬಂದೆನೆಂದುಕೊಂಡು ಸಾಯುವ ಹಾಗೆ ಕೂಗಿ ಅವನ ಮುಂದೆ ಮುಗುಚಿಬಿದ್ದನು.

"ಸಿಕ್ಕಿದೆಯಾ! ಕಳ್ಳರಾಜಾ!" ಎನ್ನುತ್ತಾ, ಕರಡಿ ಕಟುಕನು ದುರ್ಮುಖನನ್ನು ಸಮೀಪಿಸುತ್ತಿರಲು, ರಾಕ್ಷಸನು ಗದೆಯನ್ನು ಕೆಳಗೆ ಜಾರಿಸಿ ಕೈಯನ್ನೆತ್ತಿ, "ಸೋದರಾ! ಕರಡಿಕಟುಕ ನಾಯಕಾ! ಒಂದು ಕ್ಷಣ ನಿಲ್ಲು. ಇನ್ನು ಇವನ ತಲೆ ಕಡಿಯುವುದೇನೂ ಕಷ್ಟ ವಿಲ್ಲ. ಆದರೆ ಆ ಕರಡಿಕೆಂಗಣ್ಣ ಮಾಂತ್ರಿಕನು ನಿನ್ನ ಹತ್ತಿರ ಬದುಕಿರುವ ದುರ್ಮುಖರಾಜನ ತಲೆ ಕಡಿದು ತಾ ಅಂದನೇ ಅಲ್ಲ, ಸತ್ತ ದುರ್ಮುಖನ ತಲೆ ಯನ್ನು ತರಲು ಹೇಳಿದನೆ?" ಎಂದು ಕೇಳಿದನು.

ಆ ಪ್ರಶ್ನೆ ಕೇಳಿ ಕರಡಿಕಟುಕನಿಗೆ ಆಶ್ಚರ್ಯ ವಾಯಿತು. ಅಚೇತನನಾಗಿ ಬಿದ್ದಿದ್ದ ದುರ್ಮುಖನ ಕಡೆಗೆ ಪರೀಕ್ಷೆಯಿಂದ ನೋಡಿ, "ಉಗ್ರದಂಡಾ, ಈ ದುರ್ಮುಖನು ಸತ್ತುಹೋದ ಹಾಗೆ ನಿನಗೆ ಕಾಣು ತ್ತದೆಯೇ? ಸ್ವಲ್ಪವೂ ಚಲನೆಯೇ ಇಲ್ಲವಲ್ಲಾ!" ಎಂದು ಕೇಳಿದನು.

"ಸಾಯಲಿಲ್ಲ. ಈ ನರಮನುಷ್ಯ ನನ್ನನ್ನು ನೋಡಿ ಹೆದರಿ ಮೂರ್ಛೆ ಹೋಗಿದ್ದಾನೆ. ಮೂರ್ಛೆ ಯಲ್ಲಿರುವವನ ತಲೆ ಕಡಿಯುವುದು ಮಹಾ ಪಾಪ ಅಂತ ಹೇಳುತ್ತಾರೆ. ನನ್ನಂಥ ರಾಕ್ಷಸರೂ ಹಾಗೆ ಮಾಡುವುದಿಲ್ಲ. ಆದುದರಿಂದ ಈಗ ಒಂದು ಕೆಲಸ

ಕಳ್ಳ ನಾಗಮಲ್ಲನು ತನ್ನ ಅನುಚರರಿಗೆ ಸನ್ನೆ ಮಾಡಿ, ಅವರನ್ನು ತನ್ನ ಬೆನ್ನಹಿಂದೆಯೇ ಇರಲು ಹೇಳಿ, ಕಲ್ಲನ್ನು ಪಕ್ಕಕ್ಕೆದೂಡಿ, ತಲೆಯನ್ನು ಹೊರಗೆ ಹಾಕಿ, "ಅಯ್ಯಾ, ನನ್ನನ್ನೂ ನನ್ನ ಇಬ್ಬರು ಸೇವ ಕರನೂ ಜೀವದೊಂದಿಗೆ ಹೋಗಲು ಬಿಡು. ನಾವು ಈ ಪ್ರಾಂತದಲ್ಲಿ ಅರಣ್ಯಮೃಗಗಳ ನಡುವೆ ದಿನಗಂಡ ಕ್ಷಣಗಂಡದಲ್ಲಿ ಬದುಕಿರುವವರು. ನಮಗೂ ನಿಮಗೂ ಯಾವ ವೈರವೂ ಇಲ್ಲ." ಎಂದನು.

"ಹೌದೌದು. ನೀವು ಕಳ್ಳರು. ಅದು ನನಗ್ಗೊತ್ತು. ಆದರೂ ನಿಮ್ಮ ಮೇಲೆ ನನ್ನದೇನೂ ಕೆಲಸವಿಲ್ಲ. ಕೋಪವೂ ಇಲ್ಲ. ನಂಬಿ, ನಿಮ್ಮ ದಾರಿ ಹಿಡಿದು ನೀವು ಹೋಗಿ. ನಾನೇನೂ ಮಾಡಲಾರೆ" ಎಂದ ಕರಡಿಕಟುಕ ನಾಯಕ.

ನಾಗಮಲ್ಲನೂ ಅವನ ಅನುಚರರೂ ಕಲ್ಲನ್ನು ಪೂರಾ ತೆಗೆದು ಹೊರಗೆ ಬಂದರು. ಆಗಲೇ ಅವರ ಎಡೆಯಲ್ಲಿ ದುರ್ಮುಖರಾಜನೂ ತೂರಿ ಅವರಿಗಿಂತ

ಮಾಡು. ಇವನನ್ನು ಆ ಮಾಂತ್ರಿಕನ ಬಳಿಗೆ ತೆಗೆದುಕೊಂಡು ಹೋಗಿ ಅಲ್ಲಿಯೇ ತಲೆಕಡಿ. ಅಲ್ಲಿಗೆ ಹೋಗುವುದರೊಳಗೆ ಇವನಿಗೆ ಎಚ್ಚರಬಾರದೆ ಹೋಗದು. ಆಗ ಓಡಲು ನೋಡಿಯಾನು. ಜಾಗ್ರತೆ!" ಎಂದನು ಉಗ್ರದಂಡ.

ಕರಡಿಕಟುಕನು ಭುಸುಗುಡುವ ಹಾಗೆ, ಒಂದು ನಿಟ್ಟುಸಿರುಬಿಟ್ಟು, "ಎಂಥ ಹಾಳು ಕೆಲಸ! ಶತ್ರುವನ್ನು ಹೆಗಲ ಮೇಲೆ ಹೊರಲು ಹೇಳುವಿಯಾ? ಛೀ ಛೀ!" ಎಂದನು.

ಉಗ್ರದಂಡನು ಗುಹೆಯಕಡೆ ಒಂದುಸಾರಿ ನೋಡಿದನು. ಅಲ್ಲಿ ನಾಗಮಲ್ಲನು ತನ್ನ ಇಬ್ಬರು ಅನುಚರರೊಂದಿಗೆ ನಿಂತುಕೊಂಡು, ಓಡಿಹೋಗುವ ಎತ್ತುಗಡೆಯಲ್ಲಿ ತನ್ನವರೊಂದಿಗೆ ಗುಸಗುಸನೆ ಏನೋ ಮಾತಾಡುತ್ತಿದ್ದನು.



ಉಗ್ರದಂಡನು ಕಲ್ಲಿನ ಗದೆಯನ್ನು ಕೈಯಲ್ಲಿ ಹಿಡಿದೆತ್ತಿ ಗಿರಿಗಿರಿ ಬೀಸುತ್ತ "ಎಲೋ ದಾರೀ ದೋಚುವ ಭಂಡು ಮಕ್ಕಳೇ! ಓಡಿಗೀಡಿ ಹೋದೀರಾ? ಜಾಗ್ರತೆ! ಕಾಲಿನಿಂದ ಒರೆಸಿಬಿಟ್ಟೇನು! ಬನ್ನಿ ಹೀಗೆ. ಆ ಅಂಗರಕ್ಷಕ ಎಲ್ಲಿದ್ದಾನೆ? ಅವನನ್ನೂ ಇತ್ತ ಕರೆಯಿರಿ" ಎಂದು ಘೋರ ಕಂಠದಿಂದ ಗದರಿಸಿ ಹೇಳಿದನು.

ಮೂವರು ಕಳ್ಳರೂ ನಡುಗುತ್ತಲಿದ್ದರು. ನಾಗಮಲ್ಲನು ಗುಹೆಯೊಳಗೆ ಬಗ್ಗಿ ತೆವಳಿ ಹೋಗಿ ನೋಡಲು, ಅಂಗರಕ್ಷಕನು ಇನ್ನೂ ಹಾಗೇ ಒರಗಿ ಕುಳಿತಿರುವುದು ಕಂಡಿತು. "
ರಕ್ಷಕನೂ ಮೂರ್ಛೆ ಹೋಗಿ
ಕೂತಲ್ಲೇ ಜೀವ ಬಿಟ್ಟಿದ್ದಾನೆ!"
ಅಲುಗಾಡಿಸುತ್ತ. ಅಂಗರಕ್ಷಕ
ಅಂಗಾತ ಬಿದ್ದನು.

"ಅದೆಲ್ಲಾ ಸುಳ್ಳು. ಕಳ್ಳ
ಉಗ್ರದಂಡನು ಅಭಯವಿತ್ತು ಕ

ಹೇಳಿರಿ," ಎಂದ ಉಗ್ರದಂಡ. ಕಳ್ಳ ನಾಗಮಲ್ಲನು ಮತ್ತೆ ಗುಹೆಯೊಳಗೆ ಹೊಕ್ಕು "ಏ ಅಂಗರಕ್ಷಕಾ! ಎದ್ದೇಳು! ಎದ್ದೇಳು! ಮಹಾರಾಕ್ಷಸ ಉಗ್ರದಂಡ ಮಹಾನುಭಾವರು ನಿನ್ನನು ಕೊಲ್ಲುವುದಿಲ್ಲ. ಅಭಯ ಕೊಟ್ಟಿದ್ದಾರೆ. ಕರೆಯುತ್ತಾರೆ." ಎಂದು ಕೂಗಿ ಹೇಳಿದನು.

ಅಂಗರಕ್ಷಕನು ತಟಕ್ಕನೆ ಎಚ್ಚೆತ್ತು ನೆಟ್ಟಗಾಗಿ, ಮೊಣಕಾಲಿನಲ್ಲಿ ತೆವಳುತ್ತ, ಗುಹೆಯಿಂದ ಹೊರಗೆ ಬರುತ್ತ, "ಮಹಾರಾಜರ ತಲೆ ಹೋಯಿತೇ?

ಅವನೊಂ... ರಾಜಧಾನಿಗೆ ಸಾಗಿಸ
ಇರಲಿಲ್ಲ. ಆದುದರಿಂದ ಅವನ...ಷ್ಟ ಕರಡಿ ಹೊರಟು
ಯಾರಿಗೂ ಧೈರ್ಯವಿಲ್ಲ. ಅವನು
ನಾಗಿರಲು ಕಾರಣವೇನೆಂದರೆ ಅವನ ಸೇನಿಲ್ಲಿಲ್ಲ. ನಾಗ
ಒಬ್ಬನು
ರಗೆ

## ಬೇತಾಳಕಥೆಗಳು?...

ಅಕೋ, ನಿನ್ನ ರಾಜ ಉಗ್ರದಂಡರ ಪಾದದ ಹತ್ತಿರ ಮೂರ್ಛೆ ಹೋಗಿಬಿದ್ದಿದ್ದಾರೆ! ನೀನು ಹೋಗಿ ಅಡ್ಡ ಬೀಳು." ಎಂದರು.

ಅಂಗರಕ್ಷಕನು ವಿಪರೀತ ನಡುಗುತ್ತ, ರಾಕ್ಷಸನ ಮುಂದೆ ಹೋಗಿ, "ಅಯ್ಯಾ! ಧರ್ಮರಾಕ್ಷಸ ಮಹಾನುಭಾವರೇ! ಈ ಕ್ಷಣದಿಂದ ನಾನು ತಮಗೆ ಅಂಗರಕ್ಷಕ. ಆ ಭಯಂಕರ ಕರಡಿ ಮನುಷ್ಯನಿಂದ ನನ್ನನ್ನು ಕಾಪಾಡಿ!" ಎಂದನು.

ಉಗ್ರದಂಡನು ಗಟ್ಟಿಯಾಗಿ ನಕ್ಕು, "ಹಾಗಾದರೆ ನನ್ನ ರಕ್ಷಣೆಗೆ ಇವನೊಬ್ಬ ಅಂಗರಕ್ಷಕ ಸಿಕ್ಕಿದ! ಎಂಥ ಮಹಾರಾಕ್ಷಸನಿಗೆ ಎಂಥ ದುರ್ದಶೆ ಬಂದಿತು!" ಎಂದು ಹೇಳಿ, "ಎಲೋ, ಅಂಗರಕ್ಷಕಾ! ಅಗೋ ಅಲ್ಲಿ ಕಾಣುವ ನನ್ನ ಗುಹೆಯೊಳಗೆ ಹೋಗಿ ಬೇಗ ನೀರು ತೆಗೆದುಕೊಂಡು ಬಾ, ಈ ರಾಜನು ಏಳುವ ದಾರಿ ಏನಾದರಿದೆಯೋ ನೋಡಬೇಕು! ಎಷ್ಟಾದರೂ ರಾಜ ಪಾಪ!" ಎಂದನು.

"ಓಹೋ! ಈ ನಮ್ಮ ರಾಜ ಮೂರ್ಛೆಯಿಂದ ಎದ್ದರೆ ಹೊರತು, ಈ ಕರಡಿ ಮಹಾನುಭಾವರು ತಲೆ ಕಡಿಯಲಾರರೋ? ಇನ್ನೂ ಸುಮ್ಮನೆ ನೋಡುತ್ತ ಇಲ್ಲಿಯೇ ಇದ್ದಾರೋ? ನನ್ನದೇನಾದರೂ ತಪ್ಪಿದ್ದರೆ ಕ್ಷಮಿಸೀ!" ಎಂದು ಅಂಗರಕ್ಷಕ ಆಶ್ಚರ್ಯ ಭಯದಿಂದ ಕೈ ಮುಗಿದನು.

ಕರಡಿಕಟುಕನು ಅವನ ಮೇಲೆ ಚಪಗೊಡಲಿಯೆತ್ತಿ "ಏನಂದೆ? ಮೂರ್ಖಾ! ಉಗ್ರದಂಡ ರಾಕ್ಷಸ ಹೇಳಿದ್ದೇನು? ಓಡು! ಅವರು ಹೇಳಿದ ಕೆಲಸ ಮಾಡು!" ಎಂದನು.

ಆ ಕೂಡಲೇ ಅಂಗರಕ್ಷಕನು ರಾಕ್ಷಸನ ಗುಹೆಗೆ ಓಡಿಹೋಗಿ, ಅಲ್ಲಿದ್ದ ಒಂದು ಕಲ್ಲಿನ ಪಾತ್ರವನ್ನೆತ್ತಿಕೊಂಡು ಮಡುವಿನಿಂದ ನೀರು ತುಂಬಿಸಿಕೊಂಡು ಬಂದನು. ಬರುವಾಗ ಆ ಬದಿಯಲ್ಲಿ ನಿಂತಿದ್ದ ಸೊಂಡಿಲು ತುಂಡಾದ ಆನೆ ಅವನನ್ನು ನೋಡಿ ದೊಡ್ಡ ಧ್ವನಿಯಿಂದ ಘೀಂಕರಿಸಿ, ಅವನನ್ನು ಓಡಿಸಿಕೊಂಡು ಬರತೊಡಗಿತು.

ಅಂಗರಕ್ಷಕನು ನೀರಿನ ಪಾತ್ರವನ್ನು ಜಾರಬಿಟ್ಟು ಸಾಯುವಹಾಗೆ ಕೂಗುತ್ತ ಉಗ್ರದಂಡನೇ ಮೊದಲಾದವರ ಬಳಿಗೆ ಓಡೋಡಿಬಂದು, "ಅಯ್ಯಾ! ಕರಡಿ ಮಹಾನುಭಾವರ ಮೊಂಡು ಸೊಂಡಿಲಿನ ಆನೆ ನನ್ನನ್ನು ಓಡಿಸಿಕೊಂಡು ಬರುತ್ತಿದೆ. ರಕ್ಷಿಸಿ!" ಎಂದು ಕೂಗಿದನು.

"ಆಹಾ ನನ್ನ ವಾಹನ ಇಲ್ಲೇ ಇದೆ ಎಂದಾಯಿತು!" ಎಂದು ಕರಡಿಕಟುಕ ನಾಯಕನು ಸಂತೋಷದಿಂದ ಹಾರಿ ನಿಂತು ಆ ಕಡೆಗೆ ನೋಡುವಾಗ, ಆನೆ ಸೊಂಡಿಲೆತ್ತಿ, ಕೂಗುತ್ತ, ದೊಡ್ಡ ಭೂತದಂತೆ ಅವರ ಕಡೆಗೇ ಬರತೊಡಗಿತು.





# ಕರಡಿಕೆಂಗಣ್ಣ

೮

[ದುರ್ಮುಖರಾಜನು ತನ್ನ ಬೆಂಬತ್ತುವ ಕಟುಕ ಕರಡಿ ಮನುಷ್ಯನಿಗೆ ಸಿಕ್ಕದೆ ಓಡುತ್ತ, ಉಗ್ರದಂಡ ರಾಕ್ಷಸನನ್ನು ಕಂಡು ಮಹಾಭೀತಿಯಿಂದ ಮೂರ್ಛೆಹೋದನು. ಉಗ್ರದಂಡನು ಅವನನ್ನು ಮೂರ್ಛೆಯಿಂದ ಎಬ್ಬಿಸಲು ನೀರುತರಲು ಅಂಗರಕ್ಷಕನನ್ನು ಕಳುಹಿಸಿದನು. ಅವನು ನೀರು ತರುವಾಗ ಮೊಂಡು ಸೊಂಡಿಲಿನ ಆನೆ ಅವನನ್ನು ನೋಡಿ ಘೀಂಕರಿಸುತ್ತ ಓಡಿಸಿಕೊಂಡು ಬಂದಿತು. ಅಂಗರಕ್ಷಕನು ಕಿರಿಚುತ್ತಾ ಓಡಿಬಂದನು.]

ಉಗ್ರದಂಡರಾಕ್ಷಸನು ಆಶ್ಚರ್ಯದಿಂದ, ಇತ್ತಲೇ ಬರುವ ಆನೆಯನ್ನು ನೋಡಿ, "ಇದೆಂಥ ಆನೆ? ಹೀಗಿದೆಯಲ್ಲಾ? ಆದೇಕೆ ಈ ಹುಲುಮನುಷ್ಯನನ್ನು ಓಡಿಸಿಕೊಂಡು ಬರುತ್ತೆ?" ಎಂದುಕೊಂಡು ಕಟುಕ ಕರಡಿಯುವನನ್ನು ನೋಡಿ, "ಈ ಸೊಂಡಿಲು ಮುರಿದ ಆನೆ ನಿನ್ನ ವಾಹನವೇ? ಇದನ್ನು ಕೂಡಾ ಕರಡಿಕೆಂಗಣ್ಣ ಮಾಂತ್ರಿಕರೇ ಸೃಷ್ಟಿಸಿದರೋ? ನೋಡಿದರೆ ಬರೀ ಕಾಡಾನೆಯ ಹಾಗೇ ಇದೆ! ಹೆದರುವಷ್ಟು ವಿಶೇಷವೇನಿಲ್ಲವಲ್ಲಾ!" ಎಂದನು.

"ಹೌದು. ಕಾಡಾನೆಯೇ. ಮಹಾಮಾಂತ್ರಿಕರು ಸೃಷ್ಟಿಸಿದ್ದೇನಲ್ಲ. ಇದು ಕಾಡಿನಲ್ಲಿ ನನ್ನ ದಾರಿಗೆ ಅಡ್ಡ ಬಂದುದರಿಂದ ನನ್ನ ಚಪಗೊಡಲಿಯಿಂದ ಅದರ ಸೊಂಡಿಲಿನ ಮೇಲೆ ಹೊಡೆದು ಖಂಡಿಸಿ, ಮೇಲೇರಿ ಕುಳಿತು ಕಿವಿತಿರುಗಿಸಿದ ಮೇಲೆ ನನಗೆ ವಶವಾಯಿತು. ಅದರ ಮೇಲೇರಿಕೊಂಡೇ ಇಲ್ಲಿಯವರೆಗೂ ಬಂದೆ" ಎಂದನು ಕಟುಕಕರಡಿಮನುಷ್ಯ.

ಇಷ್ಟು ಮಾತಾಡುವಷ್ಟರಲ್ಲಿ ಆನೆ ಅವರ ಸಮೀಪ ಬಂದಿತು. ಅದನ್ನು ನೋಡಿ ಕಳ್ಳರನಾಯಕ ನಾಗಮಲ್ಲನೂ ಅವನ ಇಬ್ಬರು ಅನುಚರರೂ ಗುಹೆಯ ಕಡೆಗೆ ಓಡಿದರು. "ಈ ಆನೆ ಈ ದುರ್ಮುಖನನ್ನು



ಮೆಟ್ಟಿ ಹಾಕುತ್ತೇನೋ" ಎಂದು ಗೊಣಗುತ್ತ ಉಗ್ರದಂಡನು ಒಂದಡಿ ಮುಂದಿಟ್ಟು ಬಿದ್ದಿದ್ದ ದುರ್ಮುಖನಿಗೆ ಅಡ್ಡ ನಿಂತನು.

ಅಷ್ಟರೊಳಗೇ ದುರ್ಮುಖರಾಜನ ಮೂರ್ಛೆ ತಿಳಿದಿತ್ತೆಂದು ಕಾಣುತ್ತದೆ, ಅವನು ತಟ್ಟನೆದ್ದು ನಿಂತವನೇ, ಬಾಣದ ವೇಗದಲ್ಲಿ ಓಡಿ ಮರಗಳ ಗುಂಪಿನಡೆಯಲ್ಲಿ ನುಗ್ಗಿಕೊಂಡು ಹೋದನು. ಅಂಗರಕ್ಷಕನೂ ಆನೆಯನ್ನು ನೋಡಿ ಕಿರಿಚುತ್ತ ಉಗ್ರದಂಡ ರಾಕ್ಷಸನ ಹಿಂಬದಿಗೆ ಹಾರಿ ನಿಂತನು.

ಉಗ್ರದಂಡನು ಅಂಗರಕ್ಷಕನನ್ನು ನೋಡಿ ಅಸಹ್ಯದಿಂದ ತನ್ನ ಕಲ್ಲಿನ ಗದೆಯನ್ನು ಎತ್ತಿ, "ಎಲೋ ಕುನ್ನೀ, ಇದೀಗ ನೀನು ನನ್ನ ಅಂಗರಕ್ಷಕನೆಂದು ಹೇಳಿದವನಲ್ಲವೇನೋ? ಈಗ ನಾನೇ ನಿನ್ನ ಅಂಗರಕ್ಷಕನ ಹಾಗೆ ವರ್ತಿಸುವೆಯಲ್ಲಾ? ಛೀ! ಪುಕ್ಕಲು ಅಧಮಾ!" ಎಂದು ಗರ್ಜಿಸಿದನು. ಅಷ್ಟರಲ್ಲಿ ಅಲ್ಲಿಗೆ ಬಂದ ಆನೆ ರಾಕ್ಷಸನ ಆಕೃತಿಯನ್ನು ನೋಡಿ ಬದಿಗೆ ತಿರುಗಿತು. ಆಗ ಕರಡಿಕಟುಕನು ತನ್ನ ಕೊಡಲಿಯನ್ನು ತಿರುಗಿಸುತ್ತ ಆನೆಯ ಮುಂದೆ ಹೋಗಿ, "ನಿಲ್ಲು ಗಜವೀರಾ! ನನ್ನನ್ನು ಗುರುತಿಸಲಿಲ್ಲವೇನು? ಕಟುಕರನಾಯಕ ಭಲ್ಲೂಕಮನುಷ್ಯ ನಾನು! ನೀನು ನನ್ನ ವಾಹನ!" ಎಂದು ಕೂಗಿ ಹೇಳಿದನು.

ಅವನ ಮಾತು ಮುಗಿಯುವುದರೊಳಗೇ ಆನೆ ಅವನನ್ನು ಸೊಂಡಿಲಿನಿಂದ ಸುತ್ತಿಹಿಡಿದು ಎತ್ತಿ ದೂರಬೀಸಲು ನೋಡಿತು. ಅಷ್ಟರೊಳಗೆ ಉಗ್ರದಂಡರಾಕ್ಷಸನು ಮುಂದೆ ಹಾರಿ, ಆನೆಯ ಕಿವಿ ಹಿಡಿದು ಹಿಂಡುತ್ತ, ಅದರ ಪಕ್ಕೆಯ ಮೇಲೆ ಗಟ್ಟಿಯಾಗಿ ತನ್ನ ಕಲ್ಲಿನ ಗದೆಯಿಂದ ಒಂದೇಟು ಕೊಟ್ಟನು.

ಆ ಸಿಡಿಲಿನಂಥ ಪೆಟ್ಟಿಗೆ ಆನೆ ಕಟುಕ ಕರಡಿಯವನನ್ನು ಕೆಳಕ್ಕೆ ಜಾರಿಸಿ, ದಢೀಲನೆ ನೆಲದ ಮೇಲೆ ಬಿತ್ತು. ಮತ್ತೆ ಅದು ಏಳದಂತೆ ಉಗ್ರದಂಡನು ಮಿಂಚಿನ ವೇಗದಲ್ಲಿ ಅದರ ಮುಂದಿನ ಎರಡು ಕಾಲುಗಳನ್ನೂ ಸೇರಿಸಿ ಹಿಡಿದು ಮೇಲೆತ್ತುತ್ತ, "ಎಲೋ ಅಂಗರಕ್ಷಕಾ! ಓಡಿ ಹೋಗಿ ಕಾಡುಬಳ್ಳಿಗಳಿಂದ ನಾರು ತೆಗೆದುಕೊಂಡು ಬಾ. ಇದರ ಕಾಲುಗಳನ್ನು ಕಟ್ಟಿಹಾಕಬೇಕು!" ಎಂದನು.

ರಾಕ್ಷಸನು ತೋರಿಸಿದ ಅವನ ಗುಹೆ ಇರುವ ಗುಡ್ಡದ ಬಳಿಗೆ ಅಂಗರಕ್ಷಕನು ಮರಗಿಡಗಳ ಗುಂಪಿನೊಳಗೆ ತೂರಿಕೊಂಡು ಓಡಿದನು. ಇದನ್ನೆಲ್ಲ ನೋಡಿ ಕಟುಕಕರಡಿಯವನು ಮರಗಟ್ಟಿದಂತೆ ನಿಂತು, ಕಣ್ಣುಗಳನ್ನು ಮುಚ್ಚುತ್ತ ತೆರೆಯುತ್ತ, ಎಡಗೈಯಿಂದ ತಲೆಯನ್ನು ಗಟ್ಟಿಯಾಗಿ ತಡವುತ್ತ, "ಅಯ್ಯಾ, ಉಗ್ರದಂಡ ಮಹಾಪ್ರಭೂ, ನನ್ನ ಮಂತ್ರಕೊಡಲಿಯ ಶಕ್ತಿಗಿಂತಲೂ ನಿನ್ನ ಶರೀರ ಶಕ್ತಿ ನೂರುಪಾಲು ಹೆಚ್ಚು. ನನ್ನನ್ನು ಪ್ರಾಣಾಪಾಯದಿಂದ ಕಾಪಾಡಿದೆ. ನಿನಗೆ ತುಂಬಾ ಮೆಚ್ಚಿದೆನು. ನಿನಗೇನು ಬೇಕೋ ಕೇಳು.

ಕೊಟ್ಟುಬಿಡುತ್ತೇನೆ. ಕೇಳಯ್ಯ" ಎಂದನು. ಉಗ್ರದಂಡ ರಾಕ್ಷಸನು ಕಟುಕಕರಡಿಯುವನನ್ನು ನೋಡಿ ತುಟಿಗಳಲ್ಲಿ ಮುಗುಳುನಗು ತೇಲಿಸುತ್ತ, "ನಾನು ಕೇಳುವಂತಹುದೇನಾದರೂ ಇದ್ದರೆ, ಅದು ನಿನ್ನ ಹತ್ತಿರ ಏನಿದೆ ಮಣ್ಣು? ನಿನ್ನ ಗುರು ಕರಡಿಕೆಂಗಣ್ಣ ಮಾಂತ್ರಿಕನೇನಾದರೂ ಕೊಟ್ಟರೆ ಕೊಡಬೇಕು. ಪ್ರಸ್ತುತ ಈ ಕೆರಳಿದ ಆನೆ ಎದ್ದು ಮತ್ತೇನಾದರೂ ಅನಾಹುತಮಾಡದ ಹಾಗೆ, ನನ್ನ ಜತೆಯಲ್ಲಿ ಇದರ ಕಾಲು ಸ್ವಲ್ಪ ಬಿಗಿಯಾಗಿ ಹಿಡಿದುಕೋ, ಸಾಕು" ಎಂದನು.

ಕರಡಿಕಟುಕನು ಉಗ್ರದಂಡರಾಕ್ಷಸನನ್ನು ಚುರ ಚುರನೆ ನೋಡುತ್ತ, "ಈ ನನ್ನ ಗುಲಾಮ ಪ್ರಾಣಿಯ ಕಾಲನ್ನು ನಾನು ಹಿಡಿಯುವುದೇ? ಇದಕ್ಕಿಂತ ಹೆಚ್ಚಿನ ಅವಮಾನ ಇದೆಯೆ? ನೋಡೀಗ, ಈ ಕ್ಷಣದಲ್ಲಿ ಈ ಮಂತ್ರದ ಚಪಗೊಡಲಿಯಿಂದ ಇದರ ತಲೆಯನ್ನು ನೂರು ಹೋಳು ಮಾಡುತ್ತೇನೆ!" ಎಂದು ಕೊಡಲಿಯನ್ನು ಎತ್ತಿದನು.

"ಎಲೋ ಮಹಾನರಮನುಷ್ಯನೇ! ಸ್ವಲ್ಪ ತಾಳು. ಇಷ್ಟುಕಾಲ ಕಟುಕಕಾರ್ಯ ಮಾಡಿಕೊಂಡಿದ್ದವನಲ್ಲವೇ ನೀನು? ಇಷ್ಟೆಲ್ಲಾ ಮಾತುಗಳನ್ನು ಕೊಚ್ಚಲು ಹೇಗೆ ಕಲಿತೆಯಪ್ಪಾ? ಈ ಹೆಣದಂಥ ಆನೆಯನ್ನು ಮಹಾಪ್ರತಾಪದಿಂದ ಕೊಂದುಬಿಟ್ಟೆಯಾದರೆ ಆಮೇಲೆ ನೀನು ಬಂದ ಕೆಲಸ ಸಾಧಿಸಿಕೊಂಡು ನಿನ್ನ ಯಜಮಾನನ ಬಳಿಗೆ ಹೇಗೆ ಹೋಗಬಲ್ಲೆ? ನಾನು ಹೇಳಿದ್ದೇನು, ನೀನು ಮಾಡಿದ್ದೇನು ಅಂತ ಆತ ಕೇಳಿದರೆ ಏನು ಹೇಳುವೆ?" ಎಂದು ಕೇಳಿದ ಉಗ್ರದಂಡ.

ಹೀಗೆ ರಾಕ್ಷಸನು ನೆನಪು ಮಾಡಿದ ಕೂಡಲೇ, ಕಟುಕಕರಡಿಯುವನು "ಹೌದೌದು! ಎಲ್ಲಿ? ಎಲ್ಲಿ ಆ ದುರ್ಮುಖರಾಜ? ಈ ನಿಮಿಷದವರೆಗೂ ಅವನಿಲ್ಲಿ ನೆಲಕಚ್ಚಿಕೊಂಡಿದ್ದನಲ್ಲ? ಅಷ್ಟರೊಳಗೆ ಎಲ್ಲಿಗೆ ಹೋದ? ಹೇಗೆ ಮಾಯವಾದ? ಏನಿದು ಆಶ್ಚರ್ಯವಾಗಿದೆಯಲ್ಲಾ!" ಎಂದು ದಿಕ್ಕುಗಳನ್ನು ನೋಡತೊಡಗಿದನು.





ಇವರ ನಡುವೆ ಆನೆ ಉಗ್ರದಂಡರಾಕ್ಷಸನ ಹಿಡಿತದಿಂದ ವಿಮೋಚನೆ ಪಡೆಯಲು ಘೀಂಕರಿಸುತ್ತ, ಉರುಡಾಡಿಕೊಂಡಿತ್ತು. ಉಗ್ರದಂಡನು ಅದರ ಕಾಲನ್ನು ಬಿಡಲಿಲ್ಲ. ಹೂಂಕಾರದಿಂದಲೇ ಆನೆಯನ್ನು ಹೆದರಿಸುತ್ತಿದ್ದನು. ಹಾಗೆಯೇ ಅಂಗರಕ್ಷಕನು ಓಡಿದ ಕಡೆಗೆ ನೋಡಿ, "ಎಷ್ಟು ಹೊತ್ತೋ ಅಂಗರಕ್ಷಕಾ ! ನಾಲ್ಕು ಕಾಡುಬಳ್ಳಿಗಳನ್ನು ಕಡಿದುಕೊಂಡು ಬರಲು ಇಷ್ಟು ಹೊತ್ತೆ ? ಇವನೊಬ್ಬ ಅಂಗರಕ್ಷಕನಂತೆ ! ಪುಕ್ಕಲು ನಡುಕದ ಭಂಡ !" ಎಂದು ಕೂಗಿದನು.

"ಇದೋ ಹಗ್ಗ ತಂದೆವು ಉಗ್ರದಂಡಯ್ಯಾ !" ಎನ್ನುತ್ತ ಕಳ್ಳನಾಗಮಲ್ಲನೂ, ಅವನ ಇಬ್ಬರು ಅನುಚರರೂ ಬಲವಾದ ಹಗ್ಗದ ಸುರುಳಿಯೊಂದಿಗೆ ಓಡೋಡಿ ಬಂದರು.

ಉಗ್ರದಂಡನು "ಭಲೇ, ನೀವು ತಂದಿರಾ ? ಹುಂ, ನಾನು ಗಟ್ಟಿಯಾಗಿ ಹಿಡಿದುಕೊಳ್ಳುತ್ತೇನೆ. ಕಟ್ಟಿರಿ ಇದರ ಕಾಲುಗಳನ್ನು" ಎಂದನು.

ನಾಗಮಲ್ಲನ ಅನುಚರರೇ ರಾಕ್ಷಸನು ಹೇಳಿದ ಕೆಲಸ ಮಾಡುತ್ತಿರಲು ರಾಕ್ಷಸನು, "ಆಹ ! ಕಳ್ಳರೆಂದರೆ ನೀವೇ ನಿಜವಾದ ಕಳ್ಳರು. ಯಾವುದಕ್ಕೆ ಎಂತಹ ವಸ್ತು ಬೇಕಾಗುತ್ತದೋ ಎಲ್ಲಾ ಮುಂದಾಗಿಯೇ ಸಿದ್ಧಮಾಡಿ ತಯಾರಾಗಿರುತ್ತೀರಿ. ಭಲೇ" ಎಂದು ಹೊಗಳಿದನು.

"ಹೌದು ಉಗ್ರದಂಡ ರಾಕ್ಷಸರೇ ! ಎಷ್ಟಾದರೂ ನಾವು ಸಾಧಾರಣ ಅರಣ್ಯಜೀವಿಗಳು. ನೀವು ಇಲ್ಲಿಂದ ಹೋಗುವ ಮೊದಲು ನಮ್ಮದೊಂದು ಆಶೆಯನ್ನು ನೆರವೇರಿಸಿ ಕೊಡಬೇಕು" ಎಂದು ನಾಗಮಲ್ಲನು ಕೈ ಮುಗಿದನು.

"ಅದಕ್ಕೇನೂ ಕಷ್ಟವಿಲ್ಲ. ಈ ಕೊಲೆಗಡುಕ ಕಟುಕನಾಯಕನಿಂದ ನಿಮ್ಮ ಮೂವರ ತಲೆಗಳನ್ನೂ ಒಂದೇಸಾರಿ ಕಡಿಸಬೇಕೆಂದು ಕೇಳುವಿರಿ, ಹೌದಾ ?" ಎಂದು ಕೇಳಿದ ಉಗ್ರದಂಡ.

ನಾಗಮಲ್ಲನ ಸರ್ವಾಂಗ ಕಂಪಿಸುತ್ತಿರಲು, ಏನೋ ಹೇಳಲು ಪ್ರಯತ್ನಿಸುವಾಗ, ಕಟುಕ ಕರಡಿಯವನು, "ಜೈ ಕಾಲಭೈರವಾ !" ಎಂದು ಭೀಕರವಾಗಿ ಕೂಗಿ, "ಎಲೋ, ದಾರಿ ದೋಚುವ ಘಾತುಕರೇ ! ಆ ದುರ್ಮುಖರಾಜ ಎಲ್ಲಿದ್ದಾನೆ ? ಎಲ್ಲಿ ಅವನನ್ನು ಅಡಗಿಸಿಟ್ಟಿರಿ ? ತತ್‌ಕ್ಷಣ ಹೇಳದೇ ಹೋದರೆ ನಿಮ್ಮ ತಲೆಗಳನ್ನು ಬೆನ್ನಿನ ಅಡಿಯವರೆಗೂ ಕೆತ್ತಿಹಾಕಿಬಿಡುತ್ತೇನೆ" ಎಂದನು ಕೊಡಲಿಯನ್ನು ಕುಣಿಸುತ್ತ.

ಕಳ್ಳರ ನಾಯಕನು ತಡವರಿಸುವ ಧ್ವನಿಯಿಂದ, "ದುಡುಕಿ ಹಾಗೆಲ್ಲಾ ಮಾಡಬೇಡಿ ! ಮೊದಲು ದುರ್ಜಯಶೆಟ್ಟಿ ತಾನೆಂದು ಸುಳ್ಳು ಹೇಳಿದ ಆ ದುರ್ಮುಖನೆಂಬ ರಾಜ ನಿಮ್ಮ ಎದುರೇ ಮೂರ್ಛೆ ಬಿದ್ದುದನ್ನು ನೋಡಿದಿರಿ. ಉಗ್ರದಂಡರೂ ನೋಡಿದ್ದಾರೆ. ನಾವು ಆ ಪಾಪಿಯನ್ನು ಮುಟ್ಟೇ ಇಲ್ಲ. ಇಲ್ಲೇ ಎಲ್ಲಿಯಾದರೂ ಅಡಗಿದ್ದಾನು." ಎಂದನು.

"ನಾನೂ ಅದನ್ನೇ ಕೇಳುತ್ತೇನೆ. ದೂರದಲ್ಲಿ ನೋಡುತ್ತಿದ್ದ ನಿಮಗೆ ಗೊತ್ತೇ ಇದೆ. ಅವನೀಗ ಎಲ್ಲಿ ಅಡಗಿದ್ದಾನೆ ಅಂತ ಕೇಳುತ್ತೇನೆ. ನಾನು ಅವನ ತಲೆಯನ್ನು ತೆಗೆದುಕೊಂಡು ಹೋಗದೇ ಹೋದರೆ, ಕರಡಿ ಕೆಂಗಣ್ಣ ಮಾಂತ್ರಿಕರು ನನ್ನ ತಲೆಯನ್ನೇ ತೆಗೆಯುತ್ತಾರೆ ಗೊತ್ತಾ ?" ಎಂದನು ಕಟುಕ ಕರಡಿಯವನು ಕಡೆಗೆ ಅಳುಮೋರೆ ಮಾಡಿಕೊಂಡು !

ಅಷ್ಟು ಹೊತ್ತಿಗೆ ನಾಗಮಲ್ಲನ ಕಡೆಯವರಿಬ್ಬರೂ ಆನೆಯ ಮುಂದಿನ ಕಾಲುಗಳನ್ನು ಸೇರಿಸಿ ಬಿಗಿಯಾಗಿ ಕಟ್ಟಿ ಮುಗಿಸಿದರು. ಅದು ಹಿಂದಿನ ಕಾಲುಗಳನ್ನು ಜಾಡಿಸುತ್ತಾ ಏಳಲು ಪ್ರಯತ್ನ ಪಡುತ್ತಿದ್ದಿತು. ಅದರ ಹೊರಳಾಟದಿಂದ ಪುಡಿಗಲ್ಲುಗಳೂ ಧೂಳುಗಳೂ ಏಳುತ್ತಿದ್ದುವು.

ಈಗ ಅಲ್ಲಿಗೆ ಅಂಗರಕ್ಷಕನು ಉದ್ದವಾದ ಕಾಡುಬಳ್ಳಿಗಳನ್ನು ಸುತ್ತಿ ಹೆಗಲಮೇಲಿಟ್ಟುಕೊಂಡು ಓಡುತ್ತಾ ಬಂದನು.

"ಬಂದೆಯಾ ಈಗ ಮದುಮಗನ ಹಾಗೆ. ಹುಂ, ಆನೆಯ ಹಿಂದಿನ ಕಾಲುಗಳನ್ನು ಜೋಡಿಸಿ ಕಟ್ಟಿರಿ." ಎಂದು ನಾಗಮಲ್ಲನ ಕಡೆಯವರಿಗೆ ಹೇಳಿ ಉಗ್ರದಂಡನು, "ಏನೋ ಅಂಗರಕ್ಷಕಾ, ತಲೆ ತಗ್ಗಿಸಿ ಏನು ನೋಡುವೆ ? ಯಾವುದೋ ರಹಸ್ಯವನ್ನು ಅಡಗಿಸಿಡಲು ನೋಡುವೆ, ಹೌದಾ ? ದುರ್ಮುಖ ರಾಜನನ್ನು ಎಲ್ಲಿಯಾದರೂ ಅಡಗಿಸಿಟ್ಟು ಬಂದೆಯೋ ಇಲ್ಲವೋ ?" ಎಂದು ಕೇಳಿದನು.

ಅಂಗರಕ್ಷಕನು ರಾಕ್ಷಸನಿಗೆ ಕೈಮುಗಿದು, "ನಾನು ಈಗ ನಿಮಗೆ ಅಂಗರಕ್ಷಕನಲ್ಲವೇ ರಾಕ್ಷಸ ಪ್ರಭುವೇ ? ಆ ರಾಜನಿಗೂ ನನಗೂ ಇನ್ನು ಯಾವ ಸಂಬಂಧವೂ ಇಲ್ಲ" ಎಂದನು.

ಕಟುಕ ಕರಡಿಯವನು ಅಂಗರಕ್ಷಕನ ಹತ್ತಿರ ಬರುತ್ತ ಹಲ್ಲು ಕಡಿಯುತ್ತ, "ಎಲೋ, ಆ ದುರ್ಮುಖನು ಎಲ್ಲಿ ಅಡಗಿದ್ದಾನೆಂಬುದು ನಿನಗೆ



ಗೊತ್ತಿದೆ. ನಿನ್ನ ಕಳ್ಳನೋಟವೇ ಅದಕ್ಕೆ ಸಾಕ್ಷಿ. ನಿಜ ಹೇಳಿ ಬದುಕುವೆಯಾ ? ತಲೆ ಹಾರಿಸಿಬಿಡಲೇ ?" ಎಂದನು ಕೊಡಲಿಯ ಹರಿತವನ್ನು ನೋಡುತ್ತಾ.

ಅಂಗರಕ್ಷಕನು "ಅಯ್ಯೋ" ಎಂದು ಕಿರಿಚಿಕೊಂಡು ಹೋಗಿ ಉಗ್ರದಂಡ ರಾಕ್ಷಸನ ಹಿಂದಿನ ಬದಿಯಲ್ಲಿ ನಿಂತು, "ರಾಕ್ಷಸಪ್ರಭೂ ! ನಿಮ್ಮ ಬಡ ಅಂಗರಕ್ಷಕನನ್ನು ಕಾಪಾಡುವ ಭಾರವು ನಿಮ್ಮದೇ, ಶರಣು ! ಶರಣು !" ಎಂದನು.

ಉಗ್ರದಂಡನು ಅವನ ಕೊರಳ ಹಿಂಬದಿಯನ್ನು ಹಿಡಿದು ಎತ್ತಿ ಈಚೆಗೆ ಎಳೆದು, "ಅವನು ಹೇಳುವ ಹಾಗೆ ನಿನಗೇನೋ ಗೊತ್ತಿರಲೇ ಬೇಕು. ಆ ದುಷ್ಟ ರಾಜ ಎಲ್ಲಿ ಅಡಗಿದ್ದಾನೆಂದು ಹೇಳದೆ ಹೋದರೆ, ನಿನ್ನ ಶರೀರದ ಮೇಲಿರುವ ತಲೆಯನ್ನು ಕಾಪಾಡಲು ನನ್ನಿಂದಾಗದು. ನೀನು ಕಾಡುಬಳ್ಳಿಗಳನ್ನು ಹರಿಯಲು ಹೋದಾಗ ಓಡಿಹೋದ ಆ ರಾಜನನ್ನು ನೋಡದೆ ಬಿಡಲಾರೆ. ಅವನೊಂದಿಗೆ ಏನೋ ಹಂಚಿಕೆ ಹೂಡಿ



ಧೈರ್ಯದಿಂದ ಇಲ್ಲಿಗೆ ಬಂದಿರುವೆ. ನಿಜ ತಾನೇ? ಏನು ನಡೆಯಿತೆಂದು ಹೇಳದೆ ಹೋದರೆ, ನಿನ್ನನ್ನು ಈ ಆನೆಯ ಸೊಂಡಿಲಿಗೆ ಒಪ್ಪಿಸಿ ಬಿಡುತ್ತೇನೆ." ಎಂದು ಅವನನ್ನು ಆನೆಯ ಕಡೆಗೆ ಎಳೆದನು.

ಅಂಗರಕ್ಷಕನು ಬೇಡ ಬೇಡವೆಂದು ಕೂಗುತ್ತ ಕೈಗಳೆರಡನ್ನೂ ಜೋಡಿಸಿ ಮೇಲೆತ್ತಿ "ಶರಣು! ಶರಣು! ರಾಕ್ಷಸ ಮಹಾಪ್ರಭೂ! ನೀವು ಹೇಳಿದ್ದು ನಿಜ. ಆ ರಾಜ ನನಗೆ ಅರ್ಧರಾಜ್ಯ ಕೊಡುವುದಾಗಿ ಭಾಷೆಕೊಟ್ಟ. ಹೇಗೋ ನಿಮ್ಮೆಲ್ಲರ ಕಣ್ಣಿಗೂ ಬೂದಿ ಹಾಕಿದ ಹಾಗೆ ಮಾಡಿ ಬಂದುಬಿಟ್ಟರೆ, ಇಬ್ಬರೂ ಕೂಡಿ ಉದಯಗಿರಿ ಪಟ್ಟಣ ಸೇರಿಬಿಡುವಾ ಎಂದ ಆ ರಾಜ. ಆಮೇಲೆ ನನ್ನನ್ನು ಅರ್ಧರಾಜ್ಯಕ್ಕೆ ಅರಸನಾಗಿ ಮಾಡುತ್ತಾನಂತೆ." ಎಂದನು.

"ಆ ಠಕ್ಕುರಾಜನ ಮಾತುಗಳನ್ನು ನೀನು ನಂಬಿದೆ, ಅಲ್ಲವೇ? ಗೊತ್ತು ನನಗೆ ನಿನ್ನದು ಮೂರ್ಖಬುದ್ಧಿ ಅಂತ" ಎಂದು ಉಗ್ರದಂಡನು ಗಟ್ಟಿಯಾಗಿ ನಕ್ಕು, "ಎಲೋ, ಅಂಗರಕ್ಷಕನೆಂಬ ಹುಲುಮಾನವ! ನೀನು ಮನುಷ್ಯನಾಗಿದ್ದು, ಇನ್ನೊಬ್ಬ ಮನುಷ್ಯನ ಮಾತನ್ನು ನಂಬುವಿಯಲ್ಲಾ! ಇದೇ ಮನುಷ್ಯರಲ್ಲಿರುವ ಒಂದು ಆಶ್ಚರ್ಯ! ನಾನು ಹೇಳುತ್ತೇನೆ, ನಿನಗೆ ಏನಾಗುತ್ತದೆ ಅಂತ. ಆ ರಾಜನೊಂದಿಗೆ ಪಟ್ಟಣಕ್ಕೆ ಹೋದ ಮೇಲೆ ನಿನಗೆ ನಡೆಯುವುದು ಅರ್ಧ ರಾಜ್ಯಕ್ಕೆ ಅಭಿಷೇಕವಲ್ಲ, ಪಟ್ಟಣದ ನಡುವೆ ಉರಿ ಬಿಸಿಲಿನಲ್ಲಿ ನಿನ್ನನ್ನು ಶೂಲಕ್ಕೇರಿಸುತ್ತಾನೆ, ಗೊತ್ತೋ?" ಎಂದನು.

"ಹೌದು. ನೀವು ಹೇಳುವ ಹಾಗೇ ಆದೀತು. ನಿಮಗೆ ಉದ್ದಂಡ ನಮಸ್ಕಾರ ಉಗ್ರದಂಡ ಮಹಾರಾಕ್ಷಸರೇ! ನಾನಿನ್ನು ನಿಮ್ಮನ್ನು ಬಿಟ್ಟು ಎಲ್ಲಿಗೂ ಹೋಗಲಾರೆ. ತಮ್ಮೊಂದಿಗೇ ಅಂಗರಕ್ಷಕನಾಗಿ ಆಯುಷ್ಯವಿರುವವರೆಗೂ ಇರುತ್ತೇನೆ." ಎಂದು ಅಂಗಲಾಚಿಕೊಂಡನು ಅಂಗರಕ್ಷಕ.

ಅದುವರೆಗೂ ನಡೆಯುವುದನ್ನು ನೋಡುತ್ತ ತಲೆಯಾಡಿಸಿಕೊಂಡಿದ್ದ ಕಟುಕ ಕರಡಿಯುವನು, "ಜೈ ಕರಡಿಕೆಂಗಣ್ಣ ಮಹಾಮಾಂತ್ರಿಕ!" ಎಂದು ಅರಣ್ಯವೇ ನಡುಗುವಂತೆ ಕೂಗಿ, "ಸಾಕು. ಇನ್ನು ನಿಮ್ಮ ಹಾಳು ಹರಟೆಯನ್ನೆಲ್ಲಾ ಕಟ್ಟಿಡಿರಿ! ನಾನು ಬಂದ ಕೆಲಸವೇನು? ಈ ಬೀದೀ ಭಾಗವತವೇನು? ಗುರು ಮಹಾಮಾಂತ್ರಿಕರನ್ನು ಅವಮಾನಿಸಿದ ಉದಯಗಿರಿಯ ರಾಜ ದುರ್ಮುಖನನ್ನು ಕೂಡಲೇ ತಂದು ನನ್ನ ಮುಂದೆ ನಿಲ್ಲಿಸುವಿರೋ ಇಲ್ಲವೋ? ಅಲ್ಲ ನಿಮ್ಮೆಲ್ಲರ ತಲೆಗಳನ್ನೂ ಹಾರಿಸಿ ಬಿಡಲೇ? ಈ ಬಳ್ಳಿಯಲ್ಲಿ ನಿಮ್ಮೆಲ್ಲರ ತಲೆಗಳನ್ನೂ ಸುರಿದು ಕೊರಳಿಗೆ ಮಾಲೆ ಮಾಡಿ ಧರಿಸಿಕೊಳ್ಳುತ್ತೇನೆ!" ಎಂದು ಅಬ್ಬರಿಸಿದನು.

ಅವನ ಪ್ರಗಲ್ಭವನ್ನು ಕೇಳಿ ಉಗ್ರದಂಡನು, "ಏಯ್ ಬಡಾಯಿ ಖೋರಮೃಗಮನುಷ್ಯಾ! ಇಷ್ಟು ಜನರ ತಲೆಗಳನ್ನೂ ಕಡಿಯುವ ಶಕ್ತಿ ನಿನ

ಗಿದೆಯೋ ಹೇಳು ಮೊದಲು." ಎಂದು ಗುಡುಗಿದನು. ಕಟುಕ ಕರಡಿಯುವನು, ಕೆಂಗಣ್ಣಿನಿಂದ ರಾಕ್ಷಸನನ್ನು ನೋಡುತ್ತ, ಚಪಗೊಡಲಿಯನ್ನು ಮೇಲೆತ್ತಿ, "ಈ ಕೊಡಲಿಯನು ಏನೆಂದುಕೊಂಡೆ? ಕರಡಿ ಕೆಂಗಣ್ಣ ಮಹಾಮಾಂತ್ರಿಕರ ವರಪ್ರಸಾದ ಪಡೆದದ್ದು! ಇದರ ವೇಗಕ್ಕೆ ಇದಿರಿಲ್ಲ. ಎಲ್ಲಿ? ನಿನ್ನ ಕಲ್ಲಿನಗದೆ ಇದರ ಏಟನ್ನು ತಾಳುವುದೋ ನೋಡು" ಎಂದು ಉಗ್ರದಂಡನೆಡೆಗೆ ಒಂದಡಿ ಮುಂದಿಟ್ಟನು.

ಉಗ್ರದಂಡ ರಾಕ್ಷಸನು ಎರಡಡಿ ಹಿಂದಿಟ್ಟ. "ನಿನಗೆ ಥಕ್ಕನೆ ಆವೇಶವೂ ದುಡುಕೂ ಬರುತ್ತದೆಂದು ಆ ಮಾಂತ್ರಿಕನಿಗೆ ಗೊತ್ತಿಲ್ಲ ಪಾಪ. ಸ್ವಲ್ಪ ತಾಳು. ನಾವಿಬ್ಬರೂ ಒಬ್ಬರನ್ನೊಬ್ಬರು ಕೊಂದುಕೊಳ್ಳುವುದರಿಂದ ಅಲ್ಪತನದ ದುಷ್ಟರಿಗೆ ಒಳ್ಳೆಯದೇ ಆಗುತ್ತದೆ ಹೊರತು ನಮಗೇನೂ ಪ್ರಯೋಜನವಿಲ್ಲ. ಈ ವಿಷಯ ಮೊದಲೇ ಹೇಳಿದ್ದೇನೆ" ಎಂದನು.

"ಅದು ಸರಿ. ಆ ದುರ್ಮುಖರಾಜನ ಸಂಗತಿ ಏನು ಅಂತ? ಅವನ ತಲೆಯಿಲ್ಲದೆ ನಾನು ಗುರುಮಾಂತ್ರಿಕರ ಹತ್ತಿರ ಹೋಗುವುದು ಹೇಗೆ? ನೀನೇ ಹೇಳು" ಎಂದನು ಕಟುಕ ಕರಡಿಯುವನು.

"ಆ ರಾಜಕುನ್ನಿ ಎಲ್ಲಿಗೆ ಹೋದಾನು? ನಾವೆಲ್ಲರೂ ಕೂಡಿ ಈ ಕಾಡಿನೊಳಗೆಲ್ಲಾ ಹುಡುಕಿಬಿಟ್ಟರಾಯಿತು. ಹೂಗಳ ತೋಟದಲ್ಲಿ ತಿರುಗಾಡಿಕೊಂಡಿದ್ದ ಆ ಜಂಬದ ರಾಜ ಈ ಭಯಂಕರಾರಣ್ಯದಲ್ಲಿ ಸುತ್ತಿಕೊಂಡೇ ಇರುತ್ತಾನೆ. ಒಬ್ಬನೇ ಹೋಗಲು ಅವನಿಂದಾಗದು." ಎಂದನು ಉಗ್ರದಂಡ.

"ಹಾಗೇ ಮಾಡುವ" ಎಂದು ಎಲ್ಲರೂ ಹುಡುಕಲು ಸಿದ್ಧರಾದರು. ಆಗ ದೂರದಿಂದ ಅವರಿಗೊಂದು ಸಾಯುವಂಥ ಕೆಟ್ಟ ಕೂಗು ಕೇಳಿಸಿತು. "ಲೋಲೋ! ಬೇಗಬಿಡು ಬಾಣ! ನಾನು ಉದಯಗಿರಿಯ ರಾಜನೋ! ಅರ್ಧ ರಾಜ್ಯ ಖಂಡಿತಾ ಕೊಡ್ತೇನೋ! ಹೊಡೀ ಬೇಗ!" ಎಂಬ ಮಾತುಗಳೂ ಕೇಳಿಸಿದುವು.

ಆ ಕಂಠಸ್ವರವು ದುರ್ಮುಖರಾಜನದೇ! ಏನೋ ಪ್ರಾಣಾಪಾಯದಲ್ಲಿ ಸಿಕ್ಕಿದ್ದಾನೆ. ಅಂಗರಕ್ಷಕನು ಆ



ಕಡೆಗೇ ಓಡುತ್ತ, "ಏನಿದೂ! ನನಗೆ ಕೊಡುತ್ತೇನೆಂದ ಅರ್ಧ ರಾಜ್ಯ ಇನ್ನಾರಿಗೋ ಕೊಡುತ್ತಾನಂತಲ್ಲಾ! ನಾನು ಬಿಡಲಾರೆ!" ಎಂದು ಕೂಗಿ ಹೇಳಿದನು.

ಅಂಗರಕ್ಷಕನು ಆ ಶಬ್ದ ಬಂದ ಕಡೆಗೆ ಹೋದಾಗ, ದುರ್ಮುಖರಾಜನು ಒಂದು ಇಳಿಜಾರಾದ ಮರವನ್ನು ಅಪ್ಪಿಕೊಂಡು ಮೇಲೆ ಮೇಲೆ ತೆವಳುತ್ತ ಏರುತ್ತಿದ್ದನು. ಅವನಿಗಿಂತ ಸ್ವಲ್ಪ ಕೆಳ ಭಾಗದಲ್ಲಿ ಚಿರತೆಯೊಂದು ಗುರುಗುಡುತ್ತ, ಕೋರೆಗಳನ್ನು ತೋರಿಸುತ್ತ ಮೇಲೆ ಮೇಲೆ ಏರುತ್ತಿದೆ. ಮರದ ಕೆಳಗೆ ಕಾಡು ಮನುಷ್ಯನೊಬ್ಬ ಬಿಲ್ಲಿಗೆ ಬಾಣಹೂಡಿ ಚಿರತೆಗೆ ಗುರಿ ನೋಡಿಕೊಂಡಿದ್ದ.

ಅಂಗರಕ್ಷಕನನ್ನು ನೋಡಿದ ಕೂಡಲೇ ದುರ್ಮುಖ ರಾಜನು, "ಬಂದೆಯೇನೋ ಅಂಗರಕ್ಷಕಾ! ಹಾಗೆ ನೋಡುವೆಯೇನೋ? ಈ ಚಿರತೇ ಬಾಯಿಗೆ ನಾನು ಸಿಕ್ಕುವುದರೊಳಗೇ ಅದನ್ನು ಕೊಲ್ಲು ಮತ್ತೆ! ಆ ಕಾಡುಮನುಷ್ಯನ ಕೈಯಿಂದ ಬಿಲ್ಲು ಬಾಣ ಎಳೆದು ಕೊಂಡು, ಬೇಗ ಬಿಡು ಬಾಣ! ಅವನು ಬಾಣ ಬಿಡುವಹಾಗೆ ಸುಮ್ಮನೆ ನಟನೆಮಾಡುತ್ತಾ ಹೊತ್ತು ಕಳೀತಿದ್ದಾನೆ! ನನ್ನ ಕೈ ಮೈ ಸೋತಿತು!" ಎಂದನು.

ಅವನ ಮಾತನ್ನು ಲಕ್ಷ್ಯಮಾಡದೆ ಅಂಗರಕ್ಷಕನು "ಈ ಚಿರತೇನ ಕೊಂದರೆ ಅರ್ಧರಾಜ್ಯ ಕೊಡುತ್ತೇನೆಂದವರು ನೀವು ತಾನೇ ಮಹಾರಾಜರೇ?" ಎಂದು ಜೋರಿನಿಂದ ಕೇಳಿದನು.

"ಹೌದೌದು. ನಾನೇ! ನಾನೇ! ಸಂಶಯ ಪಡಬೇಡವೋ! ಇದು ನನ್ನನ್ನು ಹಿಡಿಯುವುದರೊಳಗೇ ಬಾಣದಿಂದ ಹೊಡಿ. ಬೇಗ ಬೇಗ!" ಎಂದು ದುರ್ಮುಖನು ಕೂಗಿದನು.

"ನಮ್ಮಿಬ್ಬರಿಗೂ ಅರ್ಧರ್ಧ ರಾಜ್ಯ ಕೊಟ್ಟುಬಿಟ್ಟರೆ ನಿಮಗೇನು ಉಳಿಯುತ್ತದೆ ಮಹಾರಾಜರೇ?" ಎಂದು ಪುನಃ ಕೇಳಿದನು ಅಂಗರಕ್ಷಕ.

"ನನ್ನ ಪ್ರಾಣವೋ ಮೂರ್ಖ, ನನ್ನ ಪ್ರಾಣ!" ಎಂದು ರಾಜನು ಗಟ್ಟಿಯಾಗಿ ಕೂಗಿದನು.

ಕಾಡುಮನುಷ್ಯನು ದುರ್ಮುಖನನ್ನೂ, ಅಂಗರಕ್ಷಕನನ್ನೂ ವಿಚಿತ್ರವಾಗಿ ನೋಡಿ "ನನಗೆ ರಾಜ್ಯವೂ ಬೇಡ. ಮಣ್ಣೂ ಬೇಡ. ಐದು ವರಹಾ ಕೊಟ್ಟರೇ ಸಾಕು." ಎಂದು ಹೇಳುತ್ತ ಮರದ ಮೇಲಿದ್ದ ಚಿರತೆಗೆ ಗುರಿ ಹಿಡಿದು ಬಾಣ ಬಿಟ್ಟ.

ತೀಕ್ಷ್ಣಬಾಣವು ಪಕ್ಕೆಯನ್ನು ನಾಟಿದ ಕೂಡಲೇ ಚಿರತೆ ಒಂದು ಹಾರು ನೆಗೆದು ಸಮೀಪವೇ ಇದ್ದ ರಾಜನನ್ನು ಪಂಜಾದಿಂದ ಹೊಡೆದು ಕೆಳಗೆ ಬಿತ್ತು. ಅದರೊಂದಿಗೇ ದುರ್ಮುಖರಾಜನೂ ಕೂಗಿ ಬಿದ್ದನು. ಚಿರತೆಯ ಕೆಟ್ಟ ಗರ್ಜನೆಯೂ, ರಾಜನ ಸಾವುಕೂಗೂ ಒಟ್ಟು ಬೆರೆತು ಕರ್ಣಕಷಾಯವಾದುವು.





# ಕರಡಿಕೆಂಗಣ್ಣ

ಕರಡಿ ಕೆಂಗಣ್ಣ April 1979

[ಅಂಗರಕ್ಷಕನು ಆನೆಯಿಂದ ತಪ್ಪಿಸಿಕೊಂಡು ಓಡುತ್ತಾ ಉಗ್ರದಂಡ ರಾಕ್ಷಸನ ಬಳಿಗೆ ಬಂದ ಸಮಯದಲ್ಲಿ, ದುರ್ಮುಖರಾಜನು ಮೂರ್ಛೆಯಿಂದೆದ್ದು, ಅರಣ್ಯದೊಳಗೆ ಓಡಿಹೋದನು. ಅಲ್ಲಿ ಅವನ ಮೇಲೆ ಒಂದು ಚಿರತೆ ಹಾರಲು ಹೊಂಚು ಹಾಕಿಕೊಂಡಿರುವಾಗ ಆಟವಿಕನೊಬ್ಬ ಚಿರತೆಯನ್ನು ಬಾಣದಿಂದ ಹೊಡೆದನು. ಆ ಪೆಟ್ಟಿಗೆ ಚಿರತೆಯೊಂದಿಗೆ ದುರ್ಮುಖರಾಜನೂ ಕೆಳಗೆಬಿದ್ದನು.]

ದುರ್ಮುಖ ರಾಜನೂ ಚಿರತೆಯೂ ಒಟ್ಟಿಗೇ ಕೆಳಗೆ ಬಿದ್ದುದನ್ನು ನೋಡಿದವರಿಗೆ ರಾಜನ ಇತಿಶ್ರೀಯಾಯಿತೆಂದೇ ತೋರಿತು. ಚಿರತೆಯ ಕಿಬ್ಬದಿಗೆ ಬಾಣವು ನಾಟಿತ್ತು.

ಅದು ರೋಷದಿಂದ ಹಾರಿ ತುಳ್ಳುತ್ತಿರಲು, ದುರ್ಮುಖರಾಜನು ಪುಣ್ಯವಶಾತ್ ಒಂದು ಪೊದರಿನ ಮೇಲೆ ಬಿದ್ದು ಅಲ್ಲಿಂದ ನೆಲಕ್ಕೆ ಜಾರಿಬಿಟ್ಟುದರಿಂದ ಬಲವಾದ ಗಾಯಗಳೇನೂ ಆಗದೆ ಆ ಗಂಡದಿಂದ ಸದ್ಯಕ್ಕೆ ಪಾರಾಗಿದ್ದನು. ಚಿರತೆ ಇನ್ನೂ ಎಗರಾಡುವುದನ್ನು ನೋಡಿ ಅಂಗರಕ್ಷಕನು, ಕೈಕಾಲು ಹಾರಿಸುತ್ತ ಆಟವಿಕನನ್ನು ನೋಡಿ. "ಎಲೋ, ಹಾಗೇನು ನೋಡುವಿ? ಇನ್ನೊಂದು ಬಾಣ ಹೊಡೆದು ಆ ಚಿರತೇನ ಕೊಲ್ಲೋ! ಅರ್ಥಕೊಂದು ಸುಮ್ಮನೆ ನೋಡುವಿಯಲ್ಲಾ!" ಎಂದು ಕೂಗಿದನು.

ಪುನಃ ಅಂಗರಕ್ಷಕನು ರಾಜನನ್ನು ನೋಡಿ ಕುಣಿಯುತ್ತ, "ಮಹಾರಾಜರೇ! ಇದೆಂಥಾ ಚಿರತೆಯೋ! ಅಂಥಾ ಬಾಣ ಮೊಳದಷ್ಟು ಚುಚ್ಚಿಕೊಂಡರೂ ಇನ್ನೂ ನಿಮ್ಮ ಮೇಲೆ ಹಾರಲಿಕ್ಕೆ ನೋಡುತ್ತದಲ್ಲಾ? ಈಗ ಏನು ಮಾಡುವುದಪ್ಪಾ!



ಹೇಗಾದರೂ ಆಚೆಗೆ ಓಡಿಬಿಡಿ ಮಹಾರಾಜರೆ!" ಎಂದು ಕಿರಿಚಿದನು.

ದುರ್ಮುಖರಾಜನು ಚಿರತೆಯ ಅಳವಿನಿಂದ ದೂರ ಹೋಗುತ್ತ, ಅಂಗರಕ್ಷಕನನ್ನು ನೋಡಿ ಕೋಪದಿಂದ, "ಎಲೋ! ಕೈಲಾಗದ ಭಂಡಾ! ನಿನಗೇನಾದರೂ ಬುದ್ಧಿಗಿದ್ಧಿ ಇದೆಯೋ? ಸೊಂಟದ ಕತ್ತಿ ತೆಗೆದು ಅದರ ತಲೆ ಕಡಿಯೋ! ಪಿಳಿಪಿಳಿ ನೋಡುವ ಈ ಆಟವಿಕನಾವನು? ನಮ್ಮ ರಾಜ್ಯದವನೇನಾ? ಅವನಿಗೂ ಬುದ್ಧಿ ಇಲ್ಲ! ಬೇಗ ಅದರ ಕೆಲಸ ಮುಗಿಸುವುದು ಬಿಟ್ಟು ನೋಡುತ್ತಿದ್ದಾನೆ ಆಟ!" ಎಂದನು.

ಚಿರತೆ ದುರ್ಮುಖನ ಹತ್ತಿರವಾಗಿಯೇ ನೆಗೆದಾಡುತ್ತಿತ್ತು. ಅದು ಅಡಿಗಡಿಗೂ ಕೋರೆ ಹಲ್ಲುಗಳನ್ನು ತೋರಿಸಿ ಅವನ ಕಡೆಗೇ ಕುಪ್ಪಳಿಸುತಿತ್ತು. ಆಗಿನಿಂದಲೂ ನಡೆಯುವುದನ್ನು ಮೌನವಾಗಿ ನೋಡಿಕೊಂಡಿದ್ದ ಆಟವಿಕನು ಏನನ್ನೋ ತಿಳಿದುಕೊಂಡವನಂತೆ, ತಲೆಯಾಡಿಸಿ ಸಣ್ಣ ನಗೆ ನಕ್ಕು, "ನನಗೆ ಹೆಚ್ಚಿಗೆ ಏನೂ ಗೊತ್ತಿಲ್ಲದಿದ್ದರೂ ವರಹಗಳೆಂದರೆ ಏನೆಂದು ತಿಳಿಯದವನಲ್ಲ. ನನಗೆ ಐದು ವರಹ ಕೊಡುವೆನೆಂದೆಯಲ್ಲಾ? ಅದರ ಸಂಗತಿ ತಿಳಿಯಬೇಕು" ಎಂದು ಬಿಲ್ಲಿಗೆ ಬಾಣ ಹೂಡಿ, ಅಂಗರಕ್ಷಕನ ಮೇಲೆ ಗುರಿ ಹಿಡಿದು, "ನೀನೇನೋ ಅವನನ್ನು ಮಹಾರಾಜಾ ಅನ್ನುತ್ತೀ. ಅದು ನಿಜವೇನಾ ಅಲ್ಲ ಸುಳ್ಳಾ? ಅವನು ನಿಜಕ್ಕೂ ಮಹಾರಾಜನೇನಾ?" ಎಂದು ಕೇಳಿದನು.

"ಹೌದೋ! ನಾನೇ ಮಹಾರಾಜ! ನೀನು ಕೇಳಿದ್ದು ಕೊಡುತ್ತೇನೆ. ಕೊಲ್ಲು, ಕೊಲ್ಲು ಚಿರತೇನ" ಎಂದು ಕೂಗಿದ ದುರ್ಮುಖರಾಜ.

ಚಿರತೆಯನ್ನೇ ಗಮನಿಸುತ್ತಿದ್ದ ಅಂಗರಕ್ಷಕನು, ರಾಜನಿಗೆ ಹಿಂದೆ ಓಡಲಾಗದಂತೆ ಮುಳ್ಳಪೊದರುಗಳಿರುವುದನ್ನೂ, ಚಿರತೆ ರಾಜನ ಮೇಲೆ ಹಾರಲಿರುವುದನ್ನೂ ನೋಡಿ, ತನ್ನ ಕತ್ತಿಯನ್ನು ಹಿರಿದು, "ಮಹಾರಾಜರೆ, ನೀವೂ ನಿಮ್ಮ ಒರೆಯಿಂದ ಕತ್ತಿ ತೆಗೆದುಕೊಳ್ಳಿ. ಗಾಯಗೊಂಡ ಚಿರತೆಯನ್ನು ನಾವಿಬ್ಬರೂ ಹೊಡೆದು ಕೊಂದುಬಿಡಬಹುದು. ಅವನೇನೋ ವಿನಾ ಮೇಷ ನೋಡುತ್ತಿದ್ದಾನೆ" ಎನ್ನುತ್ತ ಒಂದಡಿ ಮುಂದಿಟ್ಟನು.

ಆಗ ಆಟವಿಕನು ಅಂಗರಕ್ಷಕನ ಮುಂದೆ ನೆಲದಲ್ಲಿ ಚುಚ್ಚಿಕೊಳ್ಳುವ ಹಾಗೆ ಒಂದು ಬಾಣವನ್ನು ಹೊಡೆದು, ಇನ್ನೊಂದು ಬಾಣವನ್ನು ತೆಗೆದು ಬಿಲ್ಲಿಗೆ ಹೂಡಿ, "ನಾನು ಹೇಳಿದ ಮಾತಿಗೆ ಉತ್ತರ ಕೊಡುವೆಯಾ, ನನ್ನ ಬಾಣದಿಂದ ನಿನ್ನ ಪ್ರಾಣ ತೆಗೆಯಲೇ? ಚಿರತೆಯಂತೂ ಸಾಯುವ ಮೊದಲು ನಿನ್ನ ರಾಜನ ಕುತ್ತಿಗೆ ಕಡಿದು ಯಾವ ನದಿಬದಿಗಾದರೂ ಹೋಗಿ ಗಾಯದ ನೋವಿನಿಂದ ಪ್ರಾಣ ಬಿಡುವುದಂತೂ ಖಂಡಿತ" ಎಂದನು. ದುರ್ಮುಖರಾಜನು ತನ್ನ ಕತ್ತಿಯನ್ನು ಸೆಳೆದು ಚಿರತೆಯನ್ನು

ಕೊಲ್ಲಲು ಎರಡಡಿ ಮುಂದೆ ಇಟ್ಟು, ಹೆದರಿ, ಎರಡಡಿ ಹಿಂದಿಟ್ಟು, "ಎಲೋ, ಆಟವಿಕಾ, ನಾನು ಉದಯಗಿರಿ ರಾಜನಾದ ದುರ್ಮುಖನು. ವಿಧಿಯ ಆಟದಿಂದ ಹೀಗೆ ಕಾಡಿನಲ್ಲಿ ಸಿಕ್ಕಿಕೊಳ್ಳ ಬೇಕಾಯಿತು. ನೀನು ಬಿಟ್ಟ ಬಾಣ ಇದರ ಮರ್ಮಕ್ಕೆ ತಾಗಿಲ್ಲ. ಇನ್ನೊಂದು ಬಾಣದಿಂದ ಇದನ್ನು ಕೊಂದುಬಿಡು. ಇಲ್ಲದಿದ್ದರೆ ನನ್ನನ್ನು ಕೊಂದೇ ಅದು ಸಾಯುವ ಹಾಗಿದೆ. ಹುಂ, ಬೇಗ" ಎಂದನು.

"ಮೊದಲೇ ಹೇಳಬಹುದಿತ್ತಲ್ಲ, ಇದು ಯಾವಾಗೋ ಸಾಯುತ್ತಿತ್ತು. ರಾಜರಾಗಿ ಸೈನ್ಯ ಗೈನ್ಯ ಏನೂ ಇಲ್ಲದೆ ಹೀಗೆ ಕಾಡಿನಲ್ಲಿ ಬರುವುದುಂಟೇ ಮಹಾರಾಜರೇ?" ಎಂದು ಆಟವಿಕನು ಬಾಣದ ಗುರಿಯನ್ನು ಅಂಗರಕ್ಷಕನಿಂದ ಬಾದಲಾಯಿಸಿ ಚಿರತೆಯ ಕಡೆಗೆ ತಿರುಗಿಸಿದನು.

ಅದೇ ವೇಳೆಯಲ್ಲಿ ಚಿರತೆ ಗರ್ಜಿಸಿ ಕೊನೆಯ ರಭಸದಿಂದ ರಾಜನ ಮೇಲೆಯೇ ಲಂಘಿಸಿತು. ಆದುದರಿಂದ ಆಟವಿಕನು ಬಿಟ್ಟ ಬಾಣವು ಗುರಿ ತಪ್ಪಿ ಮುಂದಿದ್ದ ಮರದ ಕಾಂಡಕ್ಕೆ ಚುಚ್ಚಿಕೊಂಡಿತು.

ದುರ್ಮುಖರಾಜನು ಚಿರತೆಯ ನೇರ್‌ನೆಗೆತವನ್ನು ತಪ್ಪಿಸಿಕೊಳ್ಳಲು ಅಡ್ಡವಾಗಿ ಹಾರಿ ಪೊದರಿನಾಚೆಗೆ ಬಿದ್ದು, ಆ ಕ್ಷಣದಲ್ಲೇ ಚೆಂಡಿನಂತೆ ಬಿದ್ದಲ್ಲಿಂದೆದ್ದು ಕಾಲುಗಳು ಬೆನ್ನಿಗೆ ತಾಗುವಷ್ಟು ವೇಗದಲ್ಲಿ ಓಡಿದನು. ಚಿರತೆಯೂ ಅಷ್ಟಕ್ಕೆ ಬಿಡಲಿಲ್ಲ, ಅವನನ್ನು ಓಡಿಸಿ ಕೊಂಡು ಓಡಿತು.

ಹಾಗೆ ಅವರು ಮರಗಳ ಗುಂಪಿನಲ್ಲಿ ಅಡ್ಡಾದಿಡ್ಡಿ ಯಾಗಿ ಸ್ವಲ್ಪ ದೂರ ಓಡುತ್ತಿರಲು, ಆ ಕಡೆಗೇ ಬರುತ್ತಿದ್ದ ಉಗ್ರದಂಡ ರಾಕ್ಷಸನು ಥಕ್ಕನೆ ಒಂದು ಕೈಯಲ್ಲಿ ರಾಜನನ್ನು ಹಿಡಿದು ನಿಲ್ಲಿಸಿ, "ಈ ಸಣ್ಣ ಚಿರತೆಯನ್ನು ನೋಡಿ ಪುಕ್ಕಲು ಹಿಡಿದು ಓಡುವು ದೆಂದರೇನಿದು? ಎಂಥ ನರಸತ್ತ ನರರಾಜ ನೀನು? ಥೂ!" ಎಂದನು.



ದುರ್ಮುಖರಾಜನು ಬಿರುಗಾಳಿಗೆ ಸಿಕ್ಕಿದ ಒಣ ತರಗೆಲೆಯಂತೆ ನಡುಗುತ್ತ, ಏನೋ ಹೇಳಲು ಬಾಯಿ ತೆರೆದನೇ ಹೊರತು ಶಬ್ದವೇ ಹೊರಡಲಿಲ್ಲ. ಅಷ್ಟರಲ್ಲಿ ಚಿರತೆಯೂ ಅಲ್ಲಿಗೇ ಬಂದಿತು. ಆ ಚಿರತೆ ಯನ್ನು ಉಗ್ರದಂಡನು ಕಾಲಿನಿಂದೊದ್ದು ಮೇಲೆ ಹಾರಿಸಿ, ಕೆಳಗೆ ಬೀಳುವಾಗ ಅದರ ಕುತ್ತಿಗೆಯನ್ನು ಹಿಡಿದುಕೊಂಡು, "ಎಲೋ ಮಾನವ ರಾಜಾ! ದೇಶವನ್ನೇ ಪಾಲಿಸುವ ನಿನಗಿಂತಲೂ, ಕಾಡಿನ ಈ ಕ್ಷುದ್ರ ಪ್ರಾಣಿಯೇ ತುಂಬಾ ಧೈರ್ಯಶಾಲಿ ಯಾಗಿದೆ; ನೋಡಿದೆಯಾ? ಚುಚ್ಚಿಕೊಂಡ ಬಾಣ ದೊಂದಿಗೇ ಓಡಿ ಬರುತ್ತಿದೆ!" ಎಂದನು.

ದುರ್ಮುಖರಾಜನು ರಾಕ್ಷಸನ ಹಿಡಿತದಿಂದ ಪಾರಾಗಲು ಒದರಿಕೊಂಡು ಅವನ ಮಾತಿಗೆ ತಲೆ ಯಾಡಿಸುತ್ತ "ಹೌದು ಹೌದು, ನಾನು ಒಬ್ಬ ರಾಜನೇ. ಅದು ನೀನು ಹೇಳಿದಂತೆ ಒಂದು ಕ್ಷುದ್ರ ಪ್ರಾಣಿಯೇ. ಕಾಡುಪ್ರಾಣಿ, ಕ್ರೂರಪ್ರಾಣಿ! ಹೌದು



ಹೌದು" ಎಂದು ಬಡಬಡಿಸಿದನು. ಅಷ್ಟರಲ್ಲೇ ಅಲ್ಲಿಗೆ ಕಳ್ಳರ ನಾಯಕ ನಾಗಮಲ್ಲನೂ, ಅವನ ಇಬ್ಬರು ಅನುಚರರೂ ಅವರ ಹಿಂದೆ ಕಟುಕಕರಡಿ ಮನುಷ್ಯನೂ ಬಂದರು.

ನಾಗಮಲ್ಲನು ದುರ್ಮುಖರಾಜನನ್ನು ನೋಡಿ, ಭಯದಿಂದ ಕೈಮುಗಿದು, "ಪ್ರಭುಗಳೇ, ಈಗ ತಮ್ಮ ಬಾಯಿಯಿಂದಲೇ ತಾವು ಯಾರೋ ದುರ್ಜಯ ಶೆಟ್ಟಿ ಅಲ್ಲವೆಂದೂ ದುರ್ಮುಖ ಮಹಾರಾಜರೆಂದೂ ಹೇಳಿದಿರಿ. ಇನ್ನು ತಮ್ಮನ್ನು ಸುರಕ್ಷಿತವಾಗಿ ರಾಜಧಾನಿಗೆ ಸೇರಿಸಿಬಿಡುವುದು ನಮ್ಮ ಕರ್ತವ್ಯ. ನಾವು ಕಳ್ಳರಾದರೂ ನಮ್ಮ ರಾಜರನ್ನೇ ದೋಚುವವರಲ್ಲ. ನಾವು ತುಂಬಾ ರಾಜಭಕ್ತಿಯುಳ್ಳವರು ಪ್ರಭುಗಳೇ. ಆ ಮೇಲೆ ತಮಗೆ ತೋರಿದ ಬಹುಮಾನವನ್ನು ಕೊಡುವಿರಂತೆ" ಎಂದನು.

ನಾಗಮಲ್ಲನ ಮಾತು ಕೇಳಿ ಕಟುಕಕರಡಿ ಅತ್ಯಾಕ್ರೋಶದಿಂದ, "ಹೇ! ಕಾಲಭೈರವಾ!" ಎಂದು ಕರ್ಕಶವಾಗಿ ಕೂಗಿ, ತನ್ನ ಚಪಗೊಡಲಿಯನ್ನು ಮೇಲೆತ್ತಿ "ಎಲವೋ! ಈ ದುರ್ಮುಖ ರಾಜನ ತಲೆಗಾಗಿಯೇ ಕರಡಿಕೆಂಗಣ್ಣ ಮಹಾ ಮಾಂತ್ರಿಕರು ಕಾದುಕೊಂಡಿರುವಾಗ, ಇವನನ್ನು ಸುರಕ್ಷಿತವಾಗಿ ಕರೆದೊಯ್ಯುವವನೋ ನೀನು? ಮೊದಲು ಅವನ ತಲೆ ಕಡಿದುಕೊಳ್ಳುತ್ತೇನೆ. ರಾಜಧಾನಿಗೆ ಅವನ ಮುಂಡವನ್ನು ತೆಗೆದುಕೊಂಡು ಹೋಗಿ ಬೇಕಾದರೆ. ಆಗ ಅಲ್ಲಿ ಈ ರಾಜನ ಉತ್ತರಾಧಿಕಾರಿಗಳಿಂದ ನಿನಗೆ ಸಿಕ್ಕುವ ಬಹುಮಾನವೇನು ಗೊತ್ತೋ? ಶಿರಚ್ಛೇದನ! ಈ ಬುದ್ಧಿಗೇಡಿ ಆಲೋಚನೆ ಬಿಡು" ಎಂದನು.

"ಆಹಾಹಾ! ಬಹಳ ಬುದ್ಧಿವಂತಿಕೆಯ ಮಾತು ಹೇಳಿದೆ ಕಟುಕಭಲ್ಲೂಕಾ!" ಎಂದು ಉಗ್ರದಂಡ ರಾಕ್ಷಸನು, ತನ್ನ ಮುಷ್ಟಿಯಲ್ಲಿ ಸಿಕ್ಕಿ ಒದರಾಡಿಕೊಂಡಿರುವ ಚಿರತೆಯನ್ನು ಬೀಸಿ ದೂರ ಬಿಸುಟು; ಸುತ್ತಲೂ ಇರುವವರನ್ನು ಒಂದುಸಾರಿ ನೋಡಿ, "ಈಗ ಇಲ್ಲಿ ಅಸಹಾಯಕನಾಗಿರುವ ಈ ದುರ್ಮುಖ ರಾಜನ ತಲೆಯನ್ನು ಈ ಕಟುಕಭಲ್ಲೂಕ ಮನುಷ್ಯನು ಕಡಿಯುವುದು ಧರ್ಮವೆಂದು ನನಗೆ ತೋರುವುದಿಲ್ಲ. ಅದೂ ಅವನಾಗಿ ರಾಜನನ್ನು ಹಿಡಿಯಲಿಲ್ಲ. ನಾವು ಹಿಡಿದುಕೊಟ್ಟು ಕಡಿಸುತ್ತೇವೆ! ನಿಮ್ಮ ಅಭಿಪ್ರಾಯವೇನು?" ಎಂದು ಕೇಳಿದನು.

ಕಟುಕಕರಡಿಯವನ ಹೊರತು ಉಳಿದೆಲ್ಲರೂ, ರಾಜನ ತಲೆ ಕಡಿಯುವುದು ಅನ್ಯಾಯವೆಂದೂ, ಅಧರ್ಮವೆಂದೂ ಅಭಿಪ್ರಾಯ ಹೇಳಿದರು. ಅದನ್ನು ಕೇಳಿ ಕಟುಕಕರಡಿಯವನ ಕೈಯಿಂದ ಚಪಗೊಡಲಿ ಕೆಳಕ್ಕೆ ಜಾರಿಬಿತ್ತು.

"ಹಾಗಾದರೆ ನಾನೇನು ಮಾಡಲಿ? ಮಹಾ ಶಕ್ತಿಸಂಪನ್ನರಾದ ಕರಡಿಕೆಂಗಣ್ಣ ಮಾಂತ್ರಿಕರು ತಮ್ಮ ಮಂತ್ರಶಕ್ತಿಯಿಂದ ಕೇವಲ ಮನುಷ್ಯನಾದ ನನ್ನನ್ನು ಹೀಗೆ ಮಹಾಭಲ್ಲೂಕವನ್ನಾಗಿ ಬದಲಾಯಿಸಿ ಕಳುಹಿ

ಸಿದ್ದು, ಈ ರಾಜನ ತಲೆಯನ್ನು ತರಬೇಕೆಂದು ತಾನೇ? ಅವರ ಮಾತು ಮೀರಿದರೆ ಅವರು ನನ್ನನ್ನು ಸುಮ್ಮನೆ ಬಿಡುವರೇ? ಸಾಯುವವರೆಗೂ ಹೀಗೇ ಕರಡಿಯಾಗಿಯೇ ಇರು ಅಂದರೇನು ಗತಿ? ಅವರು ನನ್ನನ್ನು ಫೂ ಅಂತ ಊದಿ ಭಸ್ಮ ಮಾಡಿದರೂ ಮಾಡಿದರೇ!" ಎಂದನು ಭಯದಿಂದ.

"ಅದೂ ನಿಜವೇ. ಬೇರೆ ದಾರಿ ಏನಾದರೂ ಇದೆಯೇ ಹೇಳಿರಿ" ಎಂದ ಉಗ್ರದಂಡ, ಆಗ ಅಂಗರಕ್ಷಕನು ಒಂದಡಿ ಮುಂದಿಟ್ಟು ಹೆದರುತ್ತಲೇ ಉಗ್ರದಂಡನಿಗೆ ಪ್ರಣಾಮಮಾಡಿ, "ಕಾಲಿಗೆ ಬಿದ್ದೇ ನನ್ನ ಅಭಿಪ್ರಾಯ ಹೇಳುತ್ತೇನೆ ರಾಕ್ಷಸಪ್ರಭೋ! ಮಹಾರಾಜರನ್ನು ಜೀವದೊಂದಿಗೇನೇ ಆ ಮಹಾ ಮಾಂತ್ರಿಕರ ಬಳಿಗೆ ಕರೆದೊಯ್ಯುವುದು ಚೆನ್ನಾಗಿದ್ದೀತು. ಇವರ ತಲೆಯ ಸಮಾಚಾರವನ್ನು ಅವರೇ ನೋಡಿಕೊಳ್ಳುತ್ತಾರಲ್ಲ. ಅವರು ತಲೆ ತರಲಿಕ್ಕೆ ಹೇಳಿದ್ದು, ಜೀವದೊಂದಿಗೆ ಹಿಡಿದು ತರಲು ಸಾಧ್ಯವಾಗದಿದ್ದರೆ ಮಾತ್ರವೇ ಅಂತ ನಾವು ಅರ್ಥಮಾಡಿಕೊಳ್ಳುವುದು ಈ ಸಂದರ್ಭದಲ್ಲಿ ನ್ಯಾಯವೆಂದು ನನ್ನ ಅಲ್ಪಬುದ್ಧಿಗೆ ತೋರುತ್ತದೆ. ಇನ್ನು ತಮ್ಮ ಚಿತ್ತ!" ಎಂದನು.

"ಈ ಆಲೋಚನೆ ಸರಿಯೆಂದೇ ಕಾಣುತ್ತದೆ. ಎಲೋ ಕಟುಕಕರಡೀ ನರನೇ! ನೀನೂ ಕೇಳಿದಿಯಷ್ಟೇ? ಇದಕ್ಕೇನು ಹೇಳುವಿ?" ಎಂದು ಕೇಳಿದ ಉಗ್ರದಂಡ.

"ಈ ರಾಜನು ಮಹಾತಂತ್ರಶಾಲಿಯಾಗಿದ್ದಾನೆ. ಇವನನ್ನು ಈ ಮಹಾರಣ್ಯವನ್ನು ದಾಟಿಸಿ ಮಹಾ ಮಾಂತ್ರಿಕರ ಬಳಿಗೆ ಕೊಂಡೊಯ್ಯುವುದೇನೂ ಸುಲಭವಲ್ಲ. ಯಾವ ಕ್ಷಣಕ್ಕಾದರೂ ಕಪ್ಪೆಯಹಾಗೆ ಜಾರಿ ಹೋಗಬಹುದು. ಈಗ ಇವನು ಸಿಕ್ಕಿಬಿದ್ದದ್ದೇ ಆ ಚಿರತೆಯ ಪುಣ್ಯದಿಂದ. ಇನ್ನೊಮ್ಮೆ ಇವನು ತಪ್ಪಿಸಿಕೊಂಡರೆ ಮತ್ತೆಂದೂ ಸಿಗಲಾರನು. ಆದ್ದರಿಂದ



ನ್ಯಾಯ - ಅನ್ಯಾಯ ದಯಾ - ದಾಕ್ಷಿಣ್ಯ ನೋಡಿಕೊಂಡಿದ್ದರೆ ಸಾಗದು." ಎಂದು ಕಟುಕಕರಡಿಯುವನು ದುರ್ಮುಖನ ಕಡೆಗೆ ಒಂದಡಿ ತೆಗೆದಿಟ್ಟನು.

ದುರ್ಮುಖನು "ಅಯ್ಯೋ!" ಎಂದು ಕೂಗಿ, ಉಗ್ರದಂಡನ ಹಿಂದೆ ಹೋಗಿ, "ಉಗ್ರದಂಡ ಮಹಾಪ್ರಭುಗಳೇ! ಶರಣು! ಶರಣು! ಈ ಯಮದೂತನ ಕೈಯಿಂದ ನೀವೇ ನನ್ನನ್ನು ಕಾಪಾಡಬೇಕು." ಎಂದು ಮೊರೆಯಿಟ್ಟನು.

"ಅಭಯ ಕೊಟ್ಟಿದ್ದೇನೆ! ಹೆದರಬೇಡ!" ಎಂದು ಉಗ್ರದಂಡ ರಾಕ್ಷಸನು ರಾಜನ ಬೆನ್ನು ತಡವಿ, "ಎಲೋ, ಭಲ್ಲೂಕ ಮನುಷ್ಯ! ಈ ರಾಜನನ್ನು ನಿನ್ನ ಹಿಂದೆ ಮಾಂತ್ರಿಕನ ಬಳಿಗೆ ಕರೆದು ತರುವ ಬಾಧ್ಯತೆ ನನ್ನದು. ನೀನು ನಿನ್ನ ವಾಹನವಾದ ಮೊಂಡು ಸೊಂಡಿಲಿನ ಆನೆಯಮೇಲೆ ಏರಿಕೊಂಡು ಮುಂದೆ ನಡೆ. ಈ ರಾಜನನ್ನು ಕರೆದುಕೊಂಡು ನಾನು ನಿನ್ನ ಹಿಂದೆ ಬರುತ್ತೇನೆ. ನಂಬುಗೆಯಾಯಿ



ತಪ್ಪೇ? ಇನ್ನು ಸುಮ್ಮನೆ ಮುಂದೆ ನಡೆ." ಎಂದನು. "ಹೇಳಿದ ಮಾತು ತಪ್ಪದಿದ್ದರೆ ಸರಿ. ಇದೋ, ಈಗಲೇ ಹೋಗಿ, ನನ್ನ ವಾಹನದ ಕಾಲುಗಳ ಹಗ್ಗವನ್ನು ಬಿಚ್ಚಿ ನಿಲ್ಲಿಸಿಬರುತ್ತೇನೆ" ಎಂದು ಕಟುಕಕರಡಿಯುವನು ಆನೆಯ ಬಳಿಗೆ ಹೊರಟು ಹೋದನು.

ಇದೆಲ್ಲಾ ನೋಡುತ್ತ ನಿಂತಿದ್ದ ಆಟವಿಕ ಮನುಷ್ಯ ಬಿಲ್ಲಿಗೆ ಬಾಣ ಅನಿಸಿಕೊಂಡು ಗಬಗಬನೆ ನಡೆಯುತ್ತ, "ಒಹೋಯ್! ಕಟುಕಕರಡಿಯಣ್ಣ! ಅವಸರಪಟ್ಟು ಅಜಾಗರೂಕತೆಯಿಂದ ಆ ಆನೇ ಹತ್ತಿರ ಹೋಗಿ ಬಿಡಬೇಡಕಣೋ! ನಿಮ್ಮ ಮಾತಿನ ಗದ್ದಲದಲ್ಲಿ, ಆನೆಯ ಹತ್ತಿರ ಒಂದು ಸಿಂಹದ ಗರ್ಜನೆಯೂ, ಆನೆ ಘೀಂಕರಿಸುವ ಶಬ್ಧವೂ ನಿಮಗೆ ಕೇಳಿಸಿರಲಿಕ್ಕಿಲ್ಲ. ಇಷ್ಟು ಹೊತ್ತಿಗೆ ಆನೆಯ ಕುಂಭಸ್ಥಳವನ್ನು ಸಿಂಹವು ಹರಿದು' ಮುಕ್ಕುತ್ತಿದ್ದರೂ ಇರಬಹುದು" ಎಂದು ಎಚ್ಚರಿಕೆ ಕೊಟ್ಟನು.

"ನಿಜವೇನು?" ಎಂದು ಕಟುಕಕರಡಿಯುವನು ಬೆದರಿಬಿದ್ದು ಓಡೋಡುತ್ತ ಬಿದ್ದಿರುವ ಆನೆಯನ್ನು ಸಮೀಪಿಸಿದನು.

ಆಟವಿಕನು ಹೇಳಿದಂತೆಯೇ, ಕಾಲುಗಳು ಬಂಧಿಸಲ್ಪಟ್ಟು ಬಿದ್ದಿರುವ ಆನೆಯಮೇಲೆ ಬೀಳಲು ಸಿಂಹವೊಂದು ಆದರಸುತ್ತಲೂ ಪ್ರದಕ್ಷಿಣೆ ಬರುತ್ತ, ನಡುನಡುವೆ ಎಡೆ ನೋಡಿ ಆನೆಯ ತಲೆಯನ್ನು ಪಂಜಾದಿಂದ ಹೊಡೆಯುತ್ತ ಅದರ ತಲೆಯನ್ನು ಸೀಳಲು ಪ್ರಯತ್ನಿಸುತ್ತಿತ್ತು. ಆನೆ ಘೀಂಕರಿಸುತ್ತ, ಮೊಂಡು ಸೊಂಡಿಲನ್ನು ಸಿಂಹದ ಕಡೆಗೆ ಚಾಚಿ ಚಾಚಿ ಅದನ್ನು ಹಿಡಿಯಲು ಪ್ರಯತ್ನಿಸುತ್ತ, ಕಾಲು ಕಟ್ಟುಗಳನ್ನು ಬಿಚ್ಚಲು ಒದರಾಡುತ್ತ, ಹೊರಳುತ್ತ ನಾನಾಯಾತನೆ ಪಡುತ್ತಿದ್ದಿತು.

ಕಟುಕಕರಡಿಯುವನು ಅದನ್ನು ನೋಡುತ್ತಲೇ, ಕಾಡು ನಡುಗುವಂತೆ "ಭೈರವ" ನಾಮ ಗರ್ಜನೆ ಮಾಡಿ, "ನನ್ನಂಥವನ ವಾಹನವನ್ನೇ ಹೊಟ್ಟೆಗೆ ಹಾಕಿಕೊಳ್ಳಲು ನೋಡುವೆಯಾ? ನೋಡು ನನ್ನ ಪೆಟ್ಟಿನ ರುಚಿ!" ಎನ್ನುತ್ತ ಚಪಗೊಡಲಿಯನ್ನೆತ್ತಿ ಸಿಂಹದ ಮೇಲೆ ನೆಗೆದನು.

ಸಿಂಹವು ಮನುಷ್ಯನಂತೆ ಆಯುಧಧಾರಿಯಾದ ಈ ವಿಚಿತ್ರ ಕರಡಿಯನ್ನು ನೋಡಿ, ಹೆದರಿ ನಾಲ್ಕಡಿ ಹಿಂದೆ ಹೋಯಿತು. ಕಟುಕಕರಡಿ ನಿಜಕ್ಕೂ ತನ್ನ ಮೇಲೆ ಧುಮುಕುವಾಗ, ಆ ಮೃಗರಾಜವೂ ಕೋಪಾವೇಶದಿಂದ ಗರ್ಜಿಸಿ ಪಂಜಾ ಅಗಲಿಸಿ ಅವನ ಮೇಲೆಯೇ ಹಾರಿತು.

ಆಗ ಅವನ ಚಪಗೊಡಲಿಯ ಏಟು ಗುರಿ ತಪ್ಪಿ ಅದರ ಹಿಂದಿನ ಒಂದು ಕಾಲಿಗೆ ತಾಗಿತು. ಕೂಡಲೇ ಸಿಂಹವು ಕೆಳಗೆಬಿದ್ದು ಪುನಃ ಎದ್ದು ಮತ್ತೊಂದುಸಾರಿ ಅವನ ಮೇಲೆ ಹಾರಲಿರುವ ಸಮಯದಲ್ಲೇ ಆಟವಿಕನು ಪ್ರಯೋಗಿಸಿದ ಬಾಣ ಸರಿಯಾಗಿ ಅದರ ಗುಂಡಿಗೆಗೆ ತಾಗಿ, ಬದಿಗೆ

ಮುದುಡಿಬಿತ್ತು ಆ ಸಿಂಹ. ಅಷ್ಟಾದರೂ ಮತ್ತೆ ಎದ್ದು ನಿಲ್ಲುವ ಪ್ರಯತ್ನದಲ್ಲಿ ಅದಕ್ಕೆ ಕುತ್ತಿಗೆ ಎತ್ತಲಾಗಲಿಲ್ಲ. ಅದು ಹಾಗೇ ಹೊರಳಾಡಿ ಕೊಳ್ಳುತ್ತಿರಲು, ಅದನ್ನು ಹೊಡೆಯಲು ಹೋಗುತ್ತಿರುವ ಕಟುಕ ಕರಡಿಯುವವನನ್ನು ಆಟವಿಕನು ತಡೆದು, "ಏನು ಸಾಹಸ ನಿನ್ನದು ಭಲ್ಲೂಕಣ್ಣಾ! ಇನ್ನು ಈ ಸಿಂಹ ಸತ್ತ ಹಾಗೇ ಲೆಕ್ಕ. ಇನ್ನೊಮ್ಮೆ ನಿನ್ನ ಕೊಡಲಿ ಹಾಕಿ ಹರಿದು ಅದರ ಚರ್ಮ ಹಾಳು ಮಾಡಬೇಡ. ಅದರ ಜೂಲೂ, ಚರ್ಮವೂ ನನಗೆ ಬೇಕು. ಸುಮ್ಮನಿರು. ಅದು ಮೆಲ್ಲವೇ ಸಾಯಲಿ." ಎಂದನು.

ಕಟುಕಕರಡಿಯುವವನು ಉದ್ದುದ್ದ ಉಸಿರು ಬಿಡುತ್ತ ಆಟವಿಕನನ್ನು ನೋಡಿ, "ಸರಿಸರಿ. ಅಡವಿಯಲ್ಲೇ ಇರುವ ನಿನಗೆ ಅದೆಲ್ಲಾ ಗೊತ್ತಿರುತ್ತೆ. ನಿನ್ನ ಬಾಣದ ಗುರಿಯನ್ನು ತುಂಬಾ ಮೆಚ್ಚುತ್ತೇನೆ. ಅಲ್ಲವೋ ಅಪ್ಪ, ನೀನು ಒಂಟಿ ಮನುಷ್ಯನಾಗಿದ್ದರೆ, ಈ ಕಾಡನ್ನು ಬಿಟ್ಟು ನನ್ನೊಂದಿಗೆ ಬಂದುಬಿಡಬಹುದಲ್ಲ? ಅಲ್ಲಿ ಮಹಾರಾಜರೊಂದಿಗೆ ಹೇಳಿ, ನನ್ನ ಕೈ ಕೆಳಗೆ ಉಪಕಟುಕನ ನೌಕರಿ ಕೊಡಿಸುತ್ತೇನೆ. ಆಗದೆ?' ಎಂದನು.

ಆಟವಿಕನು ತಲೆ ಬಗ್ಗಿಸಿ, "ಅದನ್ನೂ ನೋಡಬಹುದು. ಸರಿ, ನಿನ್ನೊಂದಿಗೆ ನಗರಕ್ಕೆ ಬರುತ್ತೇನೆ. ನಿನ್ನ ಪ್ರತಾಪವೂ ನನಗೆ ಮೆಚ್ಚಿಗೆಯಾಗಿದೆ. ಕೆಲಸ ಮಾಡಿದರೆ ನಿನ್ನಂಥ ಮಹಾ ಸಾಹಸಿಯ ಹತ್ತಿರವೇ ಕೆಲಸ ಮಾಡಬೇಕು." ಎಂದನು.

"ಜೈ ಕಾಲಭೈರವಾ!" ಎಂದು ಕಟುಕ ಕರಡಿಯುವನು ತಲೆ ಅಲುಗಿಸಿದನು. ಆಗ ಉಗ್ರದಂಡ ರಾಕ್ಷಸನು ಉಳಿದವರೊಂದಿಗೆ ಅಲ್ಲಿಗೇ ಬಂದು, "ಓಹ್! ಇಲ್ಲಿ ಬಹಳ ಕೆಲಸ ನಡೆದು ಹೋಯಿತಲ್ಲ! ಈ ಕಟುಕ ಭಲ್ಲೂಕ ಮನುಷ್ಯನಿಗೆ ತಕ್ಕ ಸೇವಕನೇ ದೊರಕಿದನೆಂದು ಕಾಣುತ್ತೆ! ಇಬ್ಬರೊಳಗೆ ತುಂಬ



ಅನ್ಯೋನ್ಯತೆ ಕೂಡಿದ ಹಾಗಿದೆ? ನಿಜತಾನೆ? ಭಲೇ! ಭಲೇ!" ಎಂದು ನಕ್ಕನು.

ಅವನ ಮಾತಿನಿಂದ ಉಬ್ಬಿದ ಕಟುಕ ಕರಡಿಯವನು, ತನ್ನ ಕೊಡಲಿಯನ್ನು ಕುಣಿಸುತ್ತ "ಎಲೋ, ಕಾಡು ಕಳ್ಳ ನಾಗಮಲ್ಲ! ನೀನೂ ನಿನ್ನ ಸ್ನೇಹಿತರೂ ಕೂಡಿ, ನನ್ನ ವಾಹನವಾದ ಆನೆಯ ಕಾಲಿನ ಕಟ್ಟುಗಳನ್ನು ಬಿಚ್ಚಿರಿ. ಕೇಳುವಿರಷ್ಟೇ ನನ್ನ ಮಾತು?" ಎಂದನು.

"ಆಗಲಿ, ಭಲ್ಲೂಕ ದೊರೇ! ಹಾಗೇ ಆಗಲಿ. ಕಟ್ಟು ಬಿಚ್ಚಿದ ಕೂಡಲೇ ಅದು ಎದ್ದು ನಮ್ಮನ್ನು ಎಳೆದು ಹಾಕಿ ತುಳಿದು ಸಾಯಿಸದಂತೆ ಮಾಡುವ ಭಾರ ನಿಮ್ಮದು. ನಂಬುತ್ತೇವೆ" ಎಂದ ನಾಗಮಲ್ಲ. "ಅದು ನಾನು ಹೇಳುವ ಹಾಗೆ ಕೇಳುವ ನನ್ನ ಸೇವಕ ಪ್ರಾಣಿ. ನನ್ನ ಅನುಮತಿ ಇಲ್ಲದೆ ಯಾರಿಗೂ ಏನೂ ಮಾಡದು. ಧೈರ್ಯದಿಂದ ಬಿಚ್ಚಿಬಿಡಿ!" ಎಂದನು ಕರಡಿ ಮನುಷ್ಯ.

ನಾಗಮಲ್ಲ ಮೊದಲಾದವರು ಆನೆಯ ಕಾಲಿನ ಕಟ್ಟುಗಳನ್ನು ಬಿಚ್ಚುವಾಗ, ಆ ಹಗ್ಗವನ್ನೇ ಅದರ ಕೊರಳಿಗೆ ಉರುಳಿನಂತೆ ಕಟ್ಟಿ ಕರಡಿಯುವನು ಅದರ ಬೆನ್ನಿನ ಮೇಲೆ ಹತ್ತಿ ಕುಳಿತುಕೊಂಡನು.

ಮೊಂಡು ಸೊಂಡಿಲಿನ ಆನೆ, ತನ್ನ ಕಾಲಿನ ಬಂಧನಗಳೆಲ್ಲ ತೊಲಗುತ್ತಲೇ ಘೀಂಕರಿಸಿಕೊಂಡು ಎದ್ದು ನಿಂತುಕೊಂಡಿತು.

ಕಟುಕ ಕರಡಿಯುವನು ಆಟವಿಕನನ್ನು ಕೈ ಸನ್ನೆ ಮಾಡಿ ಕರೆದು, "ಬಾ, ಬಾ, ನೀನು ಈ ಅರಣ್ಯ ಮಾರ್ಗವನ್ನು ಚೆನ್ನಾಗಿ ಬಲ್ಲವನು ತಾನೆ? ಬಂದು ನನ್ನ ವಾಹನದ ಕುಂಭ ಸ್ಥಳದ ಮೇಲೆ ಕುಳಿತುಕೊಂಡು, ಚಂದ್ರಶಿಲಾ ನಗರಕ್ಕೆ ಸಮೀಪದ ದಾರಿ ತೋರಿಸು." ಎಂದನು.

ಆದೇ ಬಾಯಿಯಿಂದ ಉಗ್ರದಂಡ ರಾಕ್ಷಸನನ್ನೂ ನೋಡಿ, "ಹೇಳಿದ ಮಾತು ನೆನಪಿದೆಯಪ್ಪೇ ಉಗ್ರದಂಡಾ? ಆ ಕಳ್ಳ ದುರ್ಮುಖ ರಾಜನು ಓಡಿಗೀಡಿ ಹೋಗದಂತೆ ನನ್ನ ಹಿಂದೆ ಕರೆದುಕೊಂಡು ಬರುವ ಬಾಧ್ಯದೆ ನಿನ್ನದು. ಅವನು ಮಹಾ ಪಾತಾಳತಂತ್ರ ರಾಜ. ಜಾಗ್ರತೆ!" ಎಂದನು.

ಉಗ್ರದಂಡನು ತಲೆ ದೂಗುತ್ತ, "ಬರುತ್ತೇನೆ. ನನಗೂ ಕರಡಿ ಕೆಂಗಣ್ಣ ಮಾಂತ್ರಿಕರ ಹತ್ತಿರ ಕೆಲಸವಿದೆ. ನೀನು ಆನೆಯ ಮೇಲೆ ಮುಂದೆ ಸಾಗು. ಇಲ್ಲಿರುವವರೆಲ್ಲರೂ ನಿನ್ನ ಹಿಂದೆಯೇ ಮುಂದೆ ಬರುತ್ತೇವೆ. ಇಷ್ಟವಿಲ್ಲದವರು ಅರಣ್ಯವು ದಾಟಿದ ಕೂಡಲೇ ಅವರವರ ದಾರಿ ಹಿಡಿದು ಹೊರಟು ಹೋಗಲೂಬಹುದು. ನಾನು ಹಾಗೆ ಹೋಗಲಾರೆ. ನನಗೆ ಮಾಂತ್ರಿಕ ಮಹಾಶಯರನ್ನು ನೋಡಲೇಬೇಕು."

"ಅದು ಒಳ್ಳೆಯ ಮಾತೇ ನಿಜ! ದುರ್ಮುಖ ರಾಜನ ಹೊರತು ಉಳಿದೆಲ್ಲರಿಗೂ ಈ ಕ್ಷಣದಿಂದಲೇ ಸ್ವೇಚ್ಛೆ ಕೊಟ್ಟುಬಿಟ್ಟೆನು. ಬೇಕಾದರೆ ಇಲ್ಲಿಯ ಅರಣ್ಯ ಮೃಗಗಳ ನಡುವೆ, ಹಾಯಾಗಿ ಬದುಕುವವರು ಬದುಕಲಿ" ಎಂದು ಎಲ್ಲಾ ವಿಜಯ ತನ್ನದೇ ಎಂಬ ಹಾಗೆ ಹೇಳಿ, ಕಟುಕ ಕರಡಿಯುವನು ಆನೆಯನ್ನು ಮುಂದಕ್ಕೆ ಹೊರಡಿಸಿದನು.

ಮೊಂಡು ಸೊಂಡಿಲಿನ ಆನೆಯನ್ನು ಅವರು ಬೇಗ ಬೇಗನೆ ಓಡಿಸುತ್ತಿರಲು, ಉಗ್ರದಂಡನೂ ಉಳಿದವರೂ ಸ್ವಲ್ಪ ಹಿಂದೆ ಹಿಂದೆ ಬಿದ್ದರು.

ಆಗ ಆಕಸ್ಮಾತ್ತಾಗಿ ಕರಡಿ ಕಟುಕರವನ ಮುಂದೆ ಮರಗಳ ಗುಂಪಿನಿಂದ ಎರಡು ಆನೆಗಳು ಬಂದು ಅಡ್ಡಗಟ್ಟಿದುವು. ಅವುಗಳ ಮೇಲಿದ್ದ ನಾಲ್ಕು ಮಂದಿ ಸೈನಿಕರು, "ಉದಯಗಿರಿ ಮಹಾರಾಜರಿಗೆ ಜಯವಾಗಲಿ!" ಎಂದು ಗರ್ಜಿಸಿ ಅವನ ಕಡೆಗೆ ಬಾಣಗಳನ್ನು ಪ್ರಯೋಗಿಸತೊಡಗಿದರು.—(ಇನ್ನೂ ಇದೆ)





# ಕರಡಿ ಕೆಂಗಣ್ಣ

## ೧೦

[ಕಟುಕಕರಡಿಯವನು ದುರ್ಮುಖಿ ರಾಜನ ತಲೆಯನ್ನು ಕಡಿಯದಂತೆ ಉಗ್ರದಂಡ ರಾಕ್ಷಸನು ಕಾಪಾಡಿದನು. ಅವನನ್ನು ಕರಡಿ ಕೆಂಗಣ್ಣ ಮಾಂತ್ರಿಕನ ಬಳಿಗೆ ಕರೆದೊಯ್ಯುವ ಬಾಧ್ಯತೆ ರಾಕ್ಷಸನದಾಯಿತು. ಆಟವಿಕನು ಕಟುಕ ಕರಡಿಯವನ ಬಂಟನಾಗಿರಲು ಒಪ್ಪಿ ಅವನೊಂದಿಗೆ ಹೊರಟನು. ಹೀಗೆ ಅವರೆಲ್ಲ ರಾಜಧಾನಿಗೆ ಹೊರಟರು. ಆಗ ಎರಡು ಆನೆಗಳ ಮೇಲಿನವರು ಇವರನ್ನು ಅಡ್ಡಗಟ್ಟಿ ಬಾಣ ಪ್ರಯೋಗ ಮಾಡ ತೊಡಗಿದರು.]

ಆ ಬಾಣದ ದಾಳಿಯನ್ನು ನೋಡಿ ಕಟುಕಕರಡಿಯವನು ಏನೂ ಹೆದರಲಿಲ್ಲ. ಅವನ ಸೊಂಡಿಲು ಮುರಿದ ಆನೆಯೂ ಹೆದರಲಿಲ್ಲ. ಕರಡಿಕಟುಕನು ತನ್ನ ಮೇಲೆ ಬರುವ ಬಾಣಗಳಿಗೆ ತನ್ನ ಚಪಗೊಡಲಿಯನ್ನು ಅಡ್ಡ ಹಿಡಿದು ಬೀಸುತ್ತ, ತಾಗಿದ ಬಾಣಗಳು ದೂರಬೀಳುವಂತೆ ಮಾಡುತ್ತಿದ್ದನು. ಸೊಂಡಿಲು ಮುರಿದ ಅವನ ಆನೆಯನ್ನು ಸಮೀಪ ಬಂದ ಸೈನಿಕರ ಆನೆಗಳ ಮೇಲೆ ಹುರುಡಿಸಿಬಿಟ್ಟನು. ಕೂಡಲೇ ಆ ಎರಡು ಆನೆಗಳೂ ಕರಡಿಕಟುಕನ ಆನೆಯನ್ನು ಢೀಕೊಟ್ಟುವು. ಮೂರು ಆನೆಗಳ ಕರ್ಣಕರ್ಕಶ ಘೀಂಕಾರಗಳು ಕಾಡಿನೊಳಗೆಲ್ಲಾ ಮಾರ್ಮೊಳಗಿದುವು. ಸೊಂಡಿಲುಗಳಿಂದ ಒಂದನ್ನೊಂದು ಹಿಡಿಯಲೂ ಎಳೆಯಲೂ ನೋಡಿದುವು. ದಾಡೆಗಳಿಂದ ಹಾಯ್ದುವು. ಪಕ್ಕದಲ್ಲಿದ್ದ ಗಿಡ ಮರಗಳು ಮುರಿದುವು. ಆಗ ಕಟುಕಕರಡಿಯವನು "ಜೈ ಶಿರೀಷವನ ಭೈರವಾ !" ಎಂದು ಕೂಗುತ್ತ ತನ್ನ ಚಪಗೊಡಲಿಯನ್ನು ಒಬ್ಬ ಸೈನಿಕನ ಆನೆಯ ದಂತಗಳ ಮೇಲೆ ಹೊಡೆದನು. ಆ ಕೊಡಲಿಯ ಏಟಿಗೆ ಆ ಆನೆಯ ಒಂದು ದಂತವು ಉದುರಿ ಕೆಳಗೆ ಅಷ್ಟು ದೂರಬಿತ್ತು. ಈ ಸೆಣಸಾಟದಲ್ಲಿ ಕುಂಭಸ್ಥಳದ



ಮೇಲಿದ್ದ ಆಟವಿಕಯುವಕನು ಜಾರಿ ಕೆಳಗೆ ಬಿದ್ದನು. ದಂತ ಮುರಿದು ಹೋದ ಆನೆ ಕರಡಿ ಕಟುಕನ ರಭಸಕ್ಕೆ ತಾಳಲಾಗದೆ ಹಿಂದಿರುಗಿ ಓಡಲು ನೋಡಿತು. ಅಷ್ಟರಲ್ಲಿ ಎರಡನೇ ಆನೆಯ ಮೇಲಿದ್ದ ಸೈನಿಕರು ಮಹಾಭಯದಿಂದ ಆರ್ತನಾದ ಮಾಡುತ್ತ, "ಓ! ಓ! ಈ ಆನೇ ಮೇಲಿರುವವನು ಕರಡೀ ವೇಷ ಹಾಕಿದ ಹಾಸ್ಯಗಾರನೂ ಅಲ್ಲ. ಬೀದೀ ಭಾಗವತದ ವೇಷಗಾರನೂ ಅಲ್ಲ. ನಾವು ಅಂದುಕೊಂಡದ್ದೆಲ್ಲಾ ತಪ್ಪಾಯ್ತು. ಇದು ಯಾವುದೋ ಯುದ್ಧ ತಂತ್ರಕಲಿತ ಕರಡಿಯೇ ನಿಜ! ಈ ಆನೆಯೂ ಭೂತಾವೇಶಿತವಾದ ಮಂತ್ರದಾನೆ! ಇವರ ಮಧ್ಯದಲ್ಲಿ ನಾವು ಸಿಕ್ಕಿ ಕೆಟ್ಟೆವಲ್ಲಾ!" ಎನ್ನುತ್ತಾ ತಮ್ಮ ಆನೆಯನ್ನು ಹಿಂದಕ್ಕೆ ತಿರುಗಿಸಿದರು.

ಕಟುಕಕರಡಿಯುವವನು ಕೆಳಗೆ ಬಿದ್ದು ಏಳದಿರುವ ಆಟವಿಕಯುವಕನನ್ನು ನೋಡಿ, "ಬಿದ್ದೆಯಾ! ಹಾಗೇ ಬಿದ್ದಿರು. ಸ್ವಲ್ಪಹೊತ್ತಿಗೆ ಸರಿಯಾಗುತ್ತೆ! ಹುಂ, ಈ ಆನೇ ಮೇಲಿನವರನ್ನು ತಪ್ಪಿಸಲು ಬಿಡಬಾರದು" ಎನ್ನುತ್ತಾ, ತನ್ನ ವಾಹನವನ್ನು ವೇಗವಾಗಿ ಮುಂದಕ್ಕೆ ಓಡಿಸಿ ಆ ಎರಡು ಆನೆಗಳನ್ನೂ ಅಡ್ಡಗಟ್ಟಿ, "ಎಲೋ! ನಾನು ನಿಜವಾದ ಕರಡಿ ಮಾತ್ರವಲ್ಲ, ತಲೆಗಳನ್ನು ಕಡಿಯುವುದೇ ವೃತ್ತಿಯಾಗಿರುವ ಕಟುಕರಮುಖಂಡ ನಾನು! ಸ್ವಲ್ಪ ಹೊತ್ತಾದರೂ ನೀವು ಬದುಕಿರಬೇಕಾದರೆ ಓಡಿ ಹೋಗುವ ಆಲೋಚನೆ ಬಿಟ್ಟು, ನಾನು ಕೇಳುವ ಪ್ರಶ್ನೆಗಳಿಗೆ ಉತ್ತರ ಕೊಡಬೇಕು. ನಿಲ್ಲಿರಲ್ಲೇ!" ಎಂದು ಗರ್ಜಿಸಿದನು.

ಕಟುಕಕರಡಿಯುವನ ರೂಪವನ್ನೂ, ಕಣ್ಣುಗಳನ್ನೂ, ಚಪಗೊಡಲಿಯ ಹೊಳವನ್ನೂ, ಭೀಕರ ಕಂಠಸ್ವರವನ್ನೂ ಕೇಳಿ ಆ ಸೈನಿಕರು ನಖಶಿಖಾಂತವಾಗಿ ನಡುಗಿದರು.

ಕರಡಿಕಟುಕನು ತನ್ನ ವೊಂಡು ಸೊಂಡಿಲಿನ ಆನೆಯನ್ನು ಸೈನಿಕರ ಆನೆಯ ಸುತ್ತಲೂ ವೇಗವಾಗಿ ಎರಡು ಪ್ರದಕ್ಷಿಣೆ ತಿರುಗಿಸಿ, ಚಪಗೊಡಲಿಯನ್ನು ಒಂದು ಆನೆಯ ತಲೆಗೆ ತಗಲಿಸಿ, ಸೈನಿಕರನ್ನು ನೋಡಿ, "ಹೇಳಿರಿ ಈಗ. ನೀವು ಯಾರು? ದುರ್ಮುಖರಾಜನಿಗೆ ಜೈ ಅಂತ ಕೂಗಿದಿರಲ್ಲಾ? ಆ ರಾಜನ ತಲೆ ನನ್ನ ಅಡವಿನಲ್ಲಿದೆ. ಒಂದು ವೇಳೆ ನಿಮ್ಮ ದುರ್ಮುಖರಾಜನು ರಾಜ್ಯವಾಳುವ ರಾಜನಲ್ಲದೆ, ಯಾವುದಾದರೂ ಗದ್ದೆ ಹೂಡುವ ಬೇಸಾಯದ ರಾಜನೋ? ಹೇಳಿರಿ! ಯಾವ ದುರ್ಮುಖರಾಜನ ಕಡೆಯವರು ನೀವು?" ಎಂದು ಕೇಳಿದನು.

ಅವನ ಪ್ರಶ್ನೆ ಕೇಳಿ ಸೈನಿಕರಲ್ಲೊಬ್ಬನು ಕಟುಕಕರಡಿಯುವನಿಗೆ ತಲೆಬಾಗಿ ಕೈಮುಗಿದು, "ಭಲ್ಲೂಕ ಮಹಾರಾಜಾ! ನಾವು ಜಯಕಾರ ಮಾಡಿದ್ದು ಉದಯಗಿರಿ ರಾಜ್ಯವನ್ನಾಳುವ ದುರ್ಮುಖ ಮಹಾರಾಜರಿಗೇ. ಅವರನ್ನು ಈ ಅರಣ್ಯದಲ್ಲಿ ಯಾರೋ ಗಜವಾಹನದವರು ಹಿಡಿದು ಬಂಧಿಸಿದರೆಂದು ವರ್ತ

ಮಾನ ಬಂತು. ಅವರನ್ನು ಹುಡುಕುತ್ತಾ, ಹೀಗೆ ಬಂದು, ಆನೆಯ ಮೇಲಿದ್ದ ನಿಮ್ಮನ್ನು ನೋಡಿ ಅಪಾರ್ಥ ಮಾಡಿಕೊಂಡು ಬಾಣ ಪ್ರಯೋಗ ಮಾಡಿದೆವು. ಕ್ಷಮಿಸಬೇಕು. ನಮ್ಮ ಶತ್ರುಗಳು ಬೇರೆ ಯಾರೋ ಗಜವಾಹಕರು." ಎಂದನು.

ಅವನು ಹೇಳಿದುದನ್ನು ಕೇಳಿ ಕಟುಕಕರಡಿಯವನು ಆಶ್ಚರ್ಯಪಡು... "ಅಷ್ಟು ದೊಡ್ಡ ರಾಜನನ್ನು ಶತ್ರುಗಳ ಕೈಯಿಂದ ಕಾಪಾಡಲಿಕ್ಕೆ ನೀವು ಕೇವಲ ನಾಲ್ಕು ಮಂದಿ ಸೈನಿಕರು ಮಾತ್ರ ಈ ಮಹಾರಣ್ಯದೊಳಗೆ ಪ್ರವೇಶಿಸಿದಿರೇನು ? ಅಲ್ಲ ಹಿಂದಿನಿಂದ ದೊಡ್ಡ ಸೈನ್ಯವೇನಾದರೂ ಬರುತ್ತಾ ಇದೆಯೋ ?" ಎಂದನು.

ಈ ಪ್ರಶ್ನೆ ಕೇಳಿ ನಾಲ್ವರು ಸೈನಿಕರು ಒಬ್ಬರ ಮುಖವನ್ನೊಬ್ಬರು ನೋಡಿದರು. ಅವರ ಮುಖಗಳಲ್ಲಿ ಬಿಳುಪು ತಟ್ಟಿತು. ಅದನ್ನು ನೋಡಿ ಕರಡಿ ಕಟುಕನು ತನ್ನ ಚಪಗೊಡಲಿಯನ್ನು ಅವರ ಆನೆಯ ತಲೆಯ ಮೇಲಿಟ್ಟು, "ಓಹೋ ! ಏನೋ ಸುಳ್ಳು ಹೇಳಲು ಆಲೋಚನೆ ಮಾಡುವಿರೇನು ? ನೀವು ಹೇಳುವ ಮಾತಿನಲ್ಲಿ ನನಗೇನಾದರೂ ಸಂಶಯ ಬಂದರೆ ಈ ಆನೆಯ ಕುಂಭಸ್ಥಳವನ್ನು ಒಂದೇಟಿಗೆ ಒಡೆದುಹಾಕುತ್ತೇನೆ. ಆಮೇಲೆ ನಿಮ್ಮ ನಾಲ್ವರ ತಲೆಗಳಿಗೂ ಅದೇ ಗತಿ ! ಜಾಗ್ರತೆ ! ಇದ್ದದ್ದಿದ್ದ ಹಾಗೆ ಎಲ್ಲಾ ಹೇಳಿಬಿಡಿ !" ಎಂದು ಕಣ್ಣು ಕೆಕ್ಕರಿಸಿ ಹೇಳಿದನು.

ಕೂಡಲೇ ಸೈನಿಕನೊಬ್ಬ ಚುರುಕುಬಿಸಿ ತಗಲಿದವನಂತೆ, "ಹಾಗೇನಿಲ್ಲ. ಭಲ್ಲೂಕಪ್ರಭೂ ! ದುರ್ಮುಖ ರಾಜರ ರಾಜಧಾನಿಗೇ ಆಪತ್ತು ಬಂದಿದೆ. ಸೂರ್ಯಭೂಪತಿ ಎಂಬ ಸಾಮಂತರಾಜನೊಬ್ಬ ರಾಜಧಾನಿಯನ್ನು ಆಕ್ರಮಿಸಿ ಕುಳಿತಿದ್ದಾನೆ. ಆಗ ನಡೆದ ಯುದ್ಧದಲ್ಲಿ ಬದುಕಿ ಹೊರಬಿದ್ದ ನಾವು ಮಾತ್ರ ನಮ್ಮ ರಾಜನನ್ನು ಹುಡುಕುತ್ತಾ, ಈ ಅರಣ್ಯಕ್ಕೆ



ಬಂದೆವು. ಇಷ್ಟೇ ಹೊರತು ಬೇರೆ ಸೈನ್ಯವೂ ಇಲ್ಲ. ಸರಂಜಾಮುವೂ ಇಲ್ಲ. ನಮ್ಮ ರಾಜರಿಗೆ ಅಲ್ಲಿಯೂ ಕಷ್ಟ, ಇಲ್ಲಿಯೂ ಕಷ್ಟ!" ಎಂದನು.

"ಆಹಾ! ನಿಮ್ಮ ರಾಜಭಕ್ತಿ ಮೆಚ್ಚತಕ್ಕಂಥಾದ್ದೇ. ಆದರೆ ನೀವು ಯಾರಿಗಾಗಿ ಇಷ್ಟು ಶ್ರಮಪಟ್ಟಿರೋ ಆ ದುರ್ಮುಖರಾಜನು ಚಂದ್ರಶಿಲಾನಗರವನ್ನು ಆಕ್ರಮಿಸಬೇಕೆಂದು ಹೊರಟು, ದಾರಿಯಲ್ಲಿ ಒಬ್ಬ ದೊಡ್ಡ ಮಾಂತ್ರಿಕನನ್ನೂ, ಕಾಳೀವರ್ಮನೆಂಬ ಮಹಾವೀರನನ್ನೂ ಅವಮಾನಪಡಿಸಿ ಕಷ್ಟದಲ್ಲಿ ಸಿಕ್ಕಿಬಿದ್ದ. ಅವನು ಜೀವದೊಂದಿಗೆ ಉದಯಗಿರಿಯನ್ನು ಸೇರುವುದಿಲ್ಲ ಗೊತ್ತೋ ? ನೀವು ಅವನ ಗೊಡವೆ ಬಿಟ್ಟು ಮತ್ತೊಬ್ಬರಾಜನ ಆಶ್ರಯ ಸೇರಿ ಬದುಕಿರಿ. ಹೋಗಿರಿ. ಪಾಪ, ನಿಮಗೇಕೆ ಆ ಗತಿಗೇಡಿಯ ಗೊಡವೆ ?" ಎಂದ ಕಟುಕಕರಡೀ ಮನುಷ್ಯ.

ಅವನ ಮಾತುಗಳು ಅರ್ಥವಾಗದೆ ಸೈನಿಕರು ಮತ್ತೆ ಮುಖ ಮುಖ ನೋಡಿಕೊಳ್ಳ ತೊಡಗಿದರು.



ಆಗ ದುರ್ಮುಖಿ ರಾಜನ ಅಂಗರಕ್ಷಕನು ಓಡೋಡುತ್ತ ಅಲ್ಲಿಗೆಬಂದು, "ಕಟುಕಭಲ್ಲೂಕ ಪ್ರಭೋ ! ಹಿಂದೆ ಬರುವ ನಾವೆಲ್ಲಾ ಈ ಕಡೆ ಆನೆಗಳ ಘೀಂಕಾರಗಳನ್ನು ಕೇಳಿ, ನಿಮ್ಮ ಆನೆಯನ್ನು ಕಾಡಾನೆಗಳೇನಾದರೂ ಆಟಕಾಯಿಸಿದುವೇನೋ ಅಂದುಕೊಂಡೆವು, ಎಲ ! ಇದೇನು ? ಇವನಿಗೇ ನಾಯಿತು ?" ಎಂದು ನೆಲದ ಮೇಲೆ ಬೋರ್ಲಬಿದ್ದಿದ್ದ ಆಟವಿಕಯುವಕನನ್ನು ನೋಡಿ, "ಅಯ್ಯಯ್ಯೋ ? ಇವನನ್ನು ಕಾಡಾನೆಗಳು ತುಳಿದು ಕೊಂದು ಹಾಕಿದ ಹಾಗಿದೆ ಪಾಪ! ಯಾವಳು ಹೆತ್ತಮಗನೋ !" ಎಂದನು.

ಕರಡಿಕಟುಕನು ತನ್ನ ಆನೆಯನ್ನು ಆಟವಿಕಯುವಕನ ಬಳಿಗೆ ಸಾಗಿಸಿ, ಅವನ ಹೊಟ್ಟೆಯ ಪಕ್ಕವು ಏರಿ ತಗ್ಗುವುದನ್ನು ನೋಡಿ ತಲೆಯಾಡಿಸಿ, "ಇವನು ಬದುಕಿಯೇ ಇದ್ದಾನೆ. ಆನೆಯ ಕುಂಭಸ್ಥಳದ ಮೇಲಿನಿಂದ ಬಿದ್ದ ಪೆಟ್ಟಿಗೆ ಮೂರ್ಛೆಬಂದಿದೆ ಅಷ್ಟೇ. ಅವನ ಬೆನ್ನ ಮೇಲೆ ಒಂದೇಟುಕೊಡು. ಪೆಟ್ಟಿಗೆ ಪೆಟ್ಟೇ ಮದ್ದು." ಎಂದನು. "ಹಾಗೇನು ?" ಎಂದು ಅಂಗರಕ್ಷಕನು ತನ್ನ ಅಂಗೈಯಿಂದ ಬಿದ್ದಿದ್ದ ಆಟವಿಕನ ಬೆನ್ನಿಗೆ ಒಂದು ಏಟನ್ನು ಬಾರಿಸಿ, "ಎದ್ದೇಳು ಎದ್ದೇಳು ! ನಿನ್ನ ಯಜಮಾನ ಮಹಾಭಲ್ಲೂಕಯ್ಯ ಕರೆಯುತ್ತಿದ್ದಾನೆ. ಎಷ್ಟು ಹೊತ್ತು ಹೀಗೆ ಬಿದ್ದಿರುತ್ತೀಯಾ ?" ಎಂದು ಕೂಗಿ ಹೇಳಿದನು.

ಕೂಡಲೇ ಆಟವಿಕನು ಎದ್ದುನಿಂತು, ತನ್ನ ಬಿಲ್ಲಂಬುಗಳನ್ನು ಎತ್ತಿಕೊಂಡು, "ಎಲ್ಲಿದ್ದಾರೆ ? ಏನಾಯಿತು ನನ್ನ ದೊರೆಗೆ ? ಕರಡಯ್ಯ ದೊರೆಯನ್ನು ಅಡ್ಡಗಟ್ಟಿದವರು ಎಲ್ಲಿ ?" ಎಂದು ಬಿಲ್ಲಿಗೆ ಬಾಣ ಹೂಡಿ ಆಚೀಚೆ ನೋಡಿದನು.

ಆಗ ಆನೆಯ ಮೇಲಿದ್ದ ಸೈನಿಕರು, "ಅಯ್ಯಾ ! ಅಂಗರಕ್ಷಕ ಪ್ರಭುವೇ ! ನಮಗೊಂದೂ ತೋರೋದಿಲ್ಲ. ನಮ್ಮನ್ನು ಕಾಪಾಡಿ, ಕಾಪಾಡಿ ! ನೀವೇ ಗತಿ ! ಶರಣು ! ಶರಣು !" ಎಂದು ಕೂಗುತ್ತಾ, ಆನೆಯ ಮೇಲಿನಿಂದ ಕೆಳಗೆ ಹಾರಿದರು.

ತನ್ನನ್ನು ಅಂಗರಕ್ಷಕನೆಂದು ಕರೆದವರು ಯಾರೆಂದು ಅಂಗರಕ್ಷಕನು ಆಶ್ಚರ್ಯದಿಂದ ಆ ಸೈನಿಕರನ್ನು ನೋಡಿ, "ನೀವ್ಯೋ ? ಏನಿದು ? ನಗರವನ್ನು ಬಿಟ್ಟು ಈ ಕಾಡಿನೊಳಗೆ ಏಕೆಬಂದಿರಿ ? ಏನಾಯಿತು ?" ಎಂದು ಕೇಳಿದನು.

ಅವನ ಪ್ರಶ್ನೆ ಕೇಳಿ ಕಟುಕಕರಡಿಯುವನು ಗಟ್ಟಿಯಾಗಿ ನಕ್ಕು, "ಅದೆಲ್ಲಾ ದೊಡ್ಡ ಕಥೆ, ನಿನ್ನ ದುರ್ಮುಖಿ ರಾಜನ ರಾಜಧಾನಿ, ಕೋಟೆ, ಅರಮನೆಗಳನ್ನು ಯಾವನೋ ಸಾಮಂತರಾಜ ಆಕ್ರಮಿಸಿಬಿಟ್ಟನು. ಹೋದರೆ ಹೋಗಲಿ. ಇನ್ನು ಸ್ವಲ್ಪ ಹೊತ್ತಿಗೆ ತಲೆಯನ್ನೇ ಕಳೆದುಕೊಳ್ಳುವವನಿಗೆ ರಾಜ್ಯವಿದ್ದರೆ ಮಾತ್ರ ಏನು ಪ್ರಯೋಜನವಿದೆ? ಆ ಮಾತು ಬಿಡು," ಎಂದನು.

ಅಷ್ಟರಲ್ಲಿ ಅಲ್ಲಿಗೆ ದುರ್ಮುಖಿ ರಾಜನೂ, ಅವನ ಹಿಂದೆ ಉಗ್ರದಂಡ ರಾಕ್ಷಸನೂ, ನಾಗಮಲ್ಲ ಮೊದ

ಲಾದ ಕಳ್ಳರೂ ಬಂದರು. ದುರ್ಮುಖನು ಬಂದ ಕೂಡಲೇ ತನ್ನ ಸೈನಿಕರನ್ನು ಗುರುತಿಸಿ, "ಅರರೆ! ನೀವೇ! ಏನಿದು? ನೀವೆಲ್ಲಾ ಈ ಅರಣ್ಯಕ್ಕೆ ಏಕೆ ಬಂದಿರಿ?" ಎಂದು ಕೇಳಿದನು.

"ನಾನು ಹೇಳುತ್ತೇನೆ" ಎಂದು ಕಟುಕಕರಡಿಯವನು ಆನೆಯ ಮೇಲಿನಿಂದ ಕೆಳಗಿಳಿದು, "ಇದೇ ಪ್ರಶ್ನೆಯನ್ನೆ ನಿನ್ನ ಅಂಗರಕ್ಷಕನೂ ಅವರನ್ನು ಕೇಳಿದನು. ನಾನೇ ಹೇಳುತ್ತೇನೆ ಕೇಳು. ಅದೇನೂ ಚಿಂತೆ ಮಾಡಬೇಕಾದ ಸಂಗತಿಯಲ್ಲ. ನಿನ ರಾಜಧಾನಿ ಸಾಮಂತ ರಾಜನ ವಶಕ್ಕೆ ಹೋಯಿತು. ನಿನಗೆ ರಾಜ್ಯವೂ ಇಲ್ಲ. ಬದುಕುವ ಪ್ರಯೋಜನವೂ ಇಲ್ಲ." ಎಂದನು.

"ಯಾವ ಹುಲು ಸಾಮಂತನವನು?" ಎಂದು ದುರ್ಮುಖನು ಕೋಪದಿಂದ ಕತ್ತಿ ಝಳಪಿಸಿ ಸೈನಿಕರೊಂದಿಗೆ, "ನನಗಿರುವ ಸಾಮಂತ ಒಬ್ಬನೇ ಒಬ್ಬ. ಆ ಸೂರ್ಯಭೂಪತಿ. ಅವನೇ ಏನು ನನ್ನ ರಾಜ್ಯ ಆಕ್ರಮಿಸಿಕೊಂಡದ್ದು? ನೀವೆಲ್ಲಾ ಹೇಡಿಗಳಾಗಿ ರಾಜ್ಯವನ್ನು ಅವನಿಗೇ ಬಿಟ್ಟುಕೊಟ್ಟು ಓಡಿಬಂದಿರುವಿರಾ? ನಿಮಗೆಲ್ಲಾ ತಿನಿ ತುಂಬಿಸಿ ಕಾಪಾಡಿದ್ದೆಲ್ಲಾ ವ್ಯರ್ಥ. ಪರಮ ದ್ರೋಹಿಗಳೇ! ನಿಮ್ಮ ತಲೆಗಳನ್ನು ಈಗಲೇ ಕಡಿದುರುಳಿಸುತ್ತೇನೆ" ಎಂದು ಸೈನಿಕರ ಮೇಲೆ ಧುಮುಕಲು ನೋಡಿದನು.

ಆಗ ಉಗ್ರದಂಡ ರಾಕ್ಷಸನು ತಟ್ಟನೆ ಮುಂದೆ ಬಂದು, ದುರ್ಮುಖನ ಕೈ ಹಿಡಿದು ನಿಲ್ಲಿಸಿ, "ದುರ್ಮುಖ ರಾಜಾ! ದುಡುಕಿಬಿಡಬೇಡ. ಮೊದಲು ಕಟುಕ ಕರಡಿ ಮನುಷ್ಯನಿಂದ, ಆ ಮೇಲೆ ಮಹಾಮಾಂತ್ರಿಕನಿಂದ ಹೀಗೆ ಬೀಸಿಕೊಂಡಿರುವ ದೊಣ್ಣೆಯ ಏಟುಗಳಿಂದ ನಿನ್ನ ತಲೆಯನ್ನು ಕಾಪಾಡಿಕೊಳ್ಳುವ ಉಪಾಯ ನೋಡು. ಆ ಮೇಲೆ ಬೇಕಾದರೆ ನಿನ್ನ ರಾಜ್ಯ ಕೋಟೆ ಕೊತ್ತಳ ಎಲ್ಲಾ ಉಳಿಸುವ ಮಾತು ನೋಡೋಣ. ನಾವೆಲ್ಲರೂ ನಿನಗೆ ಸಹಾಯಕರಾಗಿರುತ್ತೇವೆ" ಎಂದನು.



ರಾಕ್ಷಸನ ಮಾತು ಕೇಳಿ, ದುರ್ಮುಖನ ಆವೇಶವೂ ದರ್ಪವೂ ಜರ್ರನೆ ಇಳಿಯಿತು. ಅವನು ಉಗ್ರದಂಡ ರಾಕ್ಷಸನ ಎರಡು ಕೈಗಳನ್ನು ಹಿಡಿದು, "ರಾಕ್ಷಸ ಪ್ರಭು! ನನಗೆ ಖಂಡಿತವಾಗಿಯೂ ಸಾವೇ ಬರುವ ಹಾಗಿದ್ದರೆ, ಒಂದು ರಾಜ್ಯದ ರಾಜನಾಗಿಯೇ ಸಾಯುವ ಹಾಗೆ ಮಾಡಬೇಕಾದ ಭಾರ ನಿಮ್ಮದೇ. ನಿಮ್ಮ ಸಹಾಯದಿಂದ ದುಷ್ಟನಾದ ಆ ಸಾಮಂತನ ತಲೆಯನ್ನು ಕೋಟೆಯ ಬುರುಜಿಗೆ ನೇತು ಹಾಕಿ, ಆ ಮೇಲೆ ಸಂತೋಷವಾಗಿ ನನ್ನ ತಲೆ ಕಡಿಸಿಕೊಳ್ಳುತ್ತೇನೆ. ಆ ಕರಡೀ ಕೆಂಗಣ್ಣರ ಸನ್ನಿಧಾನಕ್ಕೆ ನಾನೇ ಬರುತ್ತೇನೆ. ಅಷ್ಟೊಂದು ಆಗುವ ಹಾಗೆ ಮಾಡಬೇಕು." ಎಂದನು.

ದುರ್ಮುಖನ ದುಃಖಾವಸ್ಥೆಯನ್ನು ನೋಡಿ ಉಗ್ರದಂಡ ರಾಕ್ಷಸನಿಗೆ ತುಂಬಾ ಕನಿಕರ ಉಂಟಾಯಿತು. ಅವನು ಕಟುಕಕರಡಿಯವನನ್ನು ನೋಡಿ, "ಎಲೋ, ನರಭಲ್ಲೂಕಾ, ಈ ದುರ್ಮುಖನ ಕೋರಿಕೆ



ಯಲ್ಲಿ ನನಗೇನೂ ತಪ್ಪು ಕಾಣುವುದಿಲ್ಲ. ಎಷ್ಟಾದರೂ ಇಷ್ಟುಕಾಲ ರಾಜನಾಗಿ ಬಾಳಿದವನು. ಸಾಯುವ ಕಾಲದ ಕೊನೆಯ ಕೋರಿಕೆ ತೀರಿಸಬೇಕು ಅನ್ನುತ್ತಾರಲ್ಲವೆ? ಹಾಗೇ ಮಾಡೋಣವೇನು?" ಎಂದು ಕೇಳಿದನು.

ಕಟುಕಕರಡಿಯುವನು ತುಸು ಯೋಚಿಸಿ, ಅಲ್ಲಿದ್ದ ಎಲ್ಲರನ್ನೂ ಒಮ್ಮೆ ನೋಡಿ, "ನೀವೆಲ್ಲರೂ ಕೂಡಿ ನನ್ನನ್ನು ಮೋಸಪಡಿಸಲು ಗತ್ತುಹಾಕಿಕೊಂಡಿಲ್ಲವಷ್ಟೆ?" ಎಂದು ಬೆರಳಿನಿಂದ ಕೊಡಲಿಯ ಹರಿತವನ್ನು ನೋಡಿದನು.

ಅವನು ಕೋಪದಿಂದ ಮೈ ತಿಳಿಯದೆ ಹೋಗುವ ಮೊದಲೇ ಶಾಂತಪಡಿಸಬೇಕೆಂದುಕೊಂಡು ಉಗ್ರದಂಡ ರಾಕ್ಷಸನು ಮುಗುಳು ನಗುತ್ತ ಅವನ ಭುಜದ ಮೇಲೆ ಕೈಹಾಕಿ ಪೂಸುತ್ತ, "ಕೋಪೋಗ್ರನಾದ ಕಟುಕ ಮಾನವನೇ! ನಿನ್ನ ಕೊಡಲಿ ಎಷ್ಟೊಂದು ಹರಿತವೆಂಬುದು ಇಲ್ಲಿ ಎಲ್ಲರಿಗೂ ಗೊತ್ತಾಗಿದೆ. ಒಂದು ಸೂಕ್ಷ್ಮ ವಿಷಯ ಗಮನಿಸಿದೆಯಾ? ನಿನ್ನ ಪೂಜ್ಯ ಗುರುಗಳಾದ ಕರಡಿಕೆಂಗಣ್ಣ ಮಾಂತ್ರಿಕರು ರಾಜನಾದ ದುರ್ಮುಖನ ತಲೆ ತರಲಿಕ್ಕೆ ಹೇಳಿದರೋ, ರಾಜ್ಯವನ್ನು ಕಳೆದುಕೊಂಡ ದುರ್ಮುಖನ ತಲೆಯನ್ನೋ? ಈ ಪ್ರಶ್ನೆ ತುಂಬ ಮುಖ್ಯವಾದುದಲ್ಲವೆನ್ನುವಿಯಾ?" ಎಂದು ಕೇಳಿದನು.

ಆ ಪ್ರಶ್ನೆಗೆ ಅರ್ಥವಿಲ್ಲವೆಂಬಂತೆ ಕರಡಿಯುವನು ತಲೆಯಲುಗಿಸುತ್ತ, "ಉಗ್ರದಂಡಾ! ನೀನೇನೋ ಮಾತಿನ ಮಡಿಕೆಯಲ್ಲಿ ಧರ್ಮ ಸಂದೇಹವೇನೋ ಎಬ್ಬಿಸುವ ಹಾಗಿದೆ. ಹೇಳುವಂಥಾದ್ದನ್ನು ಸ್ಪಷ್ಟವಾಗಿ ಹೇಳಿಬಿಡು." ಎಂದನು.

"ಹಾಗಾದರೆ ಹೇಳುತ್ತೇನೆ ಕೇಳು. ಈ ದುರ್ಮುಖ ರಾಜನಿಗೆ ತನ್ನ ತಲೆ ಹೋಗುವುದಕ್ಕಿಂದಲೂ ತಪ್ಪಿ ಹೋದ ರಾಜ್ಯವನ್ನು ಕುರಿತೇ ಹೆಚ್ಚು ಚಿಂತೆ ಹಿಡಿದಿದೆ. ಆದ್ದರಿಂದ ದ್ರೋಹಿಯೂ ಕಳ್ಳನೂ ಆದ ಆ ಸಾಮಂತ ಸೂರ್ಯಭೂಪತಿಯನ್ನು ಕೋಟೆಯೊಳಗಿನಿಂದ ಹೊರಗೆ ಹಾಕಿ, ಇವನು ಉದಯಗಿರಿ ರಾಜ್ಯದ ರಾಜನೇ ಅನಿಸಿ, ಆ ಮೇಲೆ ಅವನನ್ನು ಮಾಂತ್ರಿಕ ಮಹಾನುಭಾವರ ಬಳಿಗೆ ಕರೆದುಕೊಂಡು ಹೋಗೋಣ, ಹೀಗೆ ಮಾಡುವುದರಿಂದ ಮಾಂತ್ರಿಕ ಮಹಾನುಭಾವರಿಂದ ಯಾವ ಆಕ್ಷೇಪಣೆಯೂ ಬರಲಾರದು." ಎಂದನು.

ದುರ್ಮುಖರಾಜನು ಎರಡು ಕೈಗಳನ್ನೂ ಜೋಡಿಸಿ, "ಅಯ್ಯಾ ಭಲ್ಲೂಕಪ್ರಭುವೇ! ಕೆಲವೇ ಗಂಟೆಗಳ ಕಾಲದೊಳಗೆ ಈ ಲೋಕ ಬಿಡಲಿರುವ ನನ್ನ ಕೊನೇ ಕೋರಿಕೆಯನ್ನು ಅಲ್ಲಗಳೆಯಬೇಡಿ!" ಎಂದು ಬೇಡಿಕೊಂಡನು.

ಕರಡಿ ಮನುಷ್ಯನು ಒಪ್ಪಿಕೊಂಡವನಂತೆ ತಲೆಯಾಡಿಸಿದನು. ಅಗಲೇ ಆಟವಿಕ ಯುವಕನು ಒಂದು ಬಾಣವನ್ನು ಒಂದು ಮರದ ಬೊಡ್ಡೆಗೆ ತಾಗುವಂತೆ ಪ್ರಯೋಗಿಸಿ, "ಆಹಾ! ಕರಡಿ ದೊರೇ! ಆ ಸಾಮಂತ

ನನ್ನು ನನ್ನ ಬಾಣಕ್ಕೇ ಬಿಟ್ಟುಬಿಡಿ. ಅರಣ್ಯದಲ್ಲಿ ಬೇಟೆಯಾಡಿ ಬದುಕುವ ನನ್ನಂಥವರಿಂದ, ನಾವು ಹೊಡೆದ ಹಕ್ಕಿ ಪಕ್ಕಿಗಳಿಗೆಲ್ಲ ತೆರಿಗೆ ವಸೂಲು ಮಾಡುತ್ತಾನೆ. ಆ ಕ್ರೂರನ ಮೇಲೆ ಹಗೆ ತೀರಿಸಲು ನನಗಿದು ಒಳ್ಳೇ ಸಂದರ್ಭ." ಎಂದನು.

ಆದನ್ನು ನೋಡಿ ಕಳ್ಳರ ನಾಯಕ ನಾಗಮಲ್ಲನು ಕತ್ತಿಯನ್ನು ಮೇಲಕ್ಕೆತ್ತಿ ಆಡಿಸುತ್ತ, "ಆ ಸೂರ್ಯ ಭೂಪತಿ ಎಂಬ ಸಾಮಂತ ಯಾವುದಕ್ಕೂ ಹೇಸು ವವನಲ್ಲ. ದಾರೀ ದೋಚಿ ಬದುಕುವ ನಮ್ಮಿಂದ ಕೂಡಾ ಕದ್ದುಕೊಂಡುದರಲ್ಲಿ ಅರ್ಧಭಾಗ ವಸೂಲು ಮಾಡಿಕೊಳ್ಳುತ್ತಾನೆ. ಆ ದುಷ್ಟನೊಂದಿಗೆ ಹೋಲಿಸು ವಾಗ ಈ ದುರ್ಮುಖ ಮಹಾರಾಜರು ಧರ್ಮ ರಾಜನಂಥವರು" ಎಂದನು.

"ಹಾಗಾದರೆ ಆ ಸಾಮಂತನ ತಲೆಯನ್ನೂ ಕೊಂಡೊಯ್ದು ಮಹಾಮಾಂತ್ರಿಕರಿಗೆ ಸಮರ್ಪಿ ಸೋಣ. ಅವರು ಅಂಥವರ ತಲೆಗಳನ್ನೆಲ್ಲಾ ಸಂಗ್ರಹಿಸಿ ಏನು ಯಜ್ಞ ಮಾಡುವರೋ! ನಡೆಯಿರಿ. ಉದಯ ಗಿರಿ ಎಷ್ಟು ದೂರದಲ್ಲಿದೆ?" ಎಂದ ಕೇಳಿದ ಕರಡಿಕಟುಕ.

"ಅಡ್ಡದಾರಿಯಲ್ಲಿ ಹೋದರೆ ಅರ್ಧಗಂಟೆ ದಾರಿ ಯಷ್ಟೇ. ನಾನೇ ಮುಂದಿನಿಂದ ದಾರಿ ತೋರಿಸುತ್ತಾ ಸಾಗುತ್ತೇನೆ. ಭಲ್ಲೂಕ ಮಹಾರಾಜರೆ, ನಿಮ್ಮ ದೊಂದು ಸೊಂಡಿಲಿನ ಆನೇ ತಲೇ ಮೇಲೆ ಏರಿ ಕೊಳ್ಳಲೇ?" ಎಂದ ಆಟವಿಕ ಯುವಕ.

ಕರಡಿಕಟುಕನು "ಏರಿಕೋ" ಎಂದು ಹೇಳಿ, ತಾನೂ ಆನೆಯ ಮೇಲೇರಿ ಕುಳಿತನು. ಉಗ್ರದಂಡ ರಾಕ್ಷಸನು ದಂತಮುರಿದ ಆನೆಯ ಮೇಲೆ ದುರ್ಮುಖ ರಾಜನನ್ನು ಎತ್ತಿ ಕುಳ್ಳಿರಿಸಿ, ಕರಡಿಕಟುಕನೊಂದಿಗೆ, "ಭಲ್ಲೂಕ ಮಾನವಾ, ನಿನ್ನನ್ನು ಕೇಳದೆಯೇ ಈ ರಾಜನನ್ನು ಆನೇ ಮೇಲೆ ಕೂಡಿಸಿದೆನೆಂದು ಸಿಟ್ಟಾಗಬೇಡ. ನಿನ್ನ ನೋಡಿ ನಾನೂ ಹೆದರುತ್ತೇನೆ.



ಇನ್ನು ಕೆಲವು ನಿಮಿಷಗಳಲ್ಲೇ ರಾಜನಾಗುವವನಿಗೆ ಇಷ್ಟಾದರೂ ಮರ್ಯಾದೆ ಇರಲೀ ಅಂತ ಹೀಗೆ ಮಾಡಿದೆ." ಎಂದನು.

ದುರ್ಮುಖರಾಜನ ಆನೆಯ ಮೇಲೆ ಮತ್ತಿಬ್ಬರು ಸೈನಿಕರು ಏರಿಕೊಂಡರು. ಮತ್ತೊಂದು ಆನೆಯ ಮೇಲೆ ಕಳ್ಳರ ನಾಯಕ ನಾಗಮಲ್ಲನೂ, ಅವನ ಅನುಚರರೂ, ಉಳಿದಿಬ್ಬರು ಸೈನಿಕರೂ ಏರಿ ಕೊಂಡರು. ಹೀಗೆ ಅವರು ಹೊರಟಾಗ, ಉಗ್ರದಂಡ ರಾಕ್ಷಸನು ಕಲ್ಲಿನ ಗದೆಯನ್ನು ಹೆಗಲಿಗಾನಿಸಿಕೊಂಡು, ದೊಡ್ಡ ದೊಡ್ಡ ಹೆಜ್ಜೆಗಳನ್ನಿಡುತ್ತ ನಿಂತು ನಿಂತು ಅವರ ಹಿಂದೆಯೇ ಸಾಗಿದನು.

ಅರ್ಧಗಂಟೆಯ ಮೇಲೆ ಅರಣ್ಯವನ್ನು ಹಿಂದೆ ಹಾಕಿ ಅವರೆಲ್ಲ ಒಂದು ಮೈದಾನ ಪ್ರದೇಶವನ್ನು ಸೇರಿದರು. ಅವರ ಇದಿರಿನಲ್ಲಿ ದೊಡ್ಡದೊಂದು ಕೋಟೆಯೂ, ಅದರ ಹಿಂದೆ ಇರುವ ಭವನಗಳ ಮಾಳಿಗೆಗಳೂ ಕಂಡು ಬಂದುವು. ಅದುವೇ ಉದಯ

ಗಿರಿ ನಗರವೆಂದು ಎಲ್ಲರಿಗೂ ಗೊತ್ತಾಯಿತು. ಆ ಕೋಟೆಯನ್ನು ನೋಡಿದ ಕೂಡಲೇ ದುರ್ಮುಖ ರಾಜನ ಮುಖದಲ್ಲಿ ಚಿಂತೆಯಾವರಿಸಿತು. ಅವನು ಕರಡಿಕಟುಕನೊಂದಿಗೆ, "ಅಯ್ಯಾ ಭಲ್ಲೂಕ ಮಹಾ ರಾಜ! ಈಗ ಆ ದ್ರೋಹಿಯಾದ ಸಾಮಂತನ ವಶದಲ್ಲಿ ಸ್ವಲ್ಪ ಅಶ್ವಸೇನೆಯೂ, ಸ್ವಲ್ಪ ಕಾಲ್ಬಲವೂ ಇದ್ದೇ ಇರುತ್ತದೆ. ಆ ಸೇನೆಯನ್ನು ಇದಿರಿಸಲಿಕ್ಕೆ ನಮ್ಮಲ್ಲಿ ಈಗ ಹತ್ತುಮಂದಿ ಕೂಡಾ ಇಲ್ಲವಲ್ಲಾ? ಇಂತಹ ಸಂದರ್ಭದಲ್ಲಿ ನಮಗೆ ಒಳಗೆ ಹೋಗಲು ಸಾಧ್ಯವಾದೀತೆ? ಹೇಗೆ ವಿಜಯ ಸಾಧಿಸು ವುದೋ?" ಎಂದನು.

"ಈ ಅನುಮಾನ ಈಗ ಬರುತ್ತದೇನು ನಿನಗೆ?" ಎಂದು ಕರಡಿಕಟುಕ ಕಣ್ಣು ತಿರುಗಿಸಿ, ತನ್ನ ಚಪ ಗೊಡಲಿಯನ್ನು ಮೇಲೆತ್ತಿ, "ಇಲ್ಲಿ ಮುಂದೆ ಬಾರಯ್ಯ ಉಗ್ರದಂಡಾ!" ಎಂದು ರಾಕ್ಷಸನನ್ನು ಕರೆದು, ದುರ್ಮುಖನಿಗೆ ಬಂದ ಸಂದೇಹವನ್ನು ಕುರಿತು ಹೇಳಿದನು.

ಉಗ್ರದಂಡ ರಾಕ್ಷಸನು ಕಲ್ಲಿನ ಗದೆಯನ್ನು ನೆಲಕ್ಕೆ ಬಡೆದು, "ಅದಕ್ಕೇಕೆ ಸಂದೇಹ? ನಿನ್ನ ಚಪ ಗೊಡಲಿಯೂ, ನನ್ನ ಗದೆಯೂ ಎಷ್ಟುಮಂದಿ ಸೈನಿಕರನ್ನಾದರೂ ಹತಮಾಡಬಲ್ಲುವು. ಸುಮ್ಮನೇ ರಕ್ತಪಾತವಾಗದಂತೆ, ನಗರವನ್ನು ದುರಾಕ್ರಮಣ ಮಾಡಿದ ಆ ಸಾಮಂತನನ್ನು ಹಿಡಿದು ತಲೆ ಹಾರಿಸುವ ದಾರಿ ಏನಾದರೂ ಇದ್ದರೆ ಒಳ್ಳೇದು. ಸುಮ್ಮನೆ ಪಾಪದ ಸೈನಿಕರನ್ನೆಲ್ಲಾ ಕೊಲ್ಲದಿರುವ ಆಲೋಚನೆ ಯಿದ್ದರೆ ಹೇಳಿರಿ!" ಎಂದನು.

ರಾಕ್ಷಸನ ಮಾತು ಕೇಳಿ ಕಳ್ಳರೊಡೆಯ ನಾಗ ಮಲ್ಲನು ಆನೆಯ ಮೇಲೆ ಎದ್ದು ನಿಂತು, "ಅಂತಹ ದಾರಿಯನ್ನು ಆಗಿನಿಂದಲೇ ನಾನು ಆಲೋಚಿಸಿ ಕೊಂಡಿದ್ದೇನೆ. ನಾನೂ ನನ್ನ ಅನುಚರರಿಬ್ಬರೂ ಮುಂದೆ ಹೋಗಿ, ಅವನ ಶತ್ರು ದುರ್ಮುಖ ರಾಜರನ್ನು ಬಂಧಿಸಿ ತಂದಿದ್ದೇವೆ. ಅದಕ್ಕಾಗಿ ಬಹುಮಾನ ಕೊಡಬೇಕೆಂದು ಕೇಳುತ್ತೇವೆ. ಆಗ ಅವನೇ ಕೆಲಮಂದಿ ಅಂಗರಕ್ಷಕರೊಂದಿಗೆ ಇಲ್ಲಿಗೆ ಬರಬಹುದು." ಎಂದನು.

"ಇದು ಒಳ್ಳೇ ಆಲೋಚನೆ. ಉರುಳು ಚೆನ್ನಾಗಿ ಮಾಡಿಟ್ಟಿರುವಿ. ಹುಂ, ಹೊರಡು ಹಾಗಾದರೆ" ಎಂದ ಉಗ್ರದಂಡ ರಾಕ್ಷಸ.

ನಾಗಮಲ್ಲನೂ ಅವನ ಅನುಚರರೂ ಆನೆಯನ್ನು ದೌಡಾಯಿಸುತ್ತ ಕೋಟೆಯ ಕಡೆಗೆ ಸ್ವಲ್ಪದೂರ ಹೋದರಷ್ಟೇ; ಆಗ ಅಕಸ್ಮಾತ್ತಾಗಿ ಕೋಟೆಯ ಮಹಾದ್ವಾರವು ಒಮ್ಮೆಗೇ ಅಗಲಕ್ಕೆ ತೆರೆದು ಕೊಂಡಿತು. ಒಳಗಿನಿಂದ ಕೆಲಮಂದಿ ಅಶ್ವಿಕರೂ, ಸೈನಿಕರೂ ಹೊರಗೆ ಬರತೊಡಗಿದರು.





# ಕರಡಿಕೆಂಗಣ್ಣ

## ೧೧

[ದುರ್ಮುಖರಾಜನು ಅರಣ್ಯದಲ್ಲಿ ತಿರುಗುತ್ತಿದ್ದಾಗ ಅವನ ರಾಜಧಾನಿಯನ್ನು ಸಾಮಂತರಾಜನು ಆಕ್ರಮಿಸಿ ಕೊಂಡನು. ತನ್ನ ತಲೆಯನ್ನು ಕರಡಿಮನುಷ್ಯನು ಕಡಿಯುವುದಕ್ಕೆ ಮೊದಲು ತಾನು ಕೆಲವು ಕ್ಷಣಗಳಾದರೂ ರಾಜನಾಗಬೇಕೆಂದು ಅವನು ಕೇಳಿಕೊಂಡನು. ಅದಕ್ಕೆ ಒಪ್ಪಿ ಕರಡಿಮನುಷ್ಯನೂ ಉಗ್ರದಂಡ ರಾಕ್ಷಸನೂ ಅವನ ರಾಜಧಾನಿಗೆ ಬಂದರು. ಆಗಲೇ ಕೋಟೆಯೊಳಗಿನಿಂದ ಕುದುರೇ ಸವಾರರೂ ಸೈನಿಕರೂ ಹೊರಗೆ ಬಂದರು.]

ಕೈಗಳಲ್ಲಿ ಫಳಫಳಿಸುವ ಕೂರಾದ ಈಟಿಗಳನ್ನು ಕುಣಿಸಿಕೊಂಡು ಬರುವ ಅಶ್ವಿಕರನ್ನೂ, ಅವರ ಪಕ್ಕದಲ್ಲಿ ಕತ್ತಿಗಳನ್ನು ಝಳಪಿಸುತ್ತ ವೀರ ನಡಿಗೆಯಿಂದ ಬರುತ್ತಿರುವ ಕಾಲ್ಬಲವನ್ನೂ ನೋಡಿ ಕಳ್ಳರ ನಾಯಕನಾದ ನಾಗಮಲ್ಲನೂ, ಅವನ ಇಬ್ಬರು ಅನುಚರರೂ ಅದುರಿಬಿದ್ದು ಸ್ತಬ್ಧರಾದರು.

ಹಾಗೆಯೇ ಆನೆಯ ಮೇಲಿದ್ದ ದುರ್ಮುಖನ ಸೈನಿಕರೂ ಮೊದಲು ಹೆದರಿ. ಆ ಮೇಲೆ ಈಗೇನು ಮಾಡುವುದೆಂದು ತಮ್ಮೊಳಗೆ ಗುಸುಗುಸು ಮಾತಾಡ ತೊಡಗಿದರು.

ಅವರನ್ನು ನೋಡಿ ಕಳ್ಳ ನಾಗಮಲ್ಲನಿಗೆ ವಿವೇಕ ಮೂಡಿತು. ತಾನು ಬೆದರಿದಂತೆ ತೋರಿಸಬಾರದೆಂದು ಕೊಂಡು, ತನ್ನ ಅನುಚರರನ್ನು ನೋಡಿ, "ಇದೇನಿದು? ಆ ಸಾಮಂತನ ಇಷ್ಟುಮಂದಿ ಸೈನಿಕರು ಹೀಗೆ ಯುದ್ಧಕ್ಕೇ ಬರುವರೆಂದು ನಾನು ಊಹಿಸಲೇ ಇಲ್ಲ. ಬರಲಿಬಿಡಿ. ನಮಗೇನೂ ಜೀವಕ್ಕೆ ಭಯವಿಲ್ಲ. ನಮ್ಮ ಕಡೆಯವರಾಗಿ ಕಟುಕಕರಡಿಯುವನಿದ್ದಾನೆ. ಅವನಿಗಿಂತ ಮೇಲೆ, ಉಗ್ರದಂಡ ರಾಕ್ಷಸನಿದ್ದಾನೆ. ಅವರಿಬ್ಬರಿಗೆ ಈ ಸೈನ್ಯ ಒಂದು ಲೆಕ್ಕವೇ ? ಸುಮ್ಮನೆ ರಕ್ತವಷ್ಟು ಹರಿಯುತ್ತೆ!" ಎಂದನು.



"ಆನೆಯನ್ನು ಹಿಂದಕ್ಕೆ ತಿರುಗಿಸಿಬಿಡೋಣ ವೇನು ?" ಎಂದು ಒಬ್ಬ ಕಳ್ಳನು ಕೇಳಿದನು.

"ಬೇಡ ಬೇಡ. ಹಾಗೆ ಮಾಡಿದರೆ ಎಲ್ಲರ ದೃಷ್ಟಿಯಲ್ಲಿಯೂ ನಾವು ಮೂರ್ಖರಾಗಿ ಹೋಗುತ್ತೇವೆ. ಈಗ ನಾನು ತಲೆ ಹಾಕಿದ ಉಪಾಯ ಎಷ್ಟರಮಟ್ಟಿಗೆ ಕೆಲಸ ಮಾಡುತ್ತದೋ ಪ್ರಯತ್ನಿಸಿ ನೋಡೋಣ." ಎಂದನು ನಾಗಮಲ್ಲ.

"ಹಾಗಾದರೆ ಆ ಸೈನಿಕರು ನಮ್ಮನ್ನು ಸಮೀಪಿಸುವುದಕ್ಕೆ ಮೊದಲೇ ಏನೋ ಒಂದು ಮಾಡಿಬಿಡು." ಎಂದು ಹೇಳಿ ಒಬ್ಬ ಕಳ್ಳನು, ಗುಸುಗುಸು ಮಾತಾಡುತ್ತಿರುವ ಸೈನಿಕರನ್ನು ನೋಡಿ, "ಓಹೋಯ್! ಏನಿದು ನಿಮ್ಮ ಗುಸುಗುಸು ಮಾತು! ಶತ್ರುಗಳೊಂದಿಗೆ ಸೇರಿಕೊಳ್ಳುವ ಉಪಾಯ ಹೊಸೆಯುವಿರೇನು ? ಮೈಯಲ್ಲಿ ಒಂದು ಎಲುವೂ ಉಳಿಯಲಾರದು! ಎಚ್ಚರ!" ಎನ್ನುತ್ತ ಕತ್ತಿಯನ್ನು ಎತ್ತಿ ಹಿಡಿದನು.

ನಾಗಮಲ್ಲನೂ ಆ ಸೈನಿಕರನ್ನು ಕೋಪದಿಂದ ನೋಡಿ, ತನ್ನ ಮುಂಡಾಸನ್ನು ಬಿಚ್ಚಿ ಗಾಳಿಯಲ್ಲಿ ಕೊಡರಿ ತೇಲಿಸಿ, ಜಾಂಡಾದಂತೆ ಎತ್ತಿ ಬೀಸುತ್ತ, ಯುದ್ಧಕ್ಕೆ ಬರುವ ಸೈನಿಕರನ್ನು ಉದ್ದೇಶಿಸಿ, "ನಿಲ್ಲಿರಿ ನಿಲ್ಲಿರಿ! ನಾನು ಮಿತ್ರನಾಗಿ ಬಂದಿದ್ದೇನೆ! ಶತ್ರುವಾಗಿ ಅಲ್ಲ! ನೀವೆಲ್ಲಾ ಇರುವ ಜಾಗದಲ್ಲೇ ನಿಂತುಬಿಡಿ!" ಎಂದು ಕಂಠ ಹರಿಯುವಷ್ಟು ಗಟ್ಟಿಯಾಗಿ ಕೂಗಿದನು.

ವೇಗವಾಗಿ ಬರುವ ಸೈನಿಕರು ವೇಗವನ್ನು ಕಡಿಮೆ ಮಾಡಿದರು. ನಾಗಮಲ್ಲನು ತನ್ನ ಕೂಗು ಮಾತನ್ನು ಮುಂದು ವರಿಸಿದನು: "ನೀವೆಲ್ಲಾ ಎಲ್ಲಿದ್ದೀರೋ ಅಲ್ಲೇ ನಿಂತು ನನ್ನ ಮಾತು ಕೇಳಿರಿ. ನಿಮ್ಮ ಮಹಾರಾಜರು ಎಲ್ಲಿದ್ದಾರೆ? ನಾವು ನಿಮ್ಮ ಶತ್ರುವಾದ ಹಳೆಯ ರಾಜ ಗತಿಗೇಡಿ ದುರ್ಮುಖನನ್ನು ಬಂಧಿಸಿ ಜೀವದೊಂದಿಗೆ ತಂದಿದ್ದೇವೆ. ನಿಮ್ಮ ಪ್ರಭುಗಳು ಏನಾದರೂ ಒಳ್ಳೆಯ ಬಹುಮಾನ ಕೊಟ್ಟರೆ ಆವನನ್ನು ನಿಮಗೆ ಒಪ್ಪಿಸುತ್ತೇವೆ. ಈ ಸಂಗತಿಯನ್ನು ನಿಮ್ಮ ಮಹಾರಾಜರಿಗೆ ತಿಳಿಸಿರಿ!"

ಈ ಮಾತುಗಳನ್ನು ಕೇಳಿ ಆಶ್ವಿಕರೂ, ಪದಾತಿ ಸೈನಿಕರೂ ಹಾಗೆಯೇ ನಿಂತರು. ಆಶ್ವಿಕರ ನಾಯಕನು ಉಳಿದವರನ್ನು ಹಿಂದೆಯೇ ಬಿಟ್ಟು ತಾನು ಮಾತ್ರ ಸ್ವಲ್ಪ ಮುಂದೆ ಬಂದು, "ನೀನು ಹೇಳುವ ಮಾತುಗಳನ್ನು ನಾವು ನಂಬಬೇಕೇನು ? ನಿನ್ನ ಮಾತಿನಲ್ಲಿ ಏನಾದರೂ ಮೋಸವಿದ್ದರೆ ? ನಾವು ಆಗಿನಿಂದಲೂ ನಿಮ್ಮ ಬರುವಿಕೆಯನ್ನು ಗಮನಿಸಿದ್ದೇವೆ. ಕೋಟೆಯ ಮೇಲಿನಿಂದ ನೋಡಿದ್ದೇವೆ. ನಮ್ಮ ಪ್ರಭುಗಳೂ ಮಂತ್ರಿಗಳೂ ನೋಡಿದ್ದಾರೆ. ನಿಮ್ಮನ್ನೆಲ್ಲ ಹತಮಾಡಲಿಕ್ಕೇ ನಮ್ಮನ್ನು ಕಳಿಸಿದ್ದಾರೆ. ನಿನ್ನ ಮಾತು ನಿಜವೆಂದು ಹೇಗೆ ನಂಬಬೇಕು?" ಎಂದನು.

"ಮೋಸಮಾಡುವವರಾದರೆ ಈ ಹಚ್ಚ ಹಗಲು ವೇಳೆಯಲ್ಲಿ, ಕೆಲವೇ ಮಂದಿಗಳೊಂದಿಗೆ ನಿಮ್ಮ ಕೋಟೆಯ ಕಡೆಗೆ ಬರಬಲ್ಲೆವೇ ? ನೀವು ಆಕ್ರಮಿಸಿದ

ಈ ರಾಜಧಾನಿ ಹಳೆಯ ಯಜಮಾನನಾದ ದುರ್ಮುಖರಾಜನು, ಬದುಕಿರುವವರೆಗೆ ಎಂದಿಗಾದರೂ ನಿಮಗೆ, ಅಪಾಯವೇ ಅಂತ ಅಂದುಕೊಂಡಿದ್ದೇವೆ. ಬಡವರಾದ್ದರಿಂದ ಬಹುಮಾನದ ಆಶೆ. ಒಂದು ವೇಳೆ ನೀವು ನಮಗೆ ತಕ್ಕ ಬಹುಮಾನ ಕೊಟ್ಟು ದುರ್ಮುಖನನ್ನು ಕೊಂಡುಕೊಳ್ಳದೇ ಹೋದರೆ, ನಾವು ಖೈದಿಯೊಂದಿಗೆ ಆರಣ್ಯದೊಳಗೇ ಹೋಗಿಬಿಡುತ್ತೇವೆ." ಎಂದನು ಕಳ್ಳ ನಾಗಮಲ್ಲ.

ನಾಗಮಲ್ಲನ ಮಾತುಗಳನ್ನು ಕೇಳುತ್ತಿದ್ದ ಆಶ್ವಿಕ ನಾಯಕನು, ಏನು ಮಾಡಬೇಕೆಂಬ ಆಲೋಚನೆಗೆ ಬಿದ್ದವನಂತೆ ಸ್ವಲ್ಪ ತಲೆಕೆರೆದುಕೊಂಡನು. ಅದು ವೀರನ ಲಕ್ಷಣವಲ್ಲವೆಂಬುದು ನೆನಪಾಗಿ "ಓಹೋ!" ಎಂದು ಗಟ್ಟಿಯಾಗಿ ಗರ್ಜಿಸಿ, ಮೀಸೆಯನ್ನು ಒಮ್ಮೆ ತೀಡಿ, ಕತ್ತಿಯನ್ನು ನೆಗಹಿ, "ಎಲೋ! ಇಷ್ಟೆಲ್ಲಾ ಪುರಾಣ ಹೇಳಿದವನು ನೀನು ಯಾರೆಂಬುದನ್ನು ಹೇಳಲೇ ಇಲ್ಲ! ನಿನ್ನ ಹೆಸರೇನು?" ಎಂದನು.

ಅವನ ರೀತಿಯನ್ನು ನೋಡಿ, ನಾಗಮಲ್ಲನು ಮನಸ್ಸಿನೊಳಗೇ ನಕ್ಕನು. ಈ ಆಶ್ವಿಕ ವೀರನಿಗೆ ಚುರುಕು ಕಡಿಮೆ ಮತ್ತು ಬುದ್ಧಿಯೂ ತುಸು ಮಂದವೆಂದು ಅನಿಸಿತು. ನಾಗಮಲ್ಲನು ತನ್ನ ತಲೆಗೆ ಮುಂಡಾಸನ್ನು ಬಿಗಿಯಾಗಿ ಸುತ್ತಿಕೊಳ್ಳುತ್ತ, "ನನ್ನ ಹೆಸರು ನಾಗಮಲ್ಲ. ಎಲ್ಲರೂ ನನ್ನನ್ನು ನಾಗಮಲ್ಲ ದೊರೆಯೆಂದೇ ಕರೆಯುತ್ತಾರೆ. ಅರಣ್ಯದಲ್ಲೇ ವಾಸ. ಅಲ್ಲಿರುವ ಬೆಲೆ ಬಾಳುವ ಪ್ರಾಣಿಗಳನ್ನೂ, ಬೆಲೆಯುಳ್ಳವರಾದ ಮಹಾ ಮಹಾ ಶ್ರೀಮಂತರನ್ನೂ ಹಿಡಿದು ಅವರನ್ನು ಕೊಂಡುಕೊಳ್ಳ ಬಲ್ಲಂಥವರಿಗೆ ಮಾರುವುದು ನನ್ನ ಮುಖ್ಯವೃತ್ತಿ." ಎಂದನು.

"ಹಾಗೆ ಹೇಳು ಮತ್ತೆ. ಗೊತ್ತಾಯಿತು ಈಗ. ಇಲ್ಲೇ ಇರು. ನೀನು ಹೇಳಿದ ಸಂಗತಿಯನ್ನು ನಮ್ಮ ಪ್ರಭುಗಳಿಗೆ ತಿಳಿಸಿ ಅವರ ಅಪ್ಪಣೆ ಕೇಳಿಬರುತ್ತೇನೆ." ಎಂದು ಹೇಳಿ ಆಶ್ವಿಕನಾಯಕನು ಕುದುರೆಯನ್ನು



ಹಿಂದಕ್ಕೆ ತಿರುಗಿಸುತ್ತ, "ಲೋ ನಾಗಮಲ್ಲಾ, ನಿನ್ನ ಹಿಂದೆ ಗುಂಪು ಕಟ್ಟಿಕೊಂಡಿರುವವರಲ್ಲಿ ಒಬ್ಬ ರಾಕ್ಷಸಾಕಾರದವನೂ, ಕೊಡಲಿ ಹಿಡಿದಿರುವ ಕರಡಿಯೊಂದೂ ಇದೆಯಲ್ಲಾ? ಯಾರವರೂ? ನಮ್ಮ ಮಂತ್ರಿಗಳು ಹೇಳುವ ಹಾಗೆ ವೇಷ ಹಾಕಿಕೊಂಡಿರುವ ಕಾಡು ಮನುಷ್ಯರೇನಾ?" ಎಂದು ಕೇಳಿದನು.

"ಆ! ಆ! ಮಹಾರಾಜರು ನಮ್ಮನ್ನು ಸಂತೋಷಪಡಿಸಿದರೆ ನಾವೂ ನಮ್ಮ ಆಟತೋರಿಸಿ ಅವರನ್ನೂ ಸಂತೋಷಪಡಿಸಲು ಬಂದಿದ್ದೇವೆ. ಅವರು ಯಾರೂ ಅಂತ ಗೊತ್ತಾಗಬೇಕಾದರೆ ನಿಮ್ಮ ಮಹಾರಾಜರೇ ಇಲ್ಲಿಗೆ ಬರಲಿ. ಅವರ ಕೈಯಿಂದಲೇ ಬಹುಮಾನದ ಹಣಪಡೆದು, ಹಳೆಯ ದುರ್ಮುಖರಾಜನನ್ನು ಅವರಿಗೆ ಒಪ್ಪಿಸಿ ಆ ವೇಷಧಾರಿಗಳ ಪರಿಚಯವನ್ನೂ ಮಾಡಿಸುತ್ತೇವೆ." ಎಂದನು ನಾಗಮಲ್ಲ ನಗುತ್ತಾ.

ಆಶ್ವಿಕನಾಯಕನು ತೃಪ್ತಿಯಿಂದ ತಲೆಯೊಲಿದು, ಕತ್ತಿಯನ್ನು ಮೇಲೆತ್ತಿ ಸೈನಿಕರೊಂದಿಗೆ, "ನೀವೆಲ್ಲಾ



ಇದ್ದ ಜಾಗದಿಂದ ಒಂದಡಿ ಮುಂದೆಯೂ ಹಿಂದೆಯೂ ಇಡಕೂಡದು. ಹಾಗೆಯೇ ನಿಂತಿರಿ. ಕದಲಿದಿರೆಂದರೆ ನಿಮ್ಮ ತಲೆಗಳು ಮುಂಡದ ಮೇಲಿರಲಿಕ್ಕಿಲ್ಲ. ನಮ್ಮ ಮಂತ್ರಿಗಳು ಊಹಿಸಿದಂತೆ ಅವರೆಲ್ಲ ಕೇವಲ ವೇಷಧಾರಿಗಳೇ. ನಾನೀಗಲೇ ಹೋಗಿ ಮಹಾರಾಜರೊಡನೆ ಸಂಗತಿ ಸಂದರ್ಭಗಳನ್ನು ಹೇಳಿ ಬಂದು ಬಿಡುತ್ತೇನೆ." ಎಂದು ಹೇಳಿ, ತನ್ನ ಕುದುರೆಯನ್ನು ಕೋಟೆಯ ದ್ವಾರದ ಕಡೆಗೆ ಓಡಿಸಿಕೊಂಡು ಹೋದನು.

ಕೋಟೆಯ ಗೋಡೆಯ ಮೇಲಿರುವ ಉನ್ನತವಾದೊಂದು ಬುರುಜಿನ ಪಕ್ಕದಲ್ಲಿ ಮಂತ್ರಿಯೊಂದಿಗೆ ನಿಂತು ಎಲ್ಲವನ್ನೂ ನೋಡಿಕೊಂಡಿದ್ದ ಸಾಮಂತನಾದ ಸೂರ್ಯಭೂಪತಿ, ಆಶ್ವಿಕನಾಯಕನು ತಮ್ಮ ಬಳಿಗೆ ಬಂದಕೂಡಲೇ, "ಏನಿದು ನಿನ್ನ ಮೂರ್ಖತ್ವ! ಶತ್ರುಗಳ ಮೇಲೆ ದಾಳಿಮಾಡಿ ಹತಾಹತ ಮಾಡುವುದನ್ನು ಬಿಟ್ಟು ಅವರೊಡನೆ ರಾಯಭಾರ ನಡೆಸಿಕೊಂಡಿರುವೆಯಾ ?" ಎಂದು ಅಧಟಿ ಕೇಳಿದನು.

ಆಶ್ವಿಕ ನಾಯಕನು ನಡೆದ ಸಂಗತಿಯನ್ನು ತುಂಬ ವಿನಯದಿಂದ ಹೇಳಿ, "ಹೀಗೆ ಅವರು ಕೇವಲ ವೇಷಧಾರಿಗಳೇ. ಯುದ್ಧಮಾಡಲು ಬಂದವರೇನಲ್ಲ. ಏನೋ ಸ್ವಲ್ಪ ಧನವನ್ನು ಕೊಟ್ಟರೆ ದುರ್ಮುಖ ರಾಜನನ್ನು ನಮಗೆ ಒಪ್ಪಿಸಿ ಹೋಗಿಬಿಡುತ್ತಾರೆ. ಇದು ಹೊಸ ಸಂಗತಿಯಾದುದರಿಂದ ತಮಗೆ ಅರಿಕೆ ಮಾಡಬೇಕಾದುದು ನನ್ನ ಕರ್ತವ್ಯವಲ್ಲವೇ ಮಹಾರಾಜರೇ?" ಎಂದನು.

ದುರ್ಮುಖರಾಜನ ಹೆಸರು ಕೇಳುತ್ತಲೇ ಆ ಸಾಮಂತರಾಜನ ಹೃದಯಕ್ಕೆ ಹುಳಿ ಹಿಂಡಿದ ಹಾಗಾಯಿತು. ಅವನು ಇನ್ನಿಷ್ಟು ಕೋಪದಿಂದ, "ಆ ರಾಜ ಇನ್ನೂ ಬದುಕಿದ್ದಾನೇನು ? ಕಾಡಿನೊಳಗೆ ಯಾವುದೋ ಕ್ರೂರ ಮೃಗಗಳ ಹೊಟ್ಟೆಗೆ ಹೋದನೆಂದು ಕಣ್ಣಾರೆ ಕಂಡಹಾಗೆ ನಮ್ಮ ಗೂಢಚಾರರು ಹೇಳಿದರಲ್ಲಾ? ಸುಳ್ಳು ಸಮಾಚಾರ ಹೇಳಿ ಇನಾಮು ಹೊಡೆದುಕೊಂಡ ಅವರ ತಲೆಗಳನ್ನು ಮೊದಲು ಕಡಿದುರುಳಿಸಬೇಕು, ಮಹಾಮಂತ್ರಿ, ಈಗಲೇ ಹೋಗಿ ಆ ಗೂಢಚಾರಿಗಳ ತಲೆಗಳನ್ನು ಹಾರಿಸಿಬಿಡು !" ಎಂದನು.

ಮಂತ್ರಿ ಮುಖದಲ್ಲಿ ವಿಚಾರವನ್ನು ವ್ಯಕ್ತಪಡಿಸುತ್ತ, "ಮಹಾರಾಜರೆ, ಆ ಇಬ್ಬರು ಗೂಢಚಾರರೂ ಸದ್ಯ ರಾಜಧಾನಿಯಲ್ಲಿಲ್ಲ. ಅವರನ್ನು ನಾನೇ ಅರಣ್ಯಕ್ಕೆ ಕಳುಹಿಸಿದ್ದೇನೆ. ಇನ್ನೊಂದು ವಿಷಯ ಹೇಳುತ್ತೇನೆ. ಸ್ವಲ್ಪ ಆಳವಾಗಿ ಆಲೋಚಿಸುವಾಗ, ಆ ಮಹಾಕಾಯದವನು ನಿಜವಾದ ರಾಕ್ಷಸನೇ ಎಂದೂ, ಆ ಕರಡಿ ಕೂಡಾ ಯುದ್ಧದ ತರಬೇತಿ ಪಡೆದಿರುತ್ತದೆಂದೂ ಅನುಮಾನವಾಗುತ್ತದೆ. ಎಲ್ಲಕ್ಕಿಂತಲೂ ದೊಡ್ಡ ಸಂಶಯವೇನೆಂದರೆ, ಅವರು ಬಂಧಿಸಿ ತಂದಿದ್ದೇವೆಂಬವನು ನಿಜವಾದ ದುರ್ಮುಖನು ಅಲ್ಲದೇ ಹೋದರೆ, ಸುಮ್ಮನೆ ಧನನಷ್ಟ. ನಾವು ದುರ್ಮುಖನಿಗೆ ಹೆದರಿಕೊಂಡೇ

ಇದ್ದೇವೆಂಬುದನ್ನು ಡಂಗುರ ಹೊಡೆದು ಸಾರಿದ ಹಾಗಾದೀತಲ್ಲ ? " ಎಂದನು.

ಮಂತ್ರಿಯ ಮಾತು ಕೇಳಿ ಸಾಮಂತ ಸೂರ್ಯ ಭೂಪತಿಗೆ ಕೋಪವು ಇನ್ನೂ ಹೆಚ್ಚಿತು. "ನಾನು ಈ ಕೋಟೆಯನ್ನು ಆಕ್ರಮಿಸುವಾಗ ನೀನು ಕೊಟ್ಟ ಸಲಹೆಗಳಿಗೆ ಮೆಚ್ಚಿ ನಿನಗೆ ಮುಖ್ಯಮಂತ್ರಿ ಪದವಿ ಕೊಟ್ಟಿದ್ದು ನನ್ನದೇ ತಪ್ಪಾಯಿತು. ನೀನು ಕೇವಲ ಒಬ್ಬ ಸಾಮಂತನಿಗೆ ಸಲಹೆ ಕೊಡಬಹುದು. ಅಷ್ಟೇ ಹೊರತು ಮಹಾರಾಜನ ಮಂತ್ರಿಯಾಗಿರಲು ಅರ್ಹನೇ ಅಲ್ಲ." ಎಂದು ನಿಂದಿಸಿ, ಆಶ್ವಿಕ ನಾಯಕನೊಂದಿಗೆ, "ಮಹಾ ಸೇನಾನೀ ! ನೀನು ಮಾಡಿದ್ದು ತಪ್ಪೇನಲ್ಲ ಬಿಡು. ಕೇವಲ ಹತ್ತು ಮಂದಿ ಕೂಡಾ ಇಲ್ಲದ ಆ ಕಾಡು ಜನರೊಂದಿಗೆ ನಮಗೇನು ರಾಯಭಾರ ಬೇಕಾಗಿದೆ ? ಮರ್ಯಾದೆಯಾಗಿ ಶರಣಾಗಬೇಕೆಂದು ಹೇಳು. ತಪ್ಪಿದರೆ ಹೆಡೆ ಮುರಿಗೆಕಟ್ಟಿ ಎಳೆದುಕೊಂಡು ಬಾ. ಹೋಗು !" ಎಂದನು.

ಚಂಚಲ ಸ್ವಭಾವದ ಆಶ್ವಿಕನಾಯಕನು ಮತ್ತೇನೋ ಸಂದೇಹದಿಂದ, "ಆ ಮಹಾಕಾಯದವನು ವೇಷಧಾರಿಯೇ ಆದರೂ, ಅರಣ್ಯದಲ್ಲಿ ಯಾವನೋ ಒಬ್ಬ ರಾಕ್ಷಸನಿರುವನೆಂದು ಹೇಳುವುದು ಕೇಳಿದ್ದೇವೆ. ಇವನು ನಿಜವಾದ ರಾಕ್ಷಸನೇ ಆಗಿದ್ದರೆ ಅಪಾಯವಾಗಲಿಕ್ಕಿಲ್ಲವೇ ಪ್ರಭುಗಳೇ ? " ಎಂದು ತಗ್ಗಿದ ದನಿಯಿಂದ ಕೇಳಿದನು.

ಸೂರ್ಯಭೂಪತಿ ಹಲ್ಲು ಕಡಿದು, "ನಿನ್ನೊಂದಿಗಿರುವ ಸೈನ್ಯದಿಂದ ಒಬ್ಬ ರಾಕ್ಷಸನನ್ನೇನು, ನೂರು ಮಂದಿ ರಾಕ್ಷಸರನ್ನೂ ಹಿಡಿದು ಬಂಧಿಸಬಹುದು. ನಿಮಗೆ ಧೈರ್ಯ ಬರಬೇಕಾದರೆ ನಾನೇ ಹೊರಡಬೇಕು. ಎಲ್ಲಿ ನನ್ನ ಯುದ್ಧಾಶ್ವ ? ಸಿದ್ಧವಾಗಲಿ !" ಎಂದವನೇ ಆ ಬುರುಜಿನ ಮೇಲಿನಿಂದ ಬೇಗಬೇಗನೇ ಕೆಳಗಿಳಿದನು. ಅವನ ಹಿಂದೆಯೇ ಮಂತ್ರಿಯೂ, ಆಶ್ವಿಕನಾಯಕನೂ ಕೆಳಗೆ ಬಂದರು.



ಸೇವಕನೊಬ್ಬನು ಓಡಿ ಹೋಗಿ ಕುದುರೆಯನ್ನು ತಂದ ಕೂಡಲೇ ಸೂರ್ಯಭೂಪತಿ ಅದರ ಮೇಲೆ ಟಣ್ಣನೆ ಹಾರಿ ಕುಳಿತನು. ಪಕ್ಕದಲ್ಲಿದ್ದ ಇನ್ನೊಂದು ಕುದುರೆಯ ಮೇಲೆ ಮಂತ್ರಿಯೂ ಏರಿದನು. ಮುಂದಾಗಿ ಸೂರ್ಯಭೂಪತಿಯೂ, ಅವನ ಪಕ್ಕದಲ್ಲಿ ಮಂತ್ರಿಯೂ, ಅವರ ಹಿಂದೆ ಸೇನಾನಿಯೂ ಹೊರಟು ಕೋಟೆಯ ದ್ವಾರವನ್ನು ದಾಟಿ ಮೈದಾನ ಪ್ರದೇಶಕ್ಕೆ ಮುಟ್ಟಿದರು.

ರಾಜನೇ ಬರುವುದನ್ನು ನೋಡಿ ಕಳ್ಳರ ನಾಯಕ ನಾಗಮಲ್ಲನಿಗೆ ಬಹಳ ಸಂತೋಷವಾಯಿತು. ಅವನು ಉತ್ಸಾಹದಿಂದ, "ಆಹಾ ! ನನ್ನ ಉಪಾಯ ನೆರವೇರಿತು. ಆ ಸಾಮಂತರಾಜ, ನಮ್ಮ ಬಲೆಗೆಬೀಳಲು ಬರುತ್ತಿದ್ದಾನೆ !" ಎಂದನು.

"ಈ ಮೂವರನ್ನೂ ಬಂಧಿಸಿ ಹಿಡಿದುದಕ್ಕೆ ದುರ್ಮುಖರಾಜನಿಂದ ಏನಾದರೂ ಬಹುಮಾನ ಸಿಗುತ್ತದೆ ಅಲ್ಲವೆ ಒಡೆಯಾ ?" ಎಂದು ಉಳಿದ



ಕಳ್ಳರಲ್ಲೊಬ್ಬನು ಕೇಳಿದನು. "ಕೊಡಲೇಬೇಕಲ್ಲ ?" ಎಂದ ಇನ್ನೊಬ್ಬ ಕಳ್ಳ ನಗುತ್ತ.

"ಬರಿಯ ಬಹುಮಾನದಲ್ಲೇ ಇದ್ದೀರಿ ನೀವು. ನಿಮಿಗ್ಬಿಬ್ಬರಿಗೂ ದುರ್ಮುಖರಾಜನು ಒಂದು ಸಂಸ್ಥಾನವನ್ನೇ ಕೊಡುತ್ತಾನೆ" ಎಂದು ಪಕ್ಕದಲ್ಲಿದ್ದ ಸೈನಿಕರಿಬ್ಬರು ಒರೆಗಳಿಂದ ಕತ್ತಿಯನ್ನೆತ್ತಲು ನೋಡಿದರು. ಅಷ್ಟರೊಳಗೆ ನಾಗಮಲ್ಲನು ಸುಮ್ಮನಿರುವಂತೆ ಅವರನ್ನು ಎಚ್ಚರಿಸಿದನು.

ಸಾಮಂತ ಸೂರ್ಯಭೂಪತಿ ನಾಗಮಲ್ಲನ ಆನೆಯ ಸಮೀಪಕ್ಕೆ ಬಂದು, "ಎಲೋ, ನೀನು ಹೇಳಿದ್ದನ್ನೆಲ್ಲಾ ನಮ್ಮ ಸೇನಾಪತಿ ನನಗೆ ತಿಳಿಸಿದ್ದಾನೆ. ನನ್ನ ರಾಜ್ಯದೊಳಗೆ, ನನ್ನ ಕೋಟೆಯ ಮುಂದೆ ಸೇರಿ ಮಹಾರಾಜನಾದ ನನ್ನೊಂದಿಗೆ ವ್ಯಾಪಾರದ ಚೌಕಾಸಿ ಮಾಡುವಿಯೇನು ? ಅಷ್ಟು ಸೊಕ್ಕುಬಂದಿದೆಯೇ ನಿನಗೆ ? ಈ ಕೂಡಲೇ ಆನೆಯ ಮೇಲಿರುವ ದುರ್ಮುಖನನ್ನೂ, ಉಳಿದ ಆ ವೇಷಧಾರಿಗಳನ್ನೂ ನನ್ನ ಮುಂದೆ ಹಾಜರುಪಡಿಸು. ನನ್ನ ಹಿಂದೆ ಕೋಟೆಯೊಳಗೆ ಕೈ ಕಟ್ಟಿಕೊಂಡು ಬಾ, ನಿನಗೂ ಆ ರಾಕ್ಷಸ ವೇಷ, ಕರಡಿ ವೇಷದವರಿಗೂ ನಾನು ಕೊಡುವ ಬಹುಮಾನ ತೆಗೆದುಕೊ. ದುರ್ಮುಖನ ತಲೆಯನ್ನು ಕೋಟೆಯ ತುದಿಗೆ ಕಟ್ಟಬೇಕೋ, ದ್ವಾರದಲ್ಲಿ ನೇತಾಡಿಸಬೇಕೋ ಆಮೇಲೆ ನಿಶ್ಚಯಿಸುತ್ತೇನೆ" ಎಂದು ಕಡೆಯ ಮಾತನ್ನು ತನ್ನ ಮಂತ್ರಿಯನ್ನು ನೋಡಿ ಹೇಳಿದನು.

ಸೂರ್ಯಭೂಪತಿಯ ಮಾತು ಕೇಳಿದ ಕೂಡಲೇ ತನ್ನ ಉಪಾಯವು ವಿಪರೀತಕ್ಕಿಟ್ಟಿತೆಂದು ಕಳ್ಳರ ನಾಯಕನಿಗೆ ತಿಳಿದುಬಿಟ್ಟಿತು. ಅವನ ಮಟ್ಟಿಗೆ ದುರ್ಮುಖರಾಜನೂ, ಸೂರ್ಯಭೂಪತಿಯೂ ಒಂದೇ ಆಗಿದ್ದರು. ಇಬ್ಬರ ಮೇಲೆಯೂ ಅವನಿಗೆ ಪ್ರತ್ಯೇಕವಾದ ದ್ವೇಷವೋ ಗೌರವವೋ ಇರಲಿಲ್ಲ. ಸೂರ್ಯಭೂಪತಿ ಅಹಂಕಾರಾತಿರೇಕದಿಂದ ಉಗ್ರದಂಡ ರಾಕ್ಷಸನನ್ನೋ, ಕಟುಕಕರಡಿಯವನನ್ನೋ ಕೆಣಕಿದನೆಂದರೆ ದೊಡ್ಡದೊಂದು ರಕ್ತದ ಕಾಲುವೆ ಹರಿದುಬಿಡುತ್ತದೆ. ಹಾಗಾಗುವುದು ನಾಗಮಲ್ಲನಿಗೆ ಇಷ್ಟವಿರಲಿಲ್ಲ.

ಏನು ಉತ್ತರ ಕೊಡಬೇಕೆಂದು ನಾಗಮಲ್ಲನು ಆಲೋಚಿಸುತ್ತಿರಲು, ಆನೆಯ ಮೇಲಿದ್ದ ದುರ್ಮುಖನ ಸೈನಿಕರಿಬ್ಬರೂ ತಟಕ್ಕನೆ ಕತ್ತಿಗಳನ್ನು ಹಿರಿದು, "ದುರ್ಮುಖ ಮಹಾರಾಜರಿಗೆ ಜಯವಾಗಲಿ !" ಎಂದು ಕೂಗಿ ಎದ್ದುನಿಂತು, ಸಾಮಂತ ಸೂರ್ಯಭೂಪತಿಯನ್ನು ನೋಡಿ, "ಎಲೋ, ಸೂರ್ಯಭೂಪತಿ ! ನೀನು ಸಾಯಲಿಕ್ಕೇ ಬಂದವನು ! ನಮ್ಮ ದುರ್ಮುಖ ಮಹಾರಾಜರಿಗೆ ಸಹಾಯಕರಾಗಿ ಬಂದವರು ವೇಷಧಾರಿಗಳೆಂದುಕೊಂಡೆಯಾ ? ಹುಚ್ಚಾ ! ನಿಜವಾದ ರಾಕ್ಷಸನೇ ! ಮತ್ತೊಬ್ಬನನ್ನು ಯಾರೆಂದುಕೊಂಡೆ ? ಮಹಾ ಮಂತ್ರ ಶಕ್ತನಾದ ಕಟುಕಭಲ್ಲೂಕ ವೀರ !" ಎಂದು ಗರ್ಜಿಸಿ ಹೇಳಿದರು.

"ದುರ್ಮುಖಿ ಮಹಾರಾಜರಿಗೆ ಜೈ!" ಎಂಬ ಕೂಗು ಕೇಳಿದ ಕೂಡಲೇ, ಕೋಪೋದ್ರೇಕದಿಂದ ಉಕ್ಕಿ ಹೋದ ಸೂರ್ಯಭೂಪತಿ, ಸೈನಿಕರು ಹೇಳಿದ ಉಳಿದ ಮಾತುಗಳೇನನ್ನೂ ಕಿವಿಗೆ ಹೊಗಿಸಿಕೊಳ್ಳ ಲಿಲ್ಲ. ಅವನು ಪಕ್ಕದಲ್ಲಿದ್ದ ತನ್ನ ಮಂತ್ರಿ ಸೇನಾ ನಾಯಕರೊಂದಿಗೆ, "ಕದಲಿ ಬನ್ನಿ. ನನ್ನ ಮುಂದೆ ನಿಂತು ಹರಟುವ ಈ ಸೊಕ್ಕಿನವನಿಗೂ, ಹಿಂದೆನಿಂತು ವಿನೋದ ನೋಡುವ ವೇಷಧಾರಿಗಳಿಗೂ ನನ್ನ ಶಕ್ತಿ ಎಂತಹುದೆಂದು ತೋರಿಸಬೇಕು. ನಿಮ್ಮಲ್ಲಿ ಕೆಲವರು ಹಿಂದೆ ಓಡಿ ಹೋಗಿ ಇನ್ನಷ್ಟು ಅಶ್ವಿಕರನ್ನೂ ಪದಾತಿ ಗಳನ್ನೂ ಕರೆದುಕೊಂಡುಬನ್ನಿರಿ. ಇವರು ಕಾಡಿ ನೊಳಗೆ ಓಡಿ ಹೋಗದ ಹಾಗೆ ಸುತ್ತಲೂ ಮುತ್ತಿಗೆ ಹಾಕಿ ಹಿಡಿಯಿರಿ!" ಎಂದು ಕಿರುಚುತ್ತಾ ಹೇಳಿ, ಕತ್ತಿ ಯನ್ನು ಎತ್ತಿ ಕುಣಿಸುತ್ತಾ, ನಾಗಮಲ್ಲನ ಆನೆಯ ಕಡೆಗೆ ತನ್ನ ಕುದುರೆಯನ್ನು ಹುರುಡಿಸಿದನು.

ಮುಗಿಬೀಳುವ ಗಂಡಾಂತರವನ್ನು ಕ್ಷಣ ಮಾತ್ರ ದಲ್ಲಿ ನಾಗಮಲ್ಲನು ಅರಿತು ತನ್ನ ಆನೆಯನ್ನು ಹಿಂದಕ್ಕೆ ತಿರುಗಿಸಿ, ಉಗ್ರದಂಡ ರಾಕ್ಷಸ ಮೊದಲಾದವರ ಕಡೆಗೆ ಓಡಿಸುತ್ತ, "ಕಟುಕ ಭಲ್ಲೂಕ ಪ್ರಭುಗಳೇ! ರಾಕ್ಷ ಸಾಧೀಶರೇ! ನನ್ನ ಉಪಾಯ ತಿರುಗಿ ಹೊಡೆಯಿತು. ಸಾಮಂತನು ನಮ್ಮ ಮೇಲೆ ಎಲ್ಲಾ ಸೈನ್ಯವನೂ ಮುಗಿಬೀಳಿಸುತ್ತಾನೆ." ಎಂದು ಕೂಗಿಹೇಳಿದನು.

ಸೂರ್ಯಭೂಪತಿ ತನ್ನನ್ನು ಅವಮಾನಿಸಿದರೂ ತನ್ನಲ್ಲಿ ರಾಜಭಕ್ತಿ ಸ್ವಲ್ಪವೂ ತಗ್ಗಲಿಲ್ಲವೆಂಬುದನ್ನು ನಿರೂಪಿಸಲು ಇದೇ ತಕ್ಕ ಸಮಯವೆಂದುಕೊಂಡು ಅವನ ಮಂತ್ರಿ ತನ್ನ ಕುದುರೆಯನ್ನೂ ನಾಗಮಲ್ಲನ ಆನೆಯ ಕಡೆಗೆ ಧುಮುಕಿಸಿದನು. ಹಾಗೂ ತನ್ನ ಪ್ರಭುವಿಗಿಂತಲೂ ದೊಡ್ಡ ಕಂಠದಿಂದ, "ಎಲೋ ದೇಶದ್ರೋಹಿಗಳೇ! ನಿಲ್ಲಿರಿ! ನಿಮ್ಮೆಲ್ಲರನ್ನೂ ಸೂರ್ಯಭೂಪತಿ ಮಹಾರಾಜರು ಶಿರಚ್ಛೇದನ ಮಾಡಿದ ಹೊರತು ಬಿಡಲಾರರು! ತಪ್ಪಿಸಿಕೊಂಡು



ಓಡಲು ಸಾಧ್ಯವೇ ಇಲ್ಲ!" ಎಂದು ಕೂಗಿದನು. ಇಷ್ಟರೊಳಗೆ ಸೇನಾನಾಯಕನು ದೂರದಲ್ಲಿದ್ದ ಸೈನ್ಯವನ್ನು ಮುಂದಕ್ಕೆ ಬರುವಂತೆ ಆಜ್ಞೆ ಮಾಡಿದನು. ಅದರಂತೆ ಅಶ್ವಬಲ, ಕಾಲ್ಬಲಗಳೂ ಮುಂದೆ ಬಂದು ಸೂರ್ಯಭೂಪತಿಯ ಹಿಂಬದಿಯಲ್ಲಿ ಸೇರಿದುವು. ಇದನ್ನೆಲ್ಲ ನೋಡಿ ನಾಗಮಲ್ಲನು ಉಗ್ರದಂಡ ಕಟುಕ ಕರಡಿಗಳ ಹತ್ತಿರ ಹೋಗಿ ತಿರುಗಿನಿಂತನು. ಯಾರೂ ಅಲ್ಲಿಂದ ಓಡುವ ಪ್ರಯತ್ನ ಮಾಡಲಿಲ್ಲ.

ತನ್ನ ರಾಜಧಾನಿಯನ್ನು ಆಕ್ರಮಿಸಿದ ಸಾಮಂತ ಸೂರ್ಯಭೂಪತಿಯನ್ನು ಕಣ್ಣೆದಿರಿನಲ್ಲಿ ನೋಡಿ, ದುರ್ಮುಖಿರಾಜನು ಅತ್ಯುಗ್ರನಾಗಿ, ಕತ್ತಿ ಹಿರಿದು ಆನೆಯ ಮೇಲೆ ಎದ್ದು ನಿಂತು, "ಎಲೋ! ಅಲ್ಪ ಸಾಮಂತನೆ! ಸೊಕ್ಕು ನೆತ್ತಿಗೇರಿದ ಸೂರ್ಯ ಭೂಪತೀ! ನಾನು ದಿಗ್ವಿಜಯಕ್ಕೆ ಹೊರಟ ಸಂಧಿ ನೋಡಿ, ನನ್ನ ರಾಜಧಾನಿಯನ್ನೇ ಆಕ್ರಮಿಸಿ ಈಗ ನನ್ನ ಮುಂದೆಯೇ ಯುದ್ಧಕ್ಕೆ ನಿಂತೆಯಾ? ಇಕೋ!

ಈಗಲೇ ನಿನ್ನ ತಲೆ ಭೂಮಿಗಿಳಿಯುತ್ತದೆ!" ಎಂದು ಗರ್ಜಿಸಿಕೊಂಡೇ, ಸೈನಿಕರು ತಡೆದರೂ ಕೇಳದೆ, ಸಾಮಂತನ ಕುದುರೆಯ ಮೇಲಕ್ಕೇ ಹಾರುವ ಪ್ರಯತ್ನದಲ್ಲಿ ಪಟ್ಟುತಪ್ಪಿ ನೆಲಕ್ಕೆ ಕೌಚಿಬಿದ್ದು, ಆ ಕೂಡಲೇ ಪುಟಿದೆದ್ದು ನಿಂತನು.

ಆದನ್ನು ನೋಡಿ ಕಟುಕಭಲ್ಲೂಕನು ಗಟ್ಟಿಯಾಗಿ ಚಪ್ಪಾಳೆ ತಟ್ಟುತ್ತ, "ಆಹಾ! ಹೇಡಿಯಂತಿದ್ದ ರಾಜನಿಗೆ ತನ್ನ ಸ್ಥಳದ ಹತ್ತಿರ ಎಂಥ ಸಾಹಸ ಬಂದು ಬಿಟ್ಟಿತು! ಅರಣ್ಯದಲ್ಲಿರುವ ಒಂದು ಚಿರತೆಯನ್ನು ಇದಿರಿಸಿಕೊಳ್ಳುವಷ್ಟು ಧೈರ್ಯವಿಲ್ಲದ ದುರ್ಮುಖ ರಾಜನು ತನ್ನ ಕೋಟೆಯ ಹತ್ತಿರ ಬಂದು, ಸಿಂಹಾಸನವನ್ನು ನೆನೆದು ಶತ್ರುಗಳ ಮೇಲೆ ಮೊಂಡಿ ಧೈರ್ಯದಿಂದ ಹಾಯುತ್ತಾನಲ್ಲ!" ಎಂದನು ಗಟ್ಟಿಯಾಗಿ.

ತನ್ನ ಶತ್ರು ಕೆಳಗೆ ಬಿದ್ದು ಏಳುವುದನ್ನು ನೋಡಿ, ಸಾಮಂತ ಸೂರ್ಯಭೂಪತಿ ಹಿಡಿಸಲಾರದಷ್ಟು ಸಂತೋಷದಿಂದ, "ಆಹ! ವ್ರಣಶೇಷ, ಶತ್ರುಶೇಷ ಗಳು ಪ್ರಾಣಕ್ಕೇ ಅಪಾಯವೆನ್ನುತ್ತಾರೆ ಹಿರಿಯರು. ದುರ್ಮುಖ ರಾಜಾ, ನಿನ್ನ ಬೊಗಳುವ ಹುಚ್ಚು ತಲೆ ಈಗಲೇ ಉದುರಿ ಬೀಳುತ್ತದೆ!" ಎನ್ನುತ್ತ ಕತ್ತಿಯನ್ನು ಚಾಚಿ, ದುರ್ಮುಖನ ಕಡೆಗೆ ಕುದುರೆ ಯನ್ನು ಹಾರಿಸಿದನು.

ಅದೇ ಸಮಯದಲ್ಲಿ ಆನೆಯ ಕುಂಭಸ್ಥಳದಲ್ಲಿರುವ ಆಟವಿಕ ಯುವಕನು, ತಟ್ಟನೆ ಬಿಲ್ಲನ್ನೆತ್ತಿ, ಬಾಣ ಹೂಡಿ ಸೂರ್ಯಭೂಪತಿಯ ಕಡೆಗೆ ಪ್ರಯೋಗಿ ಸಿದನು. ಬಾಣವು ಗುರಿತಪ್ಪಿ ಸಾಮಂತನು ಏರಿ ಕೊಂಡ ಕುದುರೆಯ ಹಣೆಯಲ್ಲಿ ಚುಚ್ಚಿಕೊಂಡಿತು. ಕುದುರೆ ಕೆಟ್ಟದನಿಯಿಂದ ಹೇಷ್ಕರಿಸುತ್ತ ಹಿಂದಿನ ಕಾಲುಗಳ ಮೇಲೆ ಎದ್ದು ನಿಂತಿತು.

ಆಗ ಹಿಂದೆ ಮಗುಚಿ ಬೀಳಲಿಕ್ಕಿದ್ದ ಸಾಮಂತ ಸೂರ್ಯಭೂಪತಿ, ಕಡಿವಾಣವನ್ನು ಬಿಗಿಯಾಗಿ ಹಿಡಿದು ಬೀಳದೆ ಉಳಿದುಕೊಂಡನು. ಅಷ್ಟರೊಳಗೆ ದುರ್ಮುಖನು ಮುಷ್ಟಿ ಘಾತದಿಂದ ಸೂರ್ಯ ಭೂಪತಿಯ ಮಂತ್ರಿಯನ್ನು ಕೆಳಗುರುಳಿಸಿ ಅವನ ಕುದುರೆಯ ಮೇಲೆ ತಾನು ಏರಿಕೊಂಡು, ಸೂರ್ಯ ಭೂಪತಿಯ ಕಡೆಗೆ ಓಡಿಸಿದನು.

ತಾನೀಗ ಶತ್ರುಗಳ ನಡುವೆ ಸಿಕ್ಕಿಕೊಂಡೆನೆಂದು ಸಾಮಂತನಿಗೆ ಗೊತ್ತಾಯಿತು. ಅವನು ಕುದುರೆ ಯನ್ನು ಕೋಟೆಯ ಕಡೆಗೆ ಓಡಿಸುತ್ತ, ಸಾಗಿದನು. ದುರ್ಮುಖರಾಜನು ಕುದುರೆಯನ್ನು ಬೇಗಬೇಗ ಓಡಿಸುತ್ತ ಕತ್ತಿಯನ್ನು ಎತ್ತಿ ಕುಣಿಸಿಕೊಂಡು "ಹೇಡಿ ಸೂರ್ಯಭೂಪತೀ! ಧೈರ್ಯದಿಂದ ನಿಲ್ಲು, ಎಲ್ಲರೂ ನಿಲ್ಲಿರಿ!" ಎನ್ನುತ್ತ ಅವನನ್ನು ಬೆಂಬತ್ತಿದನು.

—(ಇನ್ನೂ ಇದೆ)





# ಕರಡಿಕೆಂಗಣ್ಣ

೧೨

[ದುರ್ಮುಖರಾಜನ ಕೋಟೆಯನ್ನು ಆಕ್ರಮಿಸಿದ ಸಾಮಂತನು ಕಟುಕಭಲ್ಲೂಕನೇ ಮೊದಲಾದವರ ಮೇಲೆ ಸೈನಿಕರನ್ನು ಕಳುಹಿಸಿದನು. ಆ ಸೇನಾ ನಾಯಕನ ಹತ್ತಿರ ಕಳ್ಳ ನಾಗಮಲ್ಲನು ತಾನು ದುರ್ಮುಖನನ್ನು ಬಂಧಿಸಿ ತಂದಿರುವೆನೆಂದನು. ಸಾಮಂತನು ಕಟುಕಭಲ್ಲೂಕನ ಬಳಿಗೆ ಬಂದನು. ದುರ್ಮುಖರಾಜನು ಮಹಾ ಕೋಪದಿಂದ ಆ ಸಾಮಂತನ ಮೇಲೆ ಹಾರಲು, ಸಾಮಂತನು ಓಡಿಹೋಗ ತೊಡಗಿದನು.]

ದುರ್ಮುಖ ರಾಜನ ಸಾಮಂತನಾದ ಸೂರ್ಯಭೂಪತಿ ತನ್ನ ಕುದುರೆಯನ್ನು ನಿಲ್ಲಿಸಿ ಪ್ರತಿಭಟನೆ ತೋರದೆಯೇ ಕೋಟೆಯ ಕಡೆಗೆ ಓಡುತ್ತಿದ್ದನು. ದುರ್ಮುಖರಾಜನನ್ನು ಕಂಡಕೂಡಲೇ, ಅವನು ಹಿಂದಿರುಗಿ ನೋಡುವಷ್ಟು ಧೈರ್ಯವಿಲ್ಲದೆ ತೆರೆದ ಬಾಗಿಲಿನ ಕೋಟೆಯ ದ್ವಾರದ ಕಡೆಗೆ ಓಡುತ್ತಿರುವುದನ್ನು ನೋಡಿ ಅಲ್ಲಿದ್ದವರಿಗೆಲ್ಲ ಆಶ್ಚರ್ಯವಾಯಿತು. ಮುಖ್ಯವಾಗಿ ಅವನ ಸೇನಾ ನಾಯಕನೇ ತಿರಸ್ಕಾರದಿಂದ ಮೂಗು ಮುರಿದುಕೊಂಡನು. ಆದರೂ ಉಪಾಯವಿಲ್ಲದೆ, ಕರ್ತವ್ಯವನ್ನು ನೆನೆದು ತನ್ನೊಂದಿಗಿದ್ದ ಸೈನಿಕರಿಗೆ ತನ್ನನ್ನು ಅನುಸರಿಸುವಂತೆ ಕೈ ಸನ್ನೆ ತೋರಿಸಿ ಸಾಮಂತನ ಹಿಂದೆಯೇ ಕೋಟೆ ಗೋಡೆಯ ಕಡೆಗೆ, ತನ್ನ ಕುದುರೆಯನ್ನು ಓಡಿಸಿದನು. ಸೈನಿಕರೂ ಅವನನ್ನು ಅನುಸರಿಸಿದರು.

ಈ ಸಂದರ್ಭದಲ್ಲಿ ಆ ಸೇನಾ ನಾಯಕನೊಂದಿಗಿದ್ದ ಧೈರ್ಯಶಾಲಿಗಳಾದ ಇಬ್ಬರು ಸೈನಿಕರು ಅವನೊಂದಿಗೆ, "ಅಯ್ಯಾ, ಒಂದು ಮಾತು! ನಮ್ಮ ಮೇಲೆ ದಾಳಿಬಂದಿರುವ ಆ ಶತ್ರುಗಳು ಹತ್ತು ಮಂದಿ ಕೂಡಾ ಇಲ್ಲ. ಇಲ್ಲಿ ಹೊಸದಾಗಿ ರಾಜನಾದ ಇಲ್ಲಿಯ ಸೂರ್ಯಭೂಪತಿ ಸಾಮಂತನನ್ನೂ,



ಹಳೆಯ ರಾಜ ದುರ್ಮುಖನನ್ನೂ ಒಬ್ಬರನ್ನೊಬ್ಬರು ಕಡಿದುಕೊಳ್ಳುವ ಹಾಗೆ ಬಿಟ್ಟುಬಿಡೋಣ. ಇಷ್ಟ ರೊಳಗೆ ನಾವು ಈ ಸ್ವಲ್ಪ ಮಂದಿ ಶತ್ರುಗಳನ್ನು ಸುತ್ತಲೂ ಮುತ್ತಿ ಹತ ಮಾಡಿಬಿಡಬಹುದು. ಆಮೇಲೆ ಹಳೆಯರಾಜನೂ ಇಲ್ಲ. ಹೊಸರಾಜನೂ ಇಲ್ಲ. ನೀವೇ ಉದಯಗಿರಿಯ ಮಹಾರಾಜ ರಾಗ ಬಹುದಲ್ಲ? ನಾವೆಲ್ಲಾ ನಿಮ್ಮವರೇ! ಈ ಒಳ್ಳೇ ಸಂದರ್ಭವನ್ನು ಜಾರಬಿಡಬಾರದಯ್ಯಾ. ಇಂಥ ಸಮಯ ಮತ್ತೆ ಬಾರದು." ಎಂದನು.

ಸೈನಿಕರ ಮಾತು ಕೇಳುತ್ತಿದ್ದಂತೆ, ಸೇನಾನಾಯಕನಿಗೆ ಹೊಸ ಆಶೆ ಹುಟ್ಟಿಕೊಂಡು ಬಂತು. ಅವನು ಕುದುರೆ ಯನ್ನು ಹಿಂದಕ್ಕೆ ತಿರುಗಿಸಿ, ಆನೆಯ ಮೇಲಿದ್ದ ಕಟುಕ ಭಲ್ಲೂಕ ಮತ್ತು ಇತರರನ್ನು ನೋಡಿದನು. ಕಟುಕ ಭಲ್ಲೂಕನು ಚಪಗೊಡಲಿಯನ್ನು ಮೇಲೆತ್ತಿ, ಹಿಡಿದು, ಕುಣಿಸುತ್ತ, ಕಳ್ಳ ನಾಗಮಲ್ಲ ಮತ್ತು ಅವನ ಅನು ಚರರಿಗೂ, ದುರ್ಮುಖರಾಜನ ಅಂಗರಕ್ಷಕರಿಗೂ ಹೀಗೆ ಹೇಳಿದನು: "ಎಲೆಲೋ! ಈ ದುರ್ಮುಖ ರಾಜನನ್ನು ನೋಡಿದಿರಾ! ಎಲ್ಲಿಲ್ಲದ ಸಾಹಸ ಅವನಿಗೆ ಬಂದು ಬಿಟ್ಟಿತು. ಅವನೊಬ್ಬನೇ ಆ ಸಾಮಂತನ ಬೆನ್ನು ಹತ್ತಿ ಓಡುತ್ತಾನೆ. ಬುದ್ಧಿಕೆಟ್ಟ ಆ ರಾಜನಿಗೆ ತನ್ನ ಪ್ರಾಣವೂ ದಕ್ಕದು. ರಾಜ್ಯವೂ ದಕ್ಕದು. ನಾವಾರೂ ಅವನ ಸಹಾಯಕ್ಕಿಲ್ಲದೆ, ಅಷ್ಟು ಮಂದಿ ಶತ್ರುಗಳ ನಡುವಿಗೆ ಅವನೊಬ್ಬನೇ ಹೋಗುವ ನೆಂದರೆ, ತನ್ನ ತಲೆಯನ್ನು ನನಗೆ ಕೊಡಲು ಇಷ್ಟ ವಿಲ್ಲದೆ. ಶತ್ರುಗಳ ನಡವೆ ಸತ್ತುಬೀಳಲಿಕ್ಕಾಗಿಯೇ ಹೋಗುತ್ತಾನೆಂದಾಯಿತು. ಹಾಗಾಗ ಬಾರದು. ಅವನ ತಲೆ ನನಗೆ ಬೇಕೇಬೇಕು. ನಾವೆಲ್ಲಾ ಹೋಗಿ ಅಡ್ಡಗಟ್ಟಿದವರನ್ನು ಕಡಿಕಡಿದು ಹಾಕಿ ಆ ದುರ್ಮುಖ ನನ್ನು ಹಿಡಿಯೋಣ, ನಡೆಯಿರಿ!"

ಕರಡಿ ಕಟುಕರವನ ಮಾತು ಕೇಳಿದ ಕೂಡಲೇ ಉಗ್ರದಂಡ ರಾಕ್ಷಸನು ತನ್ನ ಕಲ್ಲಿನಗದೆಯನ್ನು ಎತ್ತಿ ಹಿಡಿದು ಪ್ರಳಯ ಭಯಂಕರ ಧ್ವನಿಯಿಂದ ಹೂಂ ಕರಿಸಿ, "ಎಲೆಲೋ, ಸಾಮಂತ ಭೂಪತಿಯ ಪುಡಿ ಪುಡಿ ಸೈನಿಕರೇ! ಜಾಗ್ರತೆ! ದುರ್ಮುಖರಾಜನಿಗೆ ಏನಾದರೂ ಕೂದಲು ಕೊಂಕಿತೆಂದರೆ, ನಿಮ್ಮಲ್ಲಿ ಯಾರಿಂದ ಹಾಗಾಯಿತೋ ಅವರೆಲ್ಲರೂ ನಜ್ಜು ಗುಜ್ಜಾಗಿ ಸಾಯುವರು! ಜಾಗ್ರತೇ!" ಎಂದು ದಿಕ್ಕು ಗಳು ಒಡೆಯುವಂತೆ ಕೂಗಿ ಹೇಳಿ ಕೋಟೆಯ ಕಡೆಗೆ ಹೊರಟನು.

ಭಯಂಕರಾಕಾರದ ಉಗ್ರದಂಡನು ನಡೆದು ಬರುವುದನ್ನು ನೋಡುತ್ತಲೇ, ತಾನು ರಾಜನಾಗ ಬೇಕೆಂಬ ಸೇನಾನಾಯಕನ ದುರಾಶೆ ಹೇಳ ಹೆಸರಿಲ್ಲ ದಂತೆ ಮರೆಯಾಯಿತು. ಮೊದಲು ಜೀವ ಉಳಿದರೆ ಸಾಕೆಂದು ಕೊಂಡವನ ಹಾಗೆ ತನ್ನ ಕುದುರೆಯನ್ನು ಹಿಂದಕ್ಕೆ ತಿರುಗಿಸಿ, ತನ ಸೈನಿಕರಿಗೆ ಕೇಳಿಸುವಂತೆ, "ಬೇಡಪ್ಪೋ! ನಾವು ಈ ರಾಕ್ಷಸರನ್ನೂ, ಕೊಡಲಿ ಹಿಡಿದ ಕರಡಿಗಳನ್ನೂ ಎದುರಿಸಿ ಬದುಕಲಾರೆವು!

ಕೋಟೆಯ ಗೋಡೆಗಳೇ ನಮ್ಮನ್ನು ಕಾಪಾಡಬೇಕು. ಬನ್ನಿ! ಕೋಟೆಯೊಳಗೆ ಹೊಕ್ಕು ದ್ವಾರಗಳನ್ನು ಬಂಧಿಸಿಬಿಡೋಣ. ಓಡಿಬನ್ನಿ!" ಎಂದು ಕೂಗುತ್ತಾ ಓಡ ತೊಡಗಿದನು.

ತಮ್ಮ ನಾಯಕನು ಓಡಿ ಹೋಗುವುದನ್ನು ನೋಡಿದ ಕೂಡಲೇ ಅವನ ಸೈನಿಕರೆಲ್ಲಾ ಅವನನ್ನು ಅನುಸರಿಸಿದರು. ಅದನ್ನು ನೋಡಿ ಕಟುಕಕರಡಿಯವನು, ಮೊಂಡುಸೊಂಡಿಲಿನ ಆನೆಯ ನೆತ್ತಿಯ ಮೇಲೆ ಕುಳಿತಿದ್ದ ಆಟವಿಕನೊಂದಿಗೆ, "ಎಲೋ, ಆಟವಿಕಸೇವಕಾ! ಕಾಡಿನಲ್ಲಿ ಹಕ್ಕಿಗಳನ್ನು ಹೊಡೆಯುವ ನಿನ್ನ ಬಾಣಬಿಡುವ ಅಭ್ಯಾಸವನ್ನು ಸ್ವಲ್ಪ ಹದ್ದಿನಲ್ಲಿಟ್ಟುಕೋ. ಓಡಿ ಹೋಗುವ ಸೈನಿಕರ ಮೇಲೆ ಬಾಣ ಹೊಡೆದು ಕೊಂದುಬಿಡಬೇಡ. ನಾವು ಆ ದುರ್ಮುಖರಾಜನನ್ನು ಕೆಲವು ಕ್ಷಣಗಳ ಮಾತಿಗೆ ಅವನ ಸಿಂಹಾಸನದ ಮೇಲೆ ಕುಳ್ಳಿರಿಸಿ, ಅವನ ತಲೆಯನ್ನು ತೆಗೆದುಕೊಂಡು ಕರಡಿ ಕೆಂಗಣ್ಣ ಮಹಾಮಾಂತ್ರಿಕರ ಬಳಿಗೆ ಹೋಗಬೇಕು. ಅಷ್ಟೇ ಹೊರತು ಪಾಪದ ಸೈನಿಕರನ್ನೆಲ್ಲಾ ಸಾಯಿಸುವ ಕೆಲಸಬೇಡ" ಎಂದನು.

ಆನೆಯ ಮೇಲೆ ಕುಳಿತಿದ್ದ ಕಟುಕಕರಡಿಯವನೂ, ಕಳ್ಳರನಾಯಕನೂ, ದುರ್ಮುಖನ ಅಂಗರಕ್ಷಕರೂ ಉಗ್ರದಂಡ ರಾಕ್ಷಸನ ಹಿಂದೆಯೇ ತಮ್ಮ ವಾಹನಗಳನ್ನು ಓಡಿಸಿಕೊಂಡು ಕೋಟೆಯ ದ್ವಾರದ ಬಳಿಗೆ ಹೋದರು

ಅಷ್ಟರೊಳಗೆ ಸಾಮಂತನ ಸೇನಾನಾಯಕನು ಕೆಲವು ಮಂದಿ ಸೈನಿಕರೊಂದಿಗೆ ಕೋಟೆಯೊಳಗೆ ಹೊಕ್ಕು ಆ ಕೂಡಲೇ ಬಾಗಿಲನ್ನು ಮುಚ್ಚಿಸಿಯೂ ಬಿಟ್ಟನು. ಇನ್ನೂ ಕೋಟೆಯ ದ್ವಾರದ ಹೊರಗೇ ಉಳಿದಿದ್ದ ಸೈನಿಕರು ಪ್ರಾಣಭಯದಿಂದ ಹಾಹಾಕಾರ ಮಾಡುತ್ತ ಕೋಟೆ ಗೋಡೆಯ ಬದಿಯಲ್ಲೇ ಚೆಲ್ಲಾ ಚೆದರಾಗಿ ಓಡಿ ಹೋದರು.



ಮುಂದಾಗಿ ಉಗ್ರದಂಡ ರಾಕ್ಷಸನು ಕೋಟೆಯ ದ್ವಾರವನ್ನು ಸಮೀಪಿಸಿ ಕಲ್ಲಿನ ಗದೆಯಿಂದ ಅದರ ಮೇಲೆ ಎರಡು ಸಾರಿ ಹೊಡೆದನು. ಆಗ ಸಿಡಿಲಿನಂತಹ ಶಬ್ದಗಳಾದುವೇ ಹೊರತು, ಬಾಗಿಲಿಗೆ ಏನೂ ಗಾಯ ಕೂಡಾ ಆಗಲಿಲ್ಲ. ಬಾಗಿಲಿನ ಗಟ್ಟಿತನವನ್ನು ನೋಡಿ ಉಗ್ರದಂಡನು ಆಶ್ಚರ್ಯ ಪಡುತ್ತ ಕಟುಕಭಲ್ಲೂಕನನ್ನು ನೋಡಿ "ನರಭಲ್ಲೂಕಾ! ಈ ಸಾಮಂತನ ಸೇನಾನಿ ಎಷ್ಟು ಹೇಡಿಯೋ ಅದರ ಎರಡು ಪಾಲು ಮಾಯಗಾರನಾಗಿದ್ದಾನೆ ನೋಡಿದೆಯಾ? ಈಗೇನು ಮಾಡೋಣ? ದುರ್ಮುಖರಾಜನು ಒಬ್ಬಂಟಿಗನಾಗಿ ಕೋಟೆಯೊಳಗೆ ಅವನ ಶತ್ರುವಿನ ನಡುವೆ ಸಿಕ್ಕಿಕೊಂಡಿದ್ದಾನೆ. ಅವನ ಜೀವ ಹೇಗೆ ಹೋದರೂ, ಕೆಂಗಣ್ಣ ಮಾಂತ್ರಿಕರಿಗೆ ನೀನು ಸಮರ್ಪಿಸಬೇಕಾಗಿದೆಯಲ್ಲಾ ಅವನ ತಲೆ? ಅದಕ್ಕೇನು ದಾರಿಯೋ ನನಗೆ ತೋರುವುದಿಲ್ಲ. ಇನ್ನು ನಿನ್ನ ಗತಿ ಏನೋ!" ಎಂದನು.



ಉಗ್ರದಂಡ ರಾಕ್ಷಸನ ಬಾಯಿಯಿಂದ ಹೊರಟ ಮಾತುಗಳನ್ನು ಕೇಳಿ ಕಟುಕಕರಡಿಯವನಿಗೆ ಬಹಳ ಭಯವಾಗಿ ಎದೆಯಲ್ಲಿ ನಡುಕ ಉಂಟಾಯಿತು. ತಾನು ದುರ್ಮುಖರಾಜನ ತಲೆಯನ್ನು ತೆಗೆದುಕೊಂಡು ಹೋಗದಿದ್ದರೆ ಆ ಮಹಾ ಮಾಂತ್ರಿಕನು ತನ್ನನ್ನು ಸಾಯುವವರೆಗೂ ಕರಡಿಯಾಗಿರುವಂತೆ ಬಿಟ್ಟು ಬಿಟ್ಟರೆ ಏನು ಗತಿ ? ಮನುಷ್ಯನಾಗಿ ಹುಟ್ಟಿ, ಕಡೆಗೆ ಕಾಡು ಕಾಡು ತಿರುಗುತ್ತ ಕರಡಿಬದುಕು ಬದುಕುವಂಥ ದುರ್ಗತಿ ಬಂದೀತಲ್ಲ ? ಇದಕ್ಕಿಂತ ಹೆಚ್ಚಿನ ನರಕ ಯಾತನೆ ಯಾವುದಿದ್ದೀತು ?

ಕಟುಕಭಲ್ಲೂಕನು ಹೀಗೆ ನೆನೆಯುತ್ತ, ಹೇಗಾದರೂ ಸರಿ, ದುರ್ಮುಖರಾಜನ ಪ್ರಾಣವನ್ನು ಕಾಪಾಡಲೇಬೇಕೆಂಬ ಆವೇಶದಲ್ಲಿ ತನ್ನ ಚಪಗೊಡಲಿಯನ್ನೆತ್ತಿ, "ಹೇ ! ಭೈರವಾ !" ಎಂದು ಕೂಗಿ ಕೋಟೆಯ ದ್ವಾರದ ಮೇಲೆ ಬಲವಾಗಿ ಹೊಡೆದನು. ತಿರುಳುಮರದಿಂದ ಮಾಡಲ್ಪಟ್ಟ ಆ ಬಾಗಿಲಿನ ಮೇಲೆ ಕಬ್ಬಿಣದ ತಗಡನ್ನು ಹೊಡೆಯಲಾಗಿತ್ತು. ಕೊಡಲಿಯ ಪೆಟ್ಟಿಗೆ ಕಿಡಿಗಳೆದ್ದು. ಕೊಡಲಿ ಕೈ ತಪ್ಪಿ ಹಾರಿ ಬಿದ್ದಿತೇ ಹೊರತು ಬಾಗಿಲಿಗೆ ಯಾವ ಗಾಯವೂ ಆಗಲಿಲ್ಲ.

ಅದನ್ನು ನೋಡಿ ಆನೆಯ ಮೇಲೆ ಕುಳಿತಿದ್ದ ಆಟವಿಕನು, ಕೆಳಕ್ಕೆ ಹಾರಿ ಓಡಿಹೋಗಿ ಕೊಡಲಿಯನ್ನು ಎತ್ತಿಕೊಂಡು, "ಓ ! ಭಲ್ಲೂಕದೊರೇ ! ನೀವು ಹೀಗೆಲ್ಲಾ ಅವಸರಪಟ್ಟು ಆವೇಶಕ್ಕೆ ಬಿದ್ದು ಮಹಾ ಮಾಂತ್ರಿಕರ ಮಹತ್ವವಿರುವ ಈ ಕೊಡಲಿಯ ಶಕ್ತಿಗೆ ಅವಮಾನ ಬರಿಸಬಾರದು. ಈ ಕೋಟೆಯೊಳಗೆ ನಾವು ಹೋಗಬೇಕಾದರೆ, ನಾನು ಹೇಳುವ ಹಾಗೆ ಮಾಡಬೇಕು. ಈ ಬಾಗಿಲನ್ನು ಬೆಂಕಿ ಹಚ್ಚಿ ಸುಟ್ಟು ಬೂದಿ ಮಾಡುವುದೊಂದೇ ಮಾರ್ಗ. ಬೇರೆ ದಾರಿ ಇಲ್ಲ." ಎಂದನು.

"ಹೌದೆಲೇ ಆಟವಿಕನೇ. ನಿನ್ನ ಆಲೋಚನೆ ಚೆನ್ನಾಗೇ ಇದೆ. ಆದರೆ ಅಷ್ಟೆಲ್ಲಾ ಆಗುವುದರೊಳಗೆ ಸಾಮಂತರಾಜ ಸೂರ್ಯಭೂಪತಿ ದುರ್ಮುಖನನ್ನು ಕೊಂದು ಹಾಕಿಬಿಟ್ಟರೆ ನನ್ನ ಗತಿ ಏನು ಹೇಳು. ನನಗೀಗ ಕೂಡಲೇ ನಡೆಯುವಂಥ ಉಪಾಯ ಬೇಕಾಗಿದೆ" ಎಂದನು ಕಟುಕಕರಡೀ ಮನುಷ್ಯ.

ಆಟವಿಕನು ತಲೆ ತುರಿಸುತ್ತ ಮೋರೆ ತಗ್ಗಿಸಿ ಕೊಡಲಿಯನ್ನು ಅದರ ಒಡೆಯನಿಗೆ ಕೊಟ್ಟನು.

"ಹೌದು ಹೌದು. ನರಭಲ್ಲೂಕನ ಮಾತು ನಿಜವೇ !" ಎನ್ನುತ್ತ ಉಗ್ರದಂಡ ರಾಕ್ಷಸನು ತನ್ನ ಕಲ್ಲಿನ ಗದೆಯನ್ನೆತ್ತಿ ನಾಲ್ಕೈದು ಅಡಿ ಹಿಂದಕ್ಕೆ ಹೋಗಿ ಕುಪ್ಪಳಿಸುತ್ತ ಬಂದು ಕೋಟೆಯ ದ್ವಾರದ ಮೇಲೆ ಬಲವಾದ ಒಂದು ಏಟನ್ನು ಕೊಟ್ಟನು.

ರಾಕ್ಷಸನ ಪ್ರಚಂಡವಾದ ಪೆಟ್ಟಿಗೆ ಕೋಟೆಯ ಬಾಗಿಲು ಒಡೆಯಲೇ ಇಲ್ಲ. ಆದರೆ ಮೊದಲೇ ಹಳೆಯದಾದುದರಿಂದ ಸೀಳು ಬಿಟ್ಟಿದ್ದ ಬಾಗಿಲಿನ ಮೇಲು ಭಾಗದ ಕೋಟೆ ಗೋಡೆಯ ಒಂದುಭಾಗವು

ಕಲ್ಲು ಮಣ್ಣುಗಳೊಂದಿಗೆ ಸ್ವಲ್ಪ ಜರಿದು ಬಿದ್ದಿತು. ಆಗ ಇಡೀ ಗೋಡೆಯೇ ಬೀಳುವುದೇನೋ ಎಂಬ ಭಯದಿಂದ ಉಗ್ರದಂಡನೂ ಉಳಿದವರೂ ಬೇಗ ಬೇಗನೇ ಹಿಂದಕ್ಕೆ ಓಡಿ ಹೋಗಿ ನಿಂತು, ತಿರುಗಿ ತಲೆಯೆತ್ತಿ ನೋಡಿದರು.

ಆಗ ಕೋಟೆಯ ಗೋಡೆಯ ಮೇಲೆ ಒಂದು ಅದ್ಭುತ ದೃಶ್ಯವು ಪ್ರತ್ಯಕ್ಷವಾಗಿತ್ತು. ಅದನ್ನು ನೋಡಿ ಎಲ್ಲರಿಗೂ ಆಶ್ಚರ್ಯವೂ ಭೀತಿಯೂ ಒಮ್ಮೆಗೇ ಉಂಟಾಯಿತು. ಕರ್ರಗಿನ ದುಸ್ತು ಧರಿಸಿದ ದೊಡ್ಡದೊಂದು ಕೋತಿಯ ಆಕಾರವು ಆ ಕೋಟೆಯ ಗೋಡೆಯ ಮೇಲೆ ಇತ್ತ ತಿರುಗಿ ಕುಳಿತು ಅವರನ್ನು ನೋಡುತ್ತಿತ್ತು. ಅದರ ಕೈಯಲ್ಲಿ ಉದ್ದವಾದೊಂದು ಮಂತ್ರದಂಡವೂ ಇದ್ದಿತು. ಅದರ ಹಿಡಿಯ ಮೇಲೆ ಕರಡಿಯ ತಲೆಯಿದ್ದು, ಅದರಲ್ಲೊಂದು ವಜ್ರವು ಕಣ್ಣಿಗೆ ಚುಚ್ಚುವಂತೆ ಹೊಳೆಯುತ್ತಿದ್ದಿತು.

ಆ ಕೋತಿಯ ರೂಪವನ್ನೂ, ಅದರ ಕೈಯಲ್ಲಿರುವ ಮಂತ್ರದಂಡವನ್ನೂ ನೋಡಿ ಕಟುಕಕರಡಿಯವನು, ಗಟ್ಟಿಯಾಗಿ ಹಲ್ಲುಕಡಿದು, ದೊಡ್ಡ ಕಂಠದಿಂದ, "ಏಲೋ, ಕೋತಿಕೊರಮಾ! ಯಾರು ನೀನು? ಕೋತಿಯ ರೂಪದಲ್ಲಿರುವ ನೀನು ನಿಜಕ್ಕೂ ಕೋತಿಯೋ, ಯಾವುದಾದರೂ ಪಿಶಾಚಿಯೋ? ಮಹಾಶಕ್ತಿಶಾಲಿಗಳಾದ ಕರಡಿ ಕೆಂಗಣ್ಣ ಮಾಂತ್ರಿಕರ ಮಂತ್ರದಂಡವು ನಿನ್ನ ಕೈಗೆ ಹೇಗೆ ಬಂತು? ನಾನು ಅವರ ಪ್ರೀತಿಯ ಶಿಷ್ಯ. ನನ್ನ ಮುಂದೆ ನಿಜವನ್ನೇ ಹೇಳು" ಎಂದನು.

ಅವನ ಪ್ರಶ್ನೆಯನ್ನು ಕೇಳಿ ಕೋತಿ ರೂಪವು ಕರ್ಣಕಠೋರ ಧ್ವನಿಯಿಂದ ಕಿಚಕಿಚಾ ಎಂದು ಕೂಗಿ, "ಅರೆರೋ! ಕೂಗುವವೀರಾ! ಶಿಷ್ಯನಂತೆ, ಪ್ರೀತಿಯ ಶಿಷ್ಯ! ಕರಡೀ ರೂಪದಲ್ಲಿರುವ ನೀನು ನಿಜವಾದ ಕರಡಿಯೋ ಅಥವಾ ಕರಡಿ ಪಿಶಾಚಿಯೋ?" ಎಂದು ಕೇಳಿತು.



ಕಟುಕಕರಡಿಯವನು ಆ ಕೋತಿ ರೂಪದ ಗೇಲಿಯನ್ನು ಸಹಿಸದೆ ಅತ್ಯುಗ್ರನಾಗಿ ಅದರ ಮೇಲೆ ಕೊಡಲಿಯನ್ನು ಎಸೆಯಲು ನೋಡಿದನು. ಆಗ ಉಗ್ರದಂಡ ರಾಕ್ಷಸನು ಅವನ ಕೈಹಿಡಿದು ತಡೆದು, ಮೆಲ್ದನಿಯಿಂದ, "ಕಟುಕಭಲ್ಲೂಕಾ! ಅವಸರಪಡಬೇಡ! ಕೆಲಸ ಕೆಟ್ಟೀತು. ನಿನ್ನ ಗುರು ಆ ಕರಡಿ ಕೆಂಗಣ್ಣ ಮಾಂತ್ರಿಕರು ಯಾವುದೋ ಅಪಾಯಕ್ಕೆ ಸಿಕ್ಕಿಬಿದ್ದಿರುವಂತೆ ನನಗೆ ಅನುಮಾನವಾಗಿದೆ. ಮೊದಲು ಈ ಕೋತಿ ಪಿಶಾಚಿಯನ್ನು ಒಳಿತಾಗಿ ಮಾತಾಡಿಸಿ ಏನು ನಡೆಯಿತೆಂಬುದನ್ನು ತಿಳಿದುಕೊಳ್ಳೋಣ" ಎಂದನು.

ಉಗ್ರದಂಡನು ಹಾಗೆ ಹೇಳುತ್ತಿದ್ದಾಗ, ಆಟವಿಕ ಮನುಷ್ಯನು ಮರೆಯಲ್ಲಿದ್ದು ಒಂದು ಬಾಣವನ್ನು ಆ ಕೋತಿಗೆ ಗುರಿಯಿಟ್ಟು ಪ್ರಯೋಗಿಸಿಬಿಟ್ಟನು. ರಿವ್ವನೆ ಹೋಗಿ ಕೋತಿಗೆ ತಾಗಿತು ಆ ಬಾಣ. ಆದರೆ ಚುರುಕಾದ ಆ ಕೋತಿ ತನ್ನೆಡೆಗೆ ಬರುತ್ತಿದ್ದ ಬಾಣವನು



ಎಡಗೈಯಿಂದ ಗಪ್ಪನೆ ಹಿಡಿದು, ಇದ್ದಲ್ಲಿಂದ ಸ್ವಲ್ಪವೂ ಕದಲದೆ, ಬಲಗೈಯಲ್ಲಿದ್ದ ಮಂತ್ರದಂಡವನ್ನು ಮೇಲಕ್ಕೆತ್ತಿ "ಎಲೋ ಶುಂಠಾಗ್ರೇಸರರೇ! ನನ್ನ ಶಕ್ತಿ ಎಂಥಾದ್ದೆಂದು ಈಗಾದರೂ ಗೊತ್ತಾಯಿತೇನ್ರೋ? ನಾನು ಸಾಧಾರಣ ಮರ್ಕಟನಲ್ಲ; ಮಾಯಾ ಮರ್ಕಟ! ಜಾಗ್ರತೆ!" ಎಂದು ಕೀಚು ದನಿಯಿಂದ ಜೋರಾಗಿ ನಗತೊಡಗಿತು.

ಆ ಕೋತಿಯ ಕೀಚು ಕೀಚು ಕಿರುಚಾಟವನ್ನು ಕೇಳಲಾಗದೆ ಕಟುಕಭಲ್ಲೂಕನು ತನ್ನ ಎರಡು ಕಿವಿಗಳನ್ನು ಮುಚ್ಚಿಕೊಂಡು, ಉಗ್ರದಂಡ ರಾಕ್ಷಸನನ್ನು ನೋಡಿ, "ಉಗ್ರದಂಡಾ! ಇನ್ನು ಈ ಹಾಳು ಮರ್ಕಟದೊಂದಿಗೆ ಮಾತು ಬೆಳೆಸಿ ಪ್ರಯೋಜನವಿಲ್ಲ. ಕೋಟೆಯೊಳಗೆ ದುರ್ಮುಖರಾಜನು ಇನ್ನೂ ಬದುಕಿರುವನೋ ಇಲ್ಲವೋ ಗೊತ್ತಾಗಲಿಲ್ಲ. ಸಿಕ್ಕಿ ಬಿದ್ದ ಒಬ್ಬನೇ ಒಬ್ಬನನ್ನು ಕೊಲ್ಲಲು ಆ ಸಾಮಂತನಿಗೆ ಎಷ್ಟು ಹೊತ್ತು ಹಿಡಿದೀತು? ಈ ಕೋಟೆಯ ಬಾಗಿಲನ್ನು ಒಡೆಯಲು ಸಾಧ್ಯವಾಗದೇ ಹೋದರೆ ಕೋಟೆಯ ಗೋಡೆಯ ಮೇಲಾದರೂ ಹತ್ತಿ ನಾವು ಒಳಗೆ ಪ್ರವೇಶಿಸಲೇಬೇಕು. ಅದಕ್ಕೇನು ಮಾರ್ಗವೋ ಯಾರಾದರೂ ಹೇಳಿರಪ್ಪಾ!" ಎಂದನು.

ಆವನ ಮಾತು ಕೇಳಿ ಉಗ್ರದಂಡರಾಕ್ಷಸನು ಮುಖದಲ್ಲಿ ಆಶ್ಚರ್ಯವನ್ನು ವ್ಯಕ್ತಪಡಿಸುತ್ತ, ಕಟುಕ ಭಲ್ಲೂಕನನ್ನು ನೋಡಿ, "ನರಭಲ್ಲೂಕಾ! ನಿನಗೆ ನಡೆದ ಸಂಗತಿ ಸಂದರ್ಭಗಳು ಸರಿಯಾಗಿ ಅರ್ಥವಾದಂತೆಯೇ ಇಲ್ಲ. ಈ ಮಾಯಾ ಮರ್ಕಟ ಎಂದು ಕೊಳ್ಳುವ ದುರಾತ್ಮನು, ಕರಡಿ ಕೆಂಗಣ್ಣ ಮಾಂತ್ರಿಕರ ಮಂತ್ರದಂಡವನ್ನು ವಶಪಡಿಸಿಕೊಂಡನೆಂದರೆ, ನಿಶ್ಚಯವಾಗಿಯೂ ಆ ಮಾಂತ್ರಿಕರು ಜೀವದಿಂದಿರಲಿಕ್ಕಿಲ್ಲ. ಅಂತಹ ಸ್ಥಿತಿಯಲ್ಲಿ ನೀನು ದುರ್ಮುಖರಾಜನಿಗಾಗಿ ಆವಸರಪಡುತ್ತ ಅಗತ್ಯವಿಲ್ಲದ ಕಷ್ಟಗಳಿಗೆ ಸಿಕ್ಕಿಕೊಳ್ಳಲು ನೋಡುವೆಯಲ್ಲಾ? ನಡೆ. ನಾವಿಬ್ಬರೂ ಅರಣ್ಯದೊಳಗಿನ ಯಾವುದಾದರೂ ಪ್ರಶಸ್ತವಾದ ಗುಡ್ಡದಗವಿಗಳಲ್ಲಿ ವಾಸಮಾಡೋಣ. ಮುಂದಿನ ಆಲೋಚನೆ ಮುಂದೆ." ಎಂದನು.

"ಆಹಾ! ಮಹಾರಾಕ್ಷಸ ಪ್ರಭುಗಳು ಅತ್ಯುತ್ತಮವಾದ ಸಲಹೆ ಹೇಳಿದಿರಿ!" ಎಂದು ಕಳ್ಳರ ನಾಯಕ ನಾಗಮಲ್ಲನು ಆನೆಯ ಮೇಲಿನಿಂದ ಕೆಳಗೆಹಾರಿ, ತನ್ನ ಅನುಚರರಿಬ್ಬರನ್ನೂ, ಅಂಗರಕ್ಷಕರನ್ನೂ ಆನೆಯಿಂದ ಇಳಿಯಲು ಹೇಳಿ, "ಉಗ್ರದಂಡ ಪ್ರಭುಗಳ ಆಲೋಚನೆ ಹೇಗಿದೆ ಕೇಳಿದಿರಪ್ಪ? ನಾವುಗಳು ಒಂದಾಗಿ ಅರಣ್ಯದಲ್ಲಿ ಗುಂಪು ಕಟ್ಟಿಕೊಂಡಿದ್ದರೆ, ನಮ್ಮ ದಾರಿ ದೋಚುವ ಕೆಲಸವನ್ನು ತಡೆಯುವವರು ಈ ಭೂಪ್ರಪಂಚದಲ್ಲಿ ಯಾರಿದ್ದಾರು? ಅದೇ ಸರಿ!" ಎಂದನು ಉತ್ಸಾಹದಿಂದ.

ಕಟುಕಕರಡಿಯುವನು ಕೋಪದಿಂದ ಕಣ್ಣು ತಿರುಗಿಸುತ್ತ ತನ್ನ ಸೇವಕ ಆಟವಿಕನನ್ನು ನೋಡಿ, "ಎಲೋ, ಆಟವಿಕ ಸೇವಕಾ! ಈ ಕಳ್ಳ ತಪ್ಪಿಸಿಕೊಂಡು ಹೋಗ

ದಂತೆ ಬಿಲ್ಲಿಗೆ ಬಾಣ ಹೂಡಿ ಗುರಿ ಹಿಡಿ!" ಎಂದು ಉಳಿದವರನ್ನು ನೋಡಿ, "ನಾನೀಗ ಮಹಾಮಾಂತ್ರಿಕ ಕರಡಿ ಕೆಂಗಣ್ಣರಕಡೆಗೆ ಹೊರಡುತ್ತೇನೆ. ಅವರ ಜತೆಯಲ್ಲಿ ಮಹಾಶೂರನಾದ ಕಾಳೀವರ್ಮನೆಂಬ ಯುವಕನೂ ಇದ್ದ. ಅವರಿಬ್ಬರೂ ಏನಾದರೆಂದು ಹುಡುಕಲು ನನ್ನೊಂದಿಗೆ ಯಾರುಯಾರು ಬರುವಿರಿ? ಕೈಯೆತ್ತಿರಿ" ಎಂದನು.

ಉಗ್ರದಂಡರಾಕ್ಷಸನ ಹೊರತು ಉಳಿದೆಲ್ಲರೂ ಅಂಗೀಕಾರಸೂಚಕವಾಗಿ ಕೈಗಳನ್ನು ಎತ್ತಿದರು. ಆಟವಿಕನು ಏನೋ ಅನುಮಾನದಿಂದ, "ಭಲ್ಲೂಕ ದೊರೇ! ಈ ಕಳ್ಳ ನಾಗಮಲ್ಲನೂ ಅವನ ಸ್ನೇಹಿತರೂ ನಮ್ಮೊಡನೆ ಬರುವುದಾಗಿ ಹೇಳುತ್ತಾರೆ. ಅವರನ್ನು ನಂಬುವುದು ಒಳ್ಳೆಯದೆನ್ನುವಿರಾ?" ಎಂದು ಕೇಳಿದನು.

"ಅವರು ನಂಬುಗೆಗೆ ತಕ್ಕವರಲ್ಲವೆಂದಾದರೆ ಇಲ್ಲಿಯೇ ತಲೆಗಳನ್ನು ತರಿದು ಹಾಕುತ್ತೇನೆ. ಅಯ್ಯಾ, ಉಗ್ರದಂಡಾ! ನಿನ್ನ ಸಮಾಚಾರವೇನು? ಕರಡಿ ಕೆಂಗಣ್ಣ ಮಹಾಮಾಂತ್ರಿಕರೊಂದಿಗೆ ಏನೋ ಕೆಲಸ ವಿರುವುದಾಗಿ ಹೇಳಿದೆಯಲ್ಲಾ?" ಎಂದು ಕೇಳಿದನು ಕಟುಕ ಭಲ್ಲೂಕ.

"ಆ ಮಾಂತ್ರಿಕ ಮಹಾಶಯರು ಸಜೀವಿಯಾಗಿದ್ದರೆ ತಾನೇ ನನಗೆ ಕೆಲಸವಿದ್ದೀತು?" ಎಂದನು ಉಗ್ರದಂಡರಾಕ್ಷಸ,

ಅದೇ ಹೊತ್ತಿಗೆ ಮಾಯಾಮರ್ಕಟವು ಕೋಟೆಯ ಗೋಡೆಯ ಮೇಲೆ ಕೀಚ. ಕೀಚವೆಂದು ಕೆಟ್ಟ ಧ್ವನಿಯಿಂದ ಕೂಗಿ, "ಏನಿದೂ! ಈ ಕೋಟೆಯೊಳಗೆ ನಡೆಯುವುದು ಯುದ್ಧವೋ ಕಣ್ಣು ಮುಚ್ಚಾಲೆಯಾಟವೋ? ಸೈನಿಕರು ಎರಡು ಭಾಗಗಳಾಗಿ ಸೀಳಿಹೋಗಿ, ಕೆಲವರು ಹಳೆಯ ರಾಜ ದುರ್ಮುಖನನ್ನೂ, ಮತ್ತೆ ಕೆಲವರು ಸಾಮಂತ ಸೂರ್ಯಭೂಪತಿಯನ್ನೂ ಗೆಲ್ಲಿಸಬೇಕೆಂದು ನೋಡುತಿದ್ದಾರೆ.



ಈ ಹೇಡಿ ಗಂಡುಗಳು ಮುಖಾಮುಖೀ ಯುದ್ಧ ಮಾಡುವುದನ್ನು ಬಿಟ್ಟು, ಕಂಬಗಳ ಹಿಂದೆಯೂ, ಗೋಡೆಗಳ ಮರೆಯಲ್ಲಿಯೂ ಹೊಂಚಿ ಅಡಗಿ ಎಂಥದೋ ಆಟ ನಡೆಸುತ್ತಿದ್ದಾರೆ! ಥೂಥೂ! ಶುದ್ಧ ಪುಕ್ಕರು!" ಎಂದಿತು.

ಆ ಮಾತುಗಳನ್ನು ಕೇಳಿ ಕಟುಕಭಲ್ಲೂಕನು ಸ್ವಲ್ಪ ಮಟ್ಟಿಗೆ ಸ್ತಿಮಿತಕ್ಕೆ ಬಂದು. "ಉಗ್ರದಂಡಾ! ಕೇಳಿದೆಯಷ್ಟೇ ಹುಚ್ಚು ಕೋತಿಯ ಮಾತು? ಆ ದುರ್ಮುಖರಾಜನು ಜೀವದೊಂದಿಗೆ ನನ್ನ ಕೈಗೆ ಸಿಗುವನೆಂದು ಕಾಣುತ್ತದೆ. ಅಬ್ಬ! ಈ ಹಾಳಾದ ಕರಡೀ ರೂಪದಿಂದ ನನಗೆ ಬೇಗದಲ್ಲಿ ಬಿಡುಗಡೆಯಾಗುತ್ತದೆ" ಎಂದನು.

ಉಗ್ರದಂಡ ರಾಕ್ಷಸನು ತಿರಸ್ಕಾರ ಸೂಚಿಸುವಂತೆ ಕಲ್ಲಿನ ಗದೆಯನ್ನು ನೆಲಕ್ಕೆ ಹೊಡೆದು, "ಎಲೋ ಕಟುಕಭಲ್ಲೂಕಾ! ನೀನು ಇನ್ನೂ ಹಳೆಯ ಹಾಡೇ ಹಾಡಿಕೊಂಡಿರುವೆ. ಕರಡಿ ಕೆಂಗಣ್ಣ ಮಾಂತ್ರಿಕನು

ಜೀವದೊಂದಿಗಿರುವಾಗ ಅವನ ಮಂತ್ರ ದಂಡ ಈ ಕೋತಿಯ ಕೈಗೆ ಬರಲು ಸಾಧ್ಯವೆ? ಇದನ್ನು ಯೋಚಿಸಿದೆಯಾ?" ಎಂದು ಚಪ್ಪಾಳೆತಟ್ಟಿ ಮಾಯಾಮರ್ಕಟವನ್ನು ನೋಡಿ, "ಎಲೋ! ಮರ್ಕಟನೇ! ನೀನೇನೋ ಕರಡಿ ಕೆಂಗಣ್ಣರ ಮಂತ್ರ ದಂಡವನ್ನು ಹಿಡಿದಿರುವೆ! ಚೆನ್ನಾಗೇ ಇದೆ. ಆತನ ಶವವನ್ನು ಏನು ಮಾಡಿದೆ?" ಎಂದು ಕೇಳಿದನು.

"ಆತನ ಶವವನ್ನು ತುಂಡು ತುಂಡು ಮಾಡಿ ಕಾಗೆಗಳಿಗೂ ಹದ್ದುಗಳಿಗೂ ಹಾಕಿಬಿಟ್ಟೆ. ಆದರೆ ಆ ಪಕ್ಷಿಗಳನ್ನು ಸಮೀಪಕ್ಕೆ ಬರಲು ಬಿಡದಂತೆ ಕಾಳೀವರ್ಮನೆಂಬ ಅವನ ಶಿಷ್ಯನು ಕಾವಲುಕಾಯುತ್ತಿದ್ದಾನೆ" ಎಂದು ಹೇಳಿ, ಮಂತ್ರದಂಡವನ್ನು ಗೋಡೆಯ ಮೇಲೆ ಉದ್ದಕ್ಕೆ ಆನಿಸಿಟ್ಟು, ಅದರ ಮೇಲೆ ಏರಿ ದೂರಕ್ಕೆ ದೃಷ್ಟಿ ಹಾಯಿಸುತ್ತ, "ಅರೆ! ಅರೆ! ಆ ಕರಡಿಕೆಂಗಣ್ಣ ಮಾಂತ್ರಿಕ ಯಾವ ಸಂಜೀವಿನೀ ವಿದ್ಯೆಯಿಂದಲೋ ಮತ್ತೆ ಬದುಕಿದ್ದಾನೇನು? ಕೋಣನ ಮೇಲೆ ಕುಳಿತುಕೊಂಡು ಬರುತ್ತಿದ್ದಾನೆ! ಅವನ ಪಕ್ಕದಲ್ಲಿ ಕುದುರೇ ಮೇಲೆ ಆ ಕಾಳೀವರ್ಮ ಎಂಬವನೂ ಬರುತ್ತಾನೆ! ಅವರನ್ನು ಹಿಡಿಯಲು ಚಂದ್ರಶಿಲಾ ನಗರದ ರಾಜ ಜಿತಕೇತುವಿನ ಮಂತ್ರಿ ಸೈನ್ಯದೊಂದಿಗೆ ಆಕಡೆಯಿಂದ ಬರುತ್ತಿದ್ದಾನೆ. ಬರಲಿ ಬರಲಿ! ಆಹಾ! ಈ ದಿನ ಭಲೇ ಹಬ್ಬ ನನ್ನ ಕಣ್ಣಿಗೆ. ಅವರಿಬ್ಬರ ಶಿರಚ್ಛೇದಗಳನ್ನು ಕಣ್ಣಾರೆ ನೋಡಿದ ಹೊರತು ನಾನು ಇಲ್ಲಿಂದ ಕದಲಲಾರೆ." ಎಂದಿತು.

ಮಾಯಾ ಮರ್ಕಟದ ಮಾತನ್ನು ಕೇಳಿ ಕಟುಕ ಭಲ್ಲೂಕನು, "ಹೇ! ಭೈರವಾ!" ಎಂದು ಗಟ್ಟಿಯಾಗಿ ಕೂಗಿ, "ಎಲೋ ಸುಡುಗಾಡು ಮರ್ಕಟನೇ! ಏನು ಬೊಗಳುವೆಯೋ? ನಿನಗೇನಾದರೂ ಹುಚ್ಚೋ ಅಥವಾ ನಮಗೇ ಹುಚ್ಚು ಹಿಡಿಸಲು ನೋಡುವೆಯಾ?" ಎಂದನು.

ಅವನ ಮಾತು ಮುಗಿಯುವುದರೊಳಗೆ ವೇಗವಾಗಿ ಕುದುರೆಯ ಮೇಲೆ ಮುಂದೆ ಕಾಳೀವರ್ಮನೂ, ಅವನ ಹಿಂದೆ ಕೋಣದ ಮೇಲೆ ಕರಡಿ ಕೆಂಗಣ್ಣ ಮಾಂತ್ರಿಕನೂ ಅಲ್ಲಿಗೆ ಬಂದು, ಕೋಟೆಯ ಗೋಡೆಯ ಮೇಲಿರುವ ಮಾಯಾ ಮರ್ಕಟವನ್ನು ನೋಡಿದ ಕೂಡಲೇ, "ಕಟುಕರ ನಾಯಕ ಭಲ್ಲೂಕಾ! ಮಂತ್ರ ದಂಡವನ್ನು ಅಪಹರಿಸಿದ ಈ ಮಾಯಾ ಮರ್ಕಟವನ್ನು ಜೀವದೊಂದಿಗೆ ಬಿಡಕೂಡದು!" ಎಂದು ಕೂಗಿ ಹೇಳಿದರು.

ಮರುಕ್ಷಣದಲ್ಲಿ ಮರ್ಕಟನು ಕಿಚಕಿಚನೆ ನಗುವನ್ನು ಹಾರಿಸುತ್ತ, ಛಂಗನೆ ಕೋಟೆಯ ಒಳ ಭಾಗಕ್ಕೆ ಹಾರಿಬಿಟ್ಟನು.

—(ಇನ್ನೂ ಇದೆ)





# ಕರಡಿ ಕೆಂಗಣ್ಣ

## ೧೩

[ದುರ್ಮುಖರಾಜನು ಎಲ್ಲದಕ್ಕೂ ಸಿದ್ಧನಾಗಿ ತನ್ನ ರಾಜ್ಯವನ್ನು ಆಕ್ರಮಿಸಿದ ಸಾಮಂತನನ್ನು ಓಡಿಸುತ್ತ ಕೋಟೆಯೊಳಗೆ ಹೊಕ್ಕನು. ಕೋಟೆಯ ಬಾಗಿಲನ್ನು ಭೇದಿಸಲು, ಕಟುಕಕರಡಿಯುವನೂ ಉಗ್ರದಂಡನೂ ಪ್ರಯತ್ನಿಸುತ್ತಿರುವಾಗ, ಮಾಯಾ ಮರ್ಕಟವೊಂದು ಹೊಸತಾಗಿ ತೋರಿತು. ಅದು ಕಾಳೀವರ್ಮನೂ ಕರಡಿ ಕೆಂಗಣ್ಣ ಮಾಂತ್ರಿಕನೂ ಅಲ್ಲಿಗೆ ಬರುವುದನ್ನು ತೋರಿಸಿ, ಕೋಟೆಯ ಗೋಡೆಯಿಂದ ಒಳಗಡೆಗೆ ಧುಮುಕಿತು.]

**ಮಾ**ಯಾ ಮರ್ಕಟನ ಮಾತು ಕೇಳಿ ಕಟುಕ ಕರಡಿಯುವನು ಬೆರಗಾಗಿ ಮರ್ಕಟನು ತೋರಿಸಿದ ಕಡೆಗೆ ನೋಡಿದನು. ನಿಜವೇ ! ಕಾಳೀವರ್ಮನೂ, ಮಹಾ ಗುರು ಕರಡಿ ಕೆಂಗಣ್ಣ ಮಾಂತ್ರಿಕನೂ ಅತ್ತ ಕಡೆಯಿಂದ ಬರುತ್ತಿದ್ದರು. ಅವರನ್ನು ನೋಡಿದ ಉತ್ಸಾಹದಲ್ಲಿ ನರಭಲ್ಲೂಕನು ಹಾರಿಕುಣಿದು, ತನ್ನ ಚಪಗೊಡಲಿಯನ್ನು ಗಿರಗಿರನೆ ತಿರುಗಿಸುತ್ತ, "ಆಹಾ ! ಅಯ್ಯಗಳಿರಾ ! ಎಷ್ಟುದಿನಗಳ ತರುವಾಯ ನಿಮ್ಮಿಬ್ಬರ ದರ್ಶನ ಭಾಗ್ಯಲಭಿಸಿತು! ಇನ್ನು ನನ್ನ ಎಲ್ಲಾ ಕಷ್ಟಗಳೂ ತೀರಿದಂತಾಯಿತು ! ಜೈ ಭೈರವಾ !" ಎಂದು ಚಪಗೊಡಲಿಯನ್ನು ಆಕಾಶಕ್ಕೆ ಹಾರಿಸಿ ಹಿಡಿದನು. ಆಗ ಕರಡಿ ಕೆಂಗಣ್ಣ ಮಾಂತ್ರಿಕನು ಕೋಣ ವಾಹನದ ಮೇಲಿನಿಂದ ಕೆಳಗಿಳಿದು, ಕಟುಕಭಲ್ಲೂಕನ ಬಳಿಗೆ ಬಂದು" ಎಲೋ ನರಭಲ್ಲೂಕಾ ! ಆನಂದದಿಂದ ಉಬ್ಬಿಗಿಬ್ಬಿ ಹೋಗಬೇಡ. ಆ ಮಾಯಾ ಮರ್ಕಟನನ್ನು ಸರಿಯಾಗಿ ನೋಡು. ಆ ರೂಪದಲ್ಲಿ ಬಂದವನು ನಿಜವಾದ ಕೋತಿಯಲ್ಲ. ಅವನು ಮಿಥ್ಯಾ ಮಿಶ್ರನೆಂಬ ಮಹಾ ತಾಂತ್ರಿಕನ ಶಿಷ್ಯನಾದ ಭ್ರಾಂತಿಮತಿ. ಅವನು ನನ್ನ ಮಂತ್ರದಂಡವನ್ನು ಕದ್ದುಕೊಂಡು ಬಂದಿದ್ದಾನ. ಮೊದಲು ನಾವು ನನ್ನ



ಮಂತ್ರದಂಡವನ್ನು ವಶಪಡಿಸಿಕೊಳ್ಳಬೇಕು. ಅದು ಬಹಳ ಮುಖ್ಯ." ಎಂದನು.

ಅದಕ್ಕೆ ಏನು ಉತ್ತರ ಕೊಡಲೂ ತೋರದೆ ಕಟುಕ ಕರಡಿಯುವನು "ಓಹೋ !" ಎಂದು ತಲೆ ಯಾಡಿಸಿದನು. ಇಷ್ಟರಲ್ಲಿ ರಾಕ್ಷಸನನ್ನೂ ಆನೆಗಳನ್ನೂ ನೋಡಿ ಆಶ್ಚರ್ಯಪಡುತ್ತಿದ್ದ ಕಾಳೀವರ್ಮನು, "ಎಲೋ, ಕರಡಿಯಾಗಿ ನಿಂತ ಕಟುಕ ವೃತ್ತಿಯುವನೇ, ಸಾಮಾನ್ಯ ಮಾನವನಾಗಿದ್ದ ನೀನು ಈ ರಾಕ್ಷಸನನ್ನೂ ಆನೆಗಳನ್ನೂ, ಈ ಪರಿವಾರಗಳನ್ನೂ ಹೇಗೆ ಸಂಪಾದಿಸಿಕೊಂಡೆಯೋ ? ಆಶ್ಚರ್ಯವಾಗಿದೆಯಲ್ಲಾ !" ಎಂದನು.

ಕಾಳೀವರ್ಮನ ಮಾತು ಕೇಳಿ ಉಗ್ರದಂಡ ರಾಕ್ಷಸನು ಸಣ್ಣಗೆ ನಕ್ಕು "ನೀನೇ ಅಲ್ಲವೇ ಕಾಳೀವರ್ಮನೆಂಬ ಕ್ಷತ್ರಿಯ ವೀರ ? ನಿನ್ನನ್ನು ಕುರಿತು ಕಟುಕಭಲ್ಲೂಕನು ಹೇಳಿದುದನ್ನು ಕೇಳಿದ್ದೇನೆ. ಕರಡಿ ಕೆಂಗಣ್ಣ ಮಾಂತ್ರಿಕರೆಂದರೆ ಇವರೇ ಏನು? " ಎಂದು ದೂರದಲ್ಲಿ ನಿಂತಿದ್ದ ಚಂದ್ರಶಿಲಾ ನಗರದ ಮಂತ್ರಿಯನ್ನೂ ಅವನೊಂದಿಗಿದ್ದ ಕೆಲ ಮಂದಿ ಅಶ್ವಿಕರನ್ನೂ ಸೈನಿಕರನ್ನೂ ಕಾಳೀವರ್ಮನಿಗೆ ತೋರಿಸುತ್ತ, "ಅಲ್ಲಿ ನೋಡಿದೆಯಾ ಕಾಳೀವರ್ಮಾ ? ಮನುಷ್ಯರ ಮಧ್ಯಕ್ಕೆ ಬಂದ ರಾಕ್ಷಸನಾದ ನನ್ನನ್ನು ನೋಡಿ ಆಶ್ಚರ್ಯಪಡುವುದನ್ನು ಬದಿಗಿಟ್ಟು, ನಿನ್ನನ್ನು ಹಿಡಿಯಲು ಬಂದ ಆ ಸೈನಿಕರನ್ನು ನೋಡು. ಚಂದ್ರಶಿಲಾ ನಗರದ ಜಿತಕೇತು ರಾಜನು ಕಳುಹಿಸಿದ್ದಾನಂತೆ. ಮಾಯಾ ಮರ್ಕಟನು ಈ ಸಂಗತಿ ಹೇಳಿದುದರಿಂದ ನನಗೆ ಗೊತ್ತಾಯಿತು. ನಿನ್ನ ಮೇಲೆ ಬರುವ ಈ ಅಪಾಯದಿಂದ ಹೇಗೆ ಪಾರಾಗುವಿಯೋ ? ಯಾವುದಕ್ಕೂ ಎಚ್ಚರವಾಗಿರಯ್ಯ." ಎಂದನು.

ಕಾಳೀವರ್ಮನು ತನ್ನ ಕುದುರೆಯನ್ನು ಹಿಂದಕ್ಕೆ ತಿರುಗಿಸಿ, ಕತ್ತಿಯನ್ನು ಸೆಳೆದುಕೊಂಡು ಉಗ್ರದಂಡ ರಾಕ್ಷಸನನ್ನು ನೋಡಿ, "ನಿನ್ನ ಹೆಸರೇನೋ ನನಗೆ ಗೊತ್ತಿಲ್ಲ. ಇಲ್ಲಿ ಸೇರಿರುವ ಇಷ್ಟು ಮಂದಿಗೆಲ್ಲಾ ನಾಯಕನು ಯಾರು ? ರಾಕ್ಷಸನಾಗಿರುವ ನೀನೇಯೋ, ಅಲ್ಲಾ ಕರಡಿಯಾದ ಕಟುಕನೋ ? " ಎಂದು ಕೇಳಿದನು.

ಆ ಪ್ರಶ್ನೆಗೆ ಉಗ್ರದಂಡ ರಾಕ್ಷಸನು ಉತ್ತರ ಕೊಡುವುದರೊಳಗೆ, ಕಟುಕಕರಡಿಯುವನು "ಜೈ ಭೈರವಾ !" ಎಂದು ಗಟ್ಟಿಯಾಗಿ ಕೂಗಿ, "ಕಾಳೀವರ್ಮ ದೊರೇ ! ಈ ಉಗ್ರದಂಡನೆಂಬ ರಾಕ್ಷಸನಿಗೂ ಕಳ್ಳರ ನಾಯಕ ನಾಗಮಲ್ಲನಿಗೂ, ದುರ್ಮುಖನ ಅಂಗರಕ್ಷಕರಿಗೂ ಎಲ್ಲರಿಗೂ ಈಗ ನಾಯಕನು ನಾನೇ ! ನನಗೆ ನೀವು. ಏನು ಮಾಡಬೇಕೋ ನನಗೇ ನಿಮ್ಮ ಅಪ್ಪಣೆಯಾಗಲಿ. ನಾನು ನೆರವೇರಿಸಿ ಬಿಡುತ್ತೇನೆ." ಎಂದನು.

ಇದನ್ನೆಲ್ಲ ನೋಡುತ್ತ, ಪರೀಕ್ಷಿಸಿ ತಲೆಯಾಡಿಸಿ ಕೊಂಡಿದ್ದ ಕರಡಿ ಕೆಂಗಣ್ಣನೊಂದಿಗೆ ಕಟುಕಕರಡಿಯುವನು, "ಗುರುಗಳೇ ! ನಿಮ್ಮ ಪ್ರೀತಿಯ ಶಿಷ್ಯ

ನಾನು! ನನಗೆ ಏನು ಆಜ್ಞೆ ಮಾಡುವಿರೋ ಮಾಡಿರಿ! ಒಂದು ಸಾರಿ ತಮ್ಮ ಶಕ್ತಿ ಎಂತಹುದೆಂದು ನೋಡಿದ ಆ ಮಾಂತ್ರಿ ಜೀವಗುಪ್ತನು ನಮ್ಮ ಮೇಲೆ ದಾಳಿಮಾಡುವನೆಂದು ನನಗೆ ತೋರುವುದಿಲ್ಲ. ನೋಡಿದಿರಾ, ದೂರದಲ್ಲೇ ಕುದುರೆಯ ಮೇಲೆ ನೋಡುತ್ತ ಹೇಗೆ ನಡುಗುತ್ತಿದ್ದಾನೆ ಥರಥರನೆ!" ಎಂದನು.

ಕರಡಿ ಕೆಂಗಣ್ಣನು ಮುಚ್ಚಿರುವ ಕೋಟೆಯ ಬಾಗಿಲನ್ನು ನೋಡಿ ನಿರುತ್ಸಾಹದಿಂದ, "ನನ್ನ ಗುರುವನ್ನೇ ಇಕ್ಕಟ್ಟಿಗೆ ಸಿಕ್ಕಿಸಿದ ಕೆಟ್ಟ ತಾಂತ್ರಿಕನ ಶಿಷ್ಯನಾದ ಈ ಮಾಯಾ ಮರ್ಕಟನು, ನನ್ನನ್ನೇ ಹೊಂಚು ಹಾಕುವನೆಂದು ತಿಳಿಯದೆ ನನ್ನ ಮಂತ್ರ ದಂಡವನ್ನು ಕಳೆದುಕೊಂಡೆ. ಇವನೊಬ್ಬ ನನ್ನ ಬೆನ್ನ ಹಿಂದೆ ಕಾಯುತ್ತಿದ್ದಾನೆಂದು ಸಂದೇಹವಾದರೂ ಇರುತ್ತಿದ್ದರೆ, ಮಂತ್ರದಂಡವನ್ನು ನದಿಯ ಬದಿಯ ಮರಕ್ಕೆ ಒರಗಿಸಿಟ್ಟು ಸ್ನಾನಕ್ಕೆ ಇಳಿಯುತ್ತಿರಲಿಲ್ಲ. ಇನ್ನು ಹೇಗೋ ತಿಳಿಯದಲ್ಲ! ಅದೊಂದಿರುತ್ತಿದ್ದರೆ!" ಎಂದನು ತನಗೆ ತಾನೇ.

ಅದನ್ನು ಕೇಳಿಕೊಂಡ ಕಟುಕಕರಡಿಯುವನು ತನ್ನ ಚಪಗೊಡಲಿಯನ್ನು ತನ್ನ ಅಂಗೈಯ ಮೇಲಿಟ್ಟು ಕೆಂಗಣ್ಣ ಮಾಂತ್ರಿಕನ ಮುಂದೆಬಂದು, "ಅಯ್ಯಾ, ಮಹಾಮಾಂತ್ರಿಕ ಪ್ರಭುಗಳೇ! ಆ ಮಂತ್ರದಂಡವು ಕೈ ತಪ್ಪಿ ಹೋಯಿತೆಂದು ಚಿಂತಿಸಬೇಡಿರಿ. ಈ ಚಪ ಗೊಡಲಿ ಕೂಡಾ ಮಂತ್ರ ಪ್ರಭಾವವಿರುವಂಥಾದ್ದು ತಾನೇ? ಇದರ ಪ್ರಭಾವಕ್ಕೆ ಉಗ್ರದಂಡನಂಥ ರಾಕ್ಷಸನೇ ಹೆದರಿ ನಡುಗುತ್ತಾನೆ. ಇದನ್ನು ತೆಗೆದು ಕೊಂಡು ನನ್ನನ್ನು ಕೂಡಲೇ ಮನುಷ್ಯನನ್ನಾಗಿ ಮಾಡಿಬಿಡಿ! ಈ ಕರಡಿಭಾರ ಸಾಕೋಸಾಕಾಯಿತು! ಇನ್ನು ತಾಳಲಾರೆ!" ಎಂದನು.

"ಹೌದಪ್ಪಾ. ನಿನ್ನ ಗೊಡವೇನೇ ಹೇಳಿಕೊಂಡ ರಾಯಿತೇ? ನೀನು ನಿನ್ನ ಗುರುವಿಗೆ ತಂದು



ಸಮರ್ಪಿಸಬೇಕಾಗಿದ್ದ ದುಮುಖರಾಜನ ತಲೆಯ ವಿಷಯವೇನಾಯಿತು? ಕೋಟೆಯೊಳಗೆ ಹೊಕ್ಕ ಆ ರಾಜನ ತಲೆ ಇಷ್ಟು ಹೊತ್ತಿಗೆ ಆ ಸಾಮಂತ ಸೂರ್ಯ ಭೂಪತಿಯ ಕತ್ತಿಯಿಂದ ಛಿನ್ನಾಭಿನ್ನ ವಾಗಿರಬಹುದು." ಎಂದು ನೆನಪು ಮಾಡಿದನು ಉಗ್ರದಂಡ ರಾಕ್ಷಸ.

ದುರ್ಮುಖರಾಜನ ಹೆಸರು ಕೇಳುತ್ತಲೇ ಕರಡಿ ಕೆಂಗಣ್ಣ ಮಾಂತ್ರಿಕನು ಅದುರಿಬೀಳುತ್ತ "ಎಲೋ ನರಭಲ್ಲೂಕಕಟುಕಾ! ಆ ರಾಜ ಇನ್ನೂ ಬದುಕಿಯೇ ಇದ್ದಾನೇನು? ಸಾಮಂತ ಸೂರ್ಯಭೂಪತಿ ಎಂದರೆ ಯಾರವನು? ಕೋಟೆಯೊಳಗೆ ಯುದ್ಧ ಯಾರು ಯಾರೊಳಗೆ ನಡೆಯುತ್ತದೆ? ಏನಿದೆಲ್ಲಾ? ದುರ್ಮುಖರಾಜನು ಹೇಗೆ ನಿನ್ನನ್ನು ತಪ್ಪಿಸಿ ಕೋಟೆ ಯೊಳಗೆ ಹೊಕ್ಕ?" ಎಂದು ಕೇಳಿದನು.

ಕಟುಕಕರಡಿಯುವನು ಕೆಲವು ಮಾತುಗಳಲ್ಲಿ, ತಾನು ದುರ್ಮುಖರಾಜನ ಹಿಂದೆಬಿದ್ದು ಅರಣ್ಯಕ್ಕೆ ಹೋದಾಗ



ನಿಂದ ಆಕ್ಷಣದವರೆಗೆ ನಡೆದ ಸಂಗತಿಯನ್ನೆಲ್ಲಾ ಹೇಳಿ, "ಮಾಂತ್ರಿಕ ಪ್ರಭುಗಳೇ! ಆ ರಾಜನು ನಾವು ಅಂದುಕೊಂಡಷ್ಟು ಕೆಟ್ಟವನಾಗಿ ಕಾಣುವುದಿಲ್ಲ. ಆಮೇಲೆ ನಿಮ್ಮ ಇಷ್ಟ. ಮೊದಲು ನನ್ನನ್ನು ಮನುಷ್ಯನನ್ನಾಗಿ ಬದಲಾಯಿಸಿಬಿಡಿ. ಈ ರೋಮಮಯ ಕರಡಿಯ ಚರ್ಮದೊಳಗೆ ಧಾವೆಯ ಉಷ್ಣವನ್ನು ತಡೆಯಲಾಗದೆ ಬಹಳಪೇಚಾಡಿಕೊಂಡಿದ್ದೇನೆ. ನಿಮ್ಮ ಪುಣ್ಯ, ದಯಮಾಡಿರಿ!" ಎಂದು ಪ್ರಾರ್ಥಿಸಿಕೊಂಡನು.

"ಪಾಪ ಗುರುಗಳೇ! ಈ ಕಟುಕ ಕರ್ಮದವನ ಮೇಲೆ ಕರುಣೆ ತೋರಿಸಿಬಿಡಿರಿ. ಹೇಗೋ ಬದುಕಿಕೊಂಡಿರಲಿ!" ಎಂದನು ಕಾಳೀವರ್ಮ.

ಕರಡಿಕೆಂಗಣ್ಣ ಮಾಂತ್ರಿಕನು ಮಂತ್ರದ ಚಪಗೊಡಲಿಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು, ಏನೋ ಮಂತ್ರವನ್ನು ಉಚ್ಚರಿಸುತ್ತ ಕೊಡಲಿಯನ್ನು ಕಟುಕಕರಡಿಯವನ ಪಾದಗಳಿಗೆ ತಾಗಿಸಿದನು. ಕೂಡಲೇ ಅವನ ಪಾದಗಳು ಮನುಷ್ಯನ ಪಾದಗಳಾಗಿ ಬದಲಾದುವು. ತರುವಾಯ ಕೊಡಲಿಯನ್ನು ಅವನ ತಲೆಯವರೆಗೂ ತಾಗಿಸುತ್ತಾಹೋದನು. ಮರುಕ್ಷಣದಲ್ಲಿ ಕಟುಕಕರಡಿಯವನ ಕರಡಿ ರೂಪವೂ ಹೋಗಿ ಶರೀರವು ಕುತ್ತಿಗೆಯವರೆಗೂ ಮನುಷ್ಯನದಾಯಿತು. ತಲೆಮಾತ್ರ ಕರಡಿಯದೇ ಆಗಿ ಉಳಿಯಿತು. "ಆಯಿತಪ್ಪ, ಇಷ್ಟೇ" ಎಂದು ಸುಮ್ಮನಾದನು ಕರಡಿಕೆಂಗಣ್ಣ.

ತಾನು ಎಂದಿನಂತೆ ಮನುಷ್ಯನಾಗಿಬಿಟ್ಟೆನೆಂದುಕೊಂಡು ಕಟುಕನು, ಕರಡಿಕೆಂಗಣ್ಣ ಮಾಂತ್ರಿಕನ ಮುಂದೆ ಸಾಷ್ಟಾಂಗ ಪ್ರಣಾಮ ಮಾಡಿ ಏಳುತ್ತ, "ದಯಾಮಯರಾದ ಮಾಂತ್ರಿಕ ಪ್ರಭೂ! ಎಷ್ಟು ದಿನಗಳ ಮೇಲೆ ನಾನು ಹಿಂದಿನ ಮನುಷ್ಯನಾದೆ! ಜೀವಕ್ಕೆ ಎಷ್ಟೊಂದು ಸಂತೋಷವಾಗಿದೆಯೆಂದರೆ ಮಾತಿನಿಂದ ಹೇಳಲು ಸಾಧ್ಯವಿಲ್ಲ! ನೀವು ಸಾಕ್ಷಾತ್ ದೇವರೇ ಸರಿ!" ಎಂದನು.

ಆ ಮಾತು ಕೇಳಿ ಕಳ್ಳರನಾಯಕ ನಾಗಮಲ್ಲನು ಕಿಟಕಿಟನೆ ನಗತೊಡಗಲು, ಅವನನುಸರಿಸಿ ಎಲ್ಲರೂ ದೊಡ್ಡದನಿಯಿಂದ ನಿರರ್ಗಳವಾಗಿ ನಕ್ಕರು. ಅದನ್ನು ನೋಡಿ ಕಟುಕನು ಆಶ್ಚರ್ಯಪಡುತ್ತ ಅವರನ್ನೆಲ್ಲಾ ಪ್ರಶ್ನಾರ್ಥಕವಾಗಿ ಮಿಕಿಮಿಕಿ ನೋಡಿದನು. ಆಗ ಉಗ್ರದಂಡ ರಾಕ್ಷಸನು ತನ್ನ ಕಲ್ಲಿನ ಗದೆಯಿಂದ ಅವನ ತಲೆಯನ್ನು ಮುಟ್ಟಿ, "ಕಣ್ಣಿದ್ದೂ ಕಾಣಲಾಗದ ಕುರುಡಾ! ಈ ನಿನ್ನ ಮುಖ ತಲೆ ಸಾಕ್ಷಾತ್ ಕರಡಿಯದೇ. ಕುತ್ತಿಗೆಯವರೆಗೆ ಮನುಷ್ಯನಾದದ್ದು ನಿಜ. ತಲೆ ಹೀಗೇ ಇರುತ್ತದೆಂದಾಯಿತು." ಎಂದನು.

ಕಟುಕನು ಎರಡು ಕೈಗಳಿಂದ ತಲೆಯನ್ನು ತಡವಿಕೊಂಡು, "ಅಯ್ಯೋ" ಎಂದು ಆರ್ತನಾದ ಮಾಡಿ, "ಮಾಂತ್ರಿಕ ಪ್ರಭುವೇ! ಈ ಅನ್ಯಾಯವೇನಿದು? ಮನುಷ್ಯನ ಶರೀರವೂ ಕರಡಿಯ ತಲೆಯೋ? ಕೇವಲ ಕರಡಿಗಿಂತಲೂ ವಿಕೃತವಾಯಿತಲ್ಲಾ! ನನ್ನನ್ನು



ನೋಡಿದವರೆಲ್ಲ ನಗುತ್ತಾರೆ ಇನ್ನು ! ಈ ನಗೆಪಾಟಲಿನಲ್ಲಿ ನನ್ನ ವೀರಧೀರ ಕಾರ್ಯಗಳೆಲ್ಲ ಮಣ್ಣು ತಿಂದು, ರಾಜಾಜ್ಞೆಯ ಕಟುಕ ಕಾರ್ಯವನ್ನಾದರೂ ಹೇಗೆ ನೆರವೇರಿಸಿಯೇನು ? ಹೇಗೆ ಬದುಕು ಸಾಗಿಸಿಯೇನು ? ಕೆಟ್ಟೆನಲ್ಲಾ ಮಾಂತ್ರಿಕ ಪ್ರಭುಗಳೇ ! ಬದುಕಿಯೂ ಸತ್ತ ಹಾಗೆ ನರಕಯಾತನೆ ಯಾಯಿತಲ್ಲಾ !" ಎಂದು ಗೋಳಿಟ್ಟನು.

ಕರಡಿ ಕೆಂಗಣ್ಣನು ಚಿಂತೆಯಿಂದ ತಲೆತಗ್ಗಿಸಿ, "ಅಪ್ಪಾ ಕಟುಕ ಕಮ್ರ್ಯಾ ! ಹೀಗೆ ನಿರಾಶನಾಗಿ ವಿರಾಗಿಯಾಗಿ ಬಿಡಬೇಡ. ಪ್ರಸ್ತುತಕ್ಕೆ ಇರುವ ತಲೆಯಿಂದಲೇ ತೃಪ್ತನಾಗಿ ಧೈರ್ಯದಿಂದಿರು. ತಲೆ ಕರಡಿಯದಾದರೇನಾಯಿತು ? ಅದರೊಳಗಿರುವ ಬುದ್ಧಿ ಮನಷ್ಯನದೇ. ನನ್ನ ಸರ್ವಸಾಧಕವಾದ ಮಂತ್ರದಂಡವನ್ನು ಆ ಮಾಯಾ ಮರ್ಕಟ ರೂಪದಲ್ಲಿ ಬಂದ ದುಷ್ಟ ಭ್ರಾಂತಿಮತಿ ಅಪಹರಿಸಿದ್ದರಿಂದ, ನನ್ನ ಮಂತ್ರಶಕ್ತಿ ಸ್ವಲ್ಪಕ್ಷೀಣಿಸಿ ಬಿಟ್ಟಿದೆ. ಅದರಿಂದಲೇ ನಿನ್ನನ್ನು ಪೂರ್ತಿ ಮಾನವನನ್ನಾಗಿ ಮಾಡಲು ಸಾಧ್ಯವಾಗಲಿಲ್ಲ. ಅದು ಸಿಕ್ಕಿದರೆ ಏನು ಬೇಕಾದರೂ ಮಾಡಬಲ್ಲೆ. ಅದು ನನಗೆ ಸಿಕ್ಕುವಂತೆ ನೀನೂ ಪ್ರಯತ್ನಿಸಬೇಕು !" ಎಂದನು.

ಕಟುಕನು ಕಣ್ಣೀರು ಸುರಿಸುತ್ತ "ಈ ರೂಪದಲ್ಲಿ ನಾನೇನು ಸಹಾಯಮಾಡೇನು ? ಈ ವಿಚಿತ್ರ ರೂಪದಲ್ಲಿರುವ ನನಗೆ ಜಿತಕೇತು ಮಹಾರಾಜರು ಮತ್ತೆ ಪ್ರಧಾನ ಕಟುಕನ ಉದ್ಯೋಗವನ್ನು ಕೊಡುವರೇ ? ತೆಗೆದು ಹಾಕುತ್ತಾರೆ. ಆಮೇಲೆ ಹೇಗೆಬದುಕಲಿ ? ಏನು ಮಾಡಲಿ ? ಈ ಹಾಳು ಮೂತಿ ಹೊತ್ತುಕೊಂಡು ಹೇಗೆ ತಿರುಗಲಿ ?" ಎಂದು ಹಲುಬಿದನು.

ಅವನ ದುಃಖವನ್ನು ನೋಡಿ ಕಾಳೀವರ್ಮನು ಕನಿಕರಪಡುತ್ತ, ಅವನ ಹೆಗಲಿಗೆ ಕೈಹಾಕಿ ತಟ್ಟುತ್ತ, "ಈ ಭಲ್ಲೂಕಾವತಾರಕ್ಕಾಗಿ ಚಿಂತಿಸಬೇಡ ಬಿಡಪ್ಪಾ. ಮಾಂತ್ರಿಕ ಕೆಂಗಣ್ಣ ಗುರುಗಳು ತಮ್ಮ ಮಂತ್ರದಂಡವನ್ನು ಕಳೆದುಕೊಂಡ ಸಂಗತಿಯನ್ನು ತಿಳಿದು. ಜಿತಕೇತು ರಾಜನ ಮಂತ್ರಿ ಜೀವಗುಪ್ತನಿಗೆ ಹೊಸ ಧೈರ್ಯ ಬಂದಿದೆ. ನಮ್ಮನ್ನೆಲ್ಲಾ ಹತಮಾಡಿ ಬಿಡುವ ಉದ್ದೇಶದಿಂದಲೇ ಸೈನಿಕರನ್ನು ತೆಗೆದುಕೊಂಡು ನಮ್ಮ ಬೆಂಬತ್ತಿ ಬಂದಿದ್ದಾನೆ. ಅತ್ತನೋಡು ! ದೂರದಲ್ಲಿ ಆ ಮಂತ್ರಿ ಹೇಗೆ ನೋಡುತ್ತಿದ್ದಾನೆ ! ಸೈನಿಕರು ಹೇಗೆ ಸಿದ್ಧರಾಗಿ ನಿಂತಿದ್ದಾರೆ ! ಹೀಗೆ ಈಗ ಮೈ ಮೇಲೆ ಬರುವುದನ್ನು ನೋಡುವುದು ಬಿಟ್ಟು, ಮುಂದೇನೋ ಆಗುವುದೆಂದು ಅತ್ತರೇನು ಪ್ರಯೋಜನ ?" ಎಂದನು.

ಕಟುಕನು ಆ ಕಡೆಗೆ ಲಕ್ಷ್ಯವಿಟ್ಟು ನೋಡಿದನು. ಅಲ್ಲಿ ಜೀವಗುಪ್ತನು ಕೂಡಾ ಮುಂದುವರಿಯಲು ಧೈರ್ಯಸಾಲದೆ, ಪರಿವಾರವನ್ನು ನೋಡಿ. ಏನೋ ಹೇಳಿಕೊಂಡಿದ್ದನು. ಜೀವಗುಪ್ತನನ್ನು ನೋಡಿ ಕಟುಕನು ಎದೆಯಲ್ಲಿ ನಡುಗುತ್ತ, "ಆ ರಾಜನು ಏನು ಮಾಡುವನೋ ಹೇಳಲಾಗದಿದ್ದರೂ ಈ ಮಂತ್ರಿ



ಮಾತ್ರ ಖಂಡಿತ ನನ್ನ ತಲೆಹಾರಿಸುತ್ತಾನೆ. ನಾನು ಎಲ್ಲಾವಿಧದಲ್ಲಿಯೂ ಕೆಟ್ಟೆನಲ್ಲಾ!" ಎಂದನು ಕಂದಿ ಹೋದ ಕಂಠಸ್ವರದಿಂದ.

ಕರಡಿಕೆಂಗಣ್ಣನು ಚಿಪಗೊಡಲಿಯನ್ನು ಕಟುಕಕರಡಿ ಮುಖದವನಿಗೆ ತಿರುಗಿ ಕೊಟ್ಟು, "ಕಟುಕ ಕವರ್ಮಾ! ನಿನ್ನಂಥವನು ಹೀಗೆ ಧೈರ್ಯ ಗೆಟ್ಟು ನೆಲಹಿಡಿಯುವ ದೆಂದರೇನು? ನನ್ನ ಮಾತು ಕೇಳು. ನಿನ್ನಲ್ಲಿ ಸ್ವಲ್ಪ ವಾದರೂ ಧೈರ್ಯವೂ ಸಾಹಸವೂ ಇದ್ದರೆ ಈ ಮಂತ್ರಶಕ್ತಿಯ ಚಿಪಗೊಡಲಿ ನಿನ್ನನ್ನು ಎಲ್ಲಾ ಆಪತ್ತುಗಳಿಂದಲೂ ಕಾಪಾಡುತ್ತದೆ." ಎಂದು ಹೇಳಿ, ತನ್ನ ಸೊಂಟದಲ್ಲಿ ನೇತಾಡುವ ಒರೆಯೊಳಗಿನಿಂದ ಕತ್ತಿಯನ್ನು ತೆಗೆದು "ಮರ್ಕಟ ರೂಪದ ಕಳ್ಳನು ಕದ್ದುಕೊಂಡು ಹೋದ ಮಂತ್ರದಂಡದಷ್ಟು ಶಕ್ತಿ ಈ ಕತ್ತಿಗೆ ಇಲ್ಲದಿದ್ದರೂ ನನ್ನ ರಕ್ಷಣೆಗೆ ಈ ಕತ್ತಿಯೊಂದೇ ಸಾಕು" ಎಂದನು. "ರಾಜನಿಂದ ಬರುವ ದಿನಭತ್ಯ, ನೌಕರಿ, ಸಂಬಳ ಮುಂತಾದ್ದು ಇನ್ನು ನನಗೆ ಬಂದೀತೆ? ಇಲ್ಲಿರುವ ಕಳ್ಳ ನಾಗಮಲ್ಲನ ಹಾಗೆ ದಾರಿದೋಚಿ ಬದುಕುವಷ್ಟು ನೀಚನೇ ನಾನು?" ಎಂದನು ಕಟುಕ ತನ್ನ ಪಲ್ಲವಿಯ ಧಾಟಿಯಲ್ಲಿಯೇ.

ಆ ಮಾತು ಕೇಳಿದ ಕೂಡಲೇ ಕಳ್ಳ ನಾಗಮಲ್ಲನಿಗೆ ಮಹಾ ಕೋಪವೆದ್ದಿತು. ಅವನು "ಆಂ" ಎಂದು ರೋಷದಿಂದ ಗರ್ಜಿಸಿ, ತನ್ನ ಸೊಂಟದಲ್ಲಿ ನೇತಾಡುತ್ತಿದ್ದ ಕತ್ತಿಯನ್ನು ಕೆಳಗೆ ಹಾಕಿ, "ಎಲೆಲಾ! ನರಕರಡಿ ಸಂಕರ ರೂಪದ ಭಂಡಾ! ಏನು ಬೊಗಳಿದೆ? ನಾನು ನೀಚನೆ? ಮಂದಿ ಮಾರ್ಬಲ ಸೈನ್ಯಗಳ ಸಹಾಯದಿಂದ ಯಾವ ಕಡ್ಡೀ ವೀರನಾದರೂ ರಾಜ್ಯ ಭಾರ ಮಾಡಿ ಮೆರೆಯಬಹುದು. ಒಬ್ಬಂಟಿಗನಾಗಿ ಕಾಡಿನಲ್ಲಿ ದಾರಿಹೊಡೆದು ಬದುಕ ಬೇಕಾದರೆ ನಿಜ ವಾದ ಧೈರ್ಯ ಶೌರ್ಯ ಪ್ರತಾಪಗಳು ಬೇಕು ಗೊತ್ತಾ? ಇಕೋ ನನ್ನ ಕತ್ತಿಯನ್ನು ಬಿಸುಟಿದ್ದೇನೆ. ನಿನ್ನ ಮಂತ್ರದ ಕೊಡಲಿ ಕೆಳಗೆಹಾಕು. ಬಾ ನನ್ನೊಂದಿಗೆ ಮಲ್ಲ ಯುದ್ಧಕ್ಕೆ!" ಎಂದು ತೊಡೆ ತೋಳುಗಳನ್ನು ಛಟಛಟನೆ ತಟ್ಟತೊಡಗಿದನು.

ಕರಡಿಕೆಂಗಣ್ಣನು ಕಣ್ಣು ಕೆಂಪು ಮಾಡಿಕೊಂಡು ಎಲ್ಲರ ಕಡೆಗೂ ಒಮ್ಮೆ ನೋಡಿ, ಕಾಳೀವರ್ಮ ನೊಂದಿಗೆ, "ಕಾಳೀವರ್ಮಾ! ಈ ಬುದ್ಧಿಗೇಡಿಗಳಿಗೆ ತಾವೆಲ್ಲಾ ಎಂತಹ ಅಪಾಯಕರವಾದ ಸ್ಥಿತಿಯಲ್ಲಿರುವೆ ವೆಂದು ಅರ್ಥವಾದಂತಿಲ್ಲ. ಎಲ್ಲರನ್ನೂ ಹಿಡಿದು ಶಿರಚ್ಛೇದ ಮಾಡಲು ಒಂದು ಕಡೆಯಲ್ಲಿ ಚಿತ್ರಕೇತು ರಾಜನ ಮಂತ್ರಿ ನಿಂತು ನೋಡುತ್ತಿದ್ದಾನೆ. ಇನ್ನು ಕೋಟೆಯೊಳಗೆ ದುರ್ಮುಖರಾಜನೇ ಗೆದ್ದರೂ, ಸಾಮಂತನೇ ಗೆದ್ದರೂ ನಮಗೆ ಮೇಲಾಗುವುದಕ್ಕಿಂತ ಹೆಚ್ಚು ಕೆಡುಕೇ ಕಾದಿದೆ. ಆ ಮರ್ಕಟ ದುಷ್ಟನು ಅವರನ್ನು ನಮ್ಮ ಮೇಲೆ ಬೀಳುವಂತೆ ತಿರುಗಿಸದೆ ಬಿಡಲಾರ. ಇದರೆಡೆಯಲ್ಲಿ ಇವರದೊಂದು ಒಳಗಿನ ಗಲಾಟೆ! ಛೀಛೀ." ಎಂದನು.

ಕಾಳೀವರ್ಮನು ಕೋಪದಿಂದ ಕತ್ತಿ ಮೇಲೆತ್ತಿ, "ಮಾಂತ್ರಿಕ ಗುರುಗಳ ಮಾತು ಕೇಳಿಸಿತೋ ಇಲ್ಲವೋ? ಇನ್ನೀಗ ನಿಮ್ಮೆಲ್ಲರಿಗೂ ಯಾರು ನಾಯಕನೆಂದು ಗೊತ್ತಾಯಿತೇನೋ?" ಎಂದು ಕೂಗಿಕೇಳಿದನು.

ಉಗ್ರದಂಡ ರಾಕ್ಷಸನ ಹೊರತು ಉಳಿದೆಲ್ಲರೂ, "ಕಾಳೀವರ್ಮರಿಗೆ ಜೈ!" ಎಂದು ಮೂರು ಸಾರಿ ಕೂಗಿದರು.

ಅದನ್ನು ನೋಡಿ ಕಾಳೀವರ್ಮನು ತೃಪ್ತಿಯಿಂದ ತಲೆಯಾಡಿಸಿ, ರಾಕ್ಷಸ ಉಗ್ರದಂಡನ ಬಳಿಗೆ ಬರಲು ನೋಡಿದನು. ಆಗ ಜೀವಗುಪ್ತನ ಕಡೆಯಿಂದ ಅಶ್ವಿಕನೊಬ್ಬನು. ಕತ್ತಿಯನ್ನು ತಲೆಕೆಳಗಾಗಿ ಹಿಡಿದುಕೊಂಡು ವೇಗವಾಗಿ ಅವರ ಬಳಿಗೆ ಬಂದು ಕುದುರೆಯನ್ನು ನಿಲ್ಲಿಸಿ, "ಜಿತಕೇತು ಮಹಾರಾಜರ ಮಂತ್ರಿ ಜೀವಗುಪ್ತರ ಕಡೆಯಿಂದ ಒಂದು ಮುಖ್ಯ ಸಂದೇಶ ತಂದಿದ್ದೇನೆ." ಎಂದನು. "ಓ ಹೋ! ಅದಕ್ಕೇ ಕತ್ತಿಯನ್ನು ಕೆಳ ಮುಖವಾಗಿ ಹಿಡಿದಿರುವೆಯಾ? ಒಳ್ಳೆಯದು. ಏನು ಆ ಸಂದೇಶ?" ಎಂದು ಕೇಳಿದನು ಕಾಳೀವರ್ಮ.

"ಇಲ್ಲಿರುವ ನಮ್ಮ ನಗರದ ಪ್ರಧಾನ ಕಟುಕ ನೌಕರನನ್ನು ಕೂಡಲೇ ತನ್ನ ಸಮಕ್ಷಮಕ್ಕೆ ಬರಬೇಕೆಂದು ಮಂತ್ರಿಯವರು ಆಜ್ಞಾಪಿಸುತ್ತಾರೆ. ಬರುವಾಗ ಮಹಾರಾಜರಿಂದ ಶಿರಚ್ಛೇದ ಶಿಕ್ಷೆಪಡೆದು ತಪ್ಪಿಸಿಕೊಂಡು ತಿರುಗುವ ಕಾಳೀವರ್ಮನೆಂಬ ಅಪರಾಧಿಯನ್ನೂ ತನ್ನೊಂದಿಗೆ ಬಂಧಿಸಿ ಕರೆತರಬೇಕೆಂದೂ ಹೇಳಿದ್ದಾರೆ. ಏನು ಹೇಳುವಿರಿ?" ಎಂದನು ಆ ಸಂದೇಶವಾಹಕ.

ಆ ಮಾತುಗಳನ್ನು ಕೇಳಿ ಕರಡಿಕೆಂಗಣ್ಣನು ಕಿರುನಗೆ ನಕ್ಕು. "ಏನಪ್ಪಾ, ಕಟುಕ ನೌಕರಾ! ನಿನ್ನ ಮಂತ್ರಿಯ ಆಜ್ಞೆಯನ್ನು ಕೇಳಿದೆಯಾ? ಈಗ ಏನು ಮಾಡುವಿ?" ಎಂದು ಕೇಳಿದನು.

ಕಟುಕನು ಏನು ಹೇಳಲೂ ತೋರದವನಾಗಿ. ಕೆಲವು ಕ್ಷಣಗಳವರೆಗೆ ತಲೆಬಗ್ಗಿಸಿಕೊಂಡಿದ್ದು, ಆಮೇಲೆ ತಲೆಯೆತ್ತಿ, "ಕಾಳೀವರ್ಮದೊರೇ! ಏನು ನಿಮ್ಮ



ಆಜ್ಞೆ ? ಈ ಕರಡಿ ತಲೆಯನ್ನು ಹೊತ್ತುಕೊಂಡು ನಾನು ಚಂದ್ರಶಿಲಾ ನಗರಕ್ಕೆ ಹೋಗುವುದೆಂದರೆ, ಅಲ್ಲಿ ಬೀದಿ ಮಕ್ಕಳಿಂದ ಕಲ್ಲಿನ ಹೊಡೆತ ತಿನ್ನುತ್ತ ಪ್ರಾಣ ಕಳೆದುಕೊಳ್ಳಲು ಹೋದ ಹಾಗೆಯೇ ಆಗುತ್ತದೆ" ಎಂದನು.

ಕಾಳೀವರ್ಮನು ಕತ್ತಿಯಿಂದ ಮೃದುವಾಗಿ ಅವನ ಬೆನ್ನಿನ ಮೇಲೆ ತಟ್ಟುತ್ತ, "ಎಲೋ ಕಟುಕ ರೊಡೆಯನೇ, ನಿನ್ನ ಸ್ವಾಮಿ ಭಕ್ತಿ ಮೆಚ್ಚುವಂತ ಹುದೇ. ಪೂರ್ತಿ ನಿರಾಶನಾಗಿ ಬಿಡಬೇಡ. ನಾವೀಗ ಮೊದಲು ಈ ಕೋಟೆಯೊಳಗೆ ಪ್ರವೇಶಿಸಿ ಆ ಮಾಯಾ ಮರ್ಕಟನನ್ನು ಹಿಡಿಯಬೇಕು. ಸಮಯ ಮಿಂಚಿ ಹೋಗದಿದ್ದರೆ ಆ ದುರ್ಮುಖರಾಜನ ಪ್ರಾಣ ವನ್ನು ಕೂಡಾ ಕಾಪಾಡಬೇಕು. ಜಿತಕೇತು ರಾಜ ನೊಂದಿಗೆ ಹೋಲಿಸುವಾಗ ದುರ್ಮುಖರಾಜನೇ ಎಷ್ಟೋ ಒಳ್ಳೆಯವನಾಗಿ ಕಾಣುತ್ತಾನೆ. ಈಗ ಮಂತ್ರಿ ಜೀವಗುಪ್ತನ ಸಂದೇಶ ತಂದವನಿಗೆ ಕೊಡ ಬೇಕಾದ ಉತ್ತರ, ನಿನ್ನ ಚಪಗೊಡಲಿಯಿಂದ ಅವನ ತಲೆಯನ್ನಾದರೂ ಕಡಿ, ಅಲ್ಲಾ ಅವನ ಕತ್ತಿಯನ್ನು ಎರಡು ತುಂಡು ಮಾಡಿ ಓಡಿಸು. ಅದು ನಿನ್ನ ಇಷ್ಟ !" ಎಂದನು.

ಮರುಕ್ಷಣವೇ ಕಟುಕಭಲ್ಲೂಕನು "ಜೈ ಭೈರವಾ!" ಎಂದು ಗರ್ಜಿಸಿ ಕುಪ್ಪಳಿಸುತ್ತ, ಆ ಸಂದೇಶ ತಂದ ದೂತನ ಮೇಲೆ ಹಾರಿ ಅವನ ಕೈಯಲ್ಲಿದ್ದ ಕತ್ತಿಯನ್ನು ಎಳೆದುಕೊಂಡು ನೆಲಕ್ಕೆ ಅಪ್ಪಳಿಸಿ ಎರಡು ತುಂಡು ಮಾಡಿ ದೂರಬಿಸುಟು, "ಎಲವೋ ದೂತಾಧಮಾ! ನಾನು ಜಿತಕೇತು ರಾಜನ ಉಪ್ಪು ತಿಂದುದಕ್ಕಾಗಿ ಕಟುಕ ಸೇವೆ ಮಾಡಿದ ಋಣ ಇಂದಿಗೆ ತೀರಿ ಹೋಯಿತು. ಮರ್ಯಾದೆ ಉಳಿಸಿಕೊಂಡು ಆ ಮಂತ್ರಿ ಜೀವಗುಪ್ತ ಇಲ್ಲಿಂದ ಹೋಗದಿದ್ದರೆ ಅವನ ತಲೆಯನ್ನು ವನಭೈರವನಿಗೆ ಬಲಿ ಕೊಡುತ್ತೇನೆಂದು ಹೇಳು ! ಓಡು !" ಎಂದನು.

ಜೀವಗುಪ್ತನ ದೂತನು ಆರ್ತನಾದ ಮಾಡಿ ತನ್ನ ಕುದುರೆಯನ್ನು ಹಿಂದಕ್ಕೆ ತಿರುಗಿಸಿದನು. ಅಷ್ಟರಲ್ಲಿ ಬಂಧಿಸಲ್ಪಟ್ಟ ಕೋಟೆಯ ದ್ವಾರದ ಕಡೆಯಿಂದ ಭಟಭಟವೆಂಬ ಶಬ್ದವೂ, ಅದರ ಬೆನ್ನ ಹಿಂದೆಯೇ "ಕಾಳೀವರ್ಮನಿಗೆ ಜೈ!" ಎಂಬ ಜಯ ಘೋಷ ಣವೂ ಕೇಳಿಬಂದಿತು.

ಕರಡಿ ಕೆಂಗಣ್ಣನೂ ಇತರರೂ ಆಶ್ಚರ್ಯದಿಂದ ಆ ಕಡೆಗೆ ತಲೆ ತಿರುಗಿಸಿ ನೋಡಿದರು. ಕೋಟೆಯ ಬಾಗಿಲು ಧಗಧಗನೆ ಸುಟ್ಟು ಹೋಗುತ್ತಿದ್ದಿತು. ಅಲ್ಲಿ ಆಟವಿಕನೂ, ಕಳ್ಳರನಾಗಮಲ್ಲನೂ, ಅವನ ಅನು ಚರರೂ ಉರಿಯುವ ಕೊಳ್ಳಿಗಳನ್ನು ಕೈಯಲ್ಲಿ ಹಿಡಿದುಕೊಂಡು ಕುಪ್ಪಳಿಸಿಕೊಂಡಿದ್ದರು. ಹೊಗೆ ಆಕಾಶದ ಕಡೆಗೆ ಹರಡುತ್ತಿದ್ದಿತು. —(ಇನ್ನೂ ಇದೆ)





# ಕರಡಿಕೆಂಗಣ್ಣ

## ೧೪

[ ಕರಡಿ ಕೆಂಗಣ್ಣನೂ, ಕಾಳೀವರ್ಮನೂ ಮಾಯಾಮರ್ಕಟವನ್ನು ಬೆಂಬತ್ತಿ ಕೋಟೆಯ ಬಳಿಗೆ ಬಂದರು. ಕೋಟೆಯೊಳಗೆ ನಡೆಯುವ ಯುದ್ಧವನ್ನು ಕುರಿತು ಕಟುಕಭಲ್ಲೂಕನು ಅವರಿಗೆ ಹೇಳಿದನು. ಜಿತಕೇತುರಾಜನ ಮಂತ್ರಿ ಜೀವಗುಪ್ತನು ಅಲ್ಲಿಗೆ ಬಂದು ಒಬ್ಬ ಸೈನಿಕನನ್ನು ಕಾಳೀವರ್ಮನ ಬಳಿಗೆ ಸಂಧಾನಕ್ಕೆ ಕಳುಹಿಸಿದನು. ಕಾಳೀವರ್ಮನು ಅವನನ್ನು ಭಂಗಿಸುವಷ್ಟರಲ್ಲಿ, ಕಳ್ಳನಾಗಮಲ್ಲನು ಕೋಟೆಯ ಬಾಗಿಲಿಗೆ ಬೆಂಕಿ ಹಚ್ಚಿದನು. ]

ಕೋಟೆಯ ಬಾಗಿಲಿಗೆ ಹಿಡಿದ ಬೆಂಕಿ ಆಕಾಶದೆತ್ತರಕ್ಕೆ ತನ್ನ ಜ್ವಾಲೆಯನ್ನೆಬ್ಬಿಸಿ ಉರಿಯುವುದನ್ನು ನೋಡುತ್ತಲೇ, ಕಟುಕಕರಡಿಯವನು ಅತ್ಯುತ್ಸಾಹದಿಂದ ಓಡಿಹೋಗಿ ತನ್ನ ಮೊಂಡುಸೊಂಡಿಲಿನ ಆನೆಯ ಮೇಲೇರಿ, ದೊಡ್ಡ ಕಂಠದಿಂದ, "ಕಾಳೀವರ್ಮ ದೊರೆಗಳೇ! ಇನ್ನೇನು? ಬಾಗಿಲು ಹೋಯಿತಲ್ಲಾ! ನಾವು ನಿರಾತಂಕವಾಗಿ ಕೋಟೆಯೊಳಗೆ ಹೊಕ್ಕುಬಿಡೋಣ. ಅಲ್ಲಿ ನಮಗೆ ಮೋಸದ ಮರ್ಕಟಪುಂಡನು ಸಿಕ್ಕದೆ ಹೋಗಲಾರ." ಎಂದು ಹೇಳಿದನು. ಅವನು ಕಾಳೀವರ್ಮನ ಉತ್ತರವನ್ನೂ ಲಕ್ಷ್ಯಮಾಡದೆ, ಉರಿಯುವ ಕೋಟೆಯ ಬಾಗಿಲ ಹತ್ತಿರ ಬೆಂಕಿಕೊಳ್ಳಿಯೊಂದಿಗೆ ಓಡಾಡುತ್ತಿರುವ ಆಟವಿಕನನ್ನು ನೋಡಿ, "ಲೋ! ಆಟವಿಕ ಸೇವಕಾ! ಬೆಂಕಿಯನ್ನು ಆ ಚೇಚೆ ಸರಿಸಿ ದಾರಿ ಸರಿಮಾಡು. ಬೇಗ ಬಂದು ನನ್ನ ಆನೆಯನ್ನು ಕೋಟೆಯೊಳಗೆ ನಡೆಸು. ಬಾ ಬಾ! ಚುರುಕಾಗು!" ಎಂದನು.

ಅವನ ಕೂಗು ಕೇಳಿ ಆಟವಿಕನು ಓಡೋಡಿ ಬಂದು ಉರಿಯುವ ಕಟ್ಟಿಗೆಯನ್ನು ದೂರ ಬಿಸುಟು, ಕಳ್ಳನಾಗಮಲ್ಲನೊಂದಿಗೆ, ವಿಜಯದ ಸನ್ನೆ ಮಾಡಿ, "ಬಂದೆ ಬಂದೆ, ಭಲ್ಲೂಕ ದೊರೆಗಳೇ! ಇದೋ



ದಾರಿ ಸರಿಯಾಯಿತು" ಎಂದು ಕೂಗಿ ಆನೆಯ ಕಡೆಗೆ ಸಾಗಿದನು. ಆಗ ನಾಗಮಲ್ಲನು "ನಿಲ್ಲೋ ನನ್ನ ಸಂಗಡಿಗಾ!" ಎಂದು ಅವನನ್ನು ತಡೆದು, "ಈಗ ಇಲ್ಲಿ ನನಗೂ ನನ್ನ ಕಡೆಯವರಿಗೂ ಕೆಲಸವೇನಿದೆ? ಇಲ್ಲಿ ನಡೆಯುವುದೆಲ್ಲಾ ಮಾಂತ್ರಿಕರ ನಡುವಿನ ತಗಾದೆಯಾಗಿದೆ. ನಮಗೇನೂ ಸಂಬಂಧವಿಲ್ಲ. ಅವರಾಯಿತು, ಅವರ ಗೊಡವೆಯಾಯಿತು. ನಮ್ಮ ಪಾಡಿಗೆ ನಾವು ಕಾಡಿಗೆ ಹೋಗಿ, ನಮ್ಮ ವೃತ್ತಿ ನಾವು ಏನೋ ನೋಡಿಕೊಳ್ಳೋಣ" ಎಂದನು.

ಕೋಟೆಯ ಬಾಗಿಲ ಬಳಿಗೆ ಹೋಗುತ್ತಿದ್ದ ಕಾಳೀವರ್ಮನು ಆ ಮಾತನ್ನು ಕೇಳಿ, ಕೋಪದಿಂದ ನಾಗವರ್ಮನ ಕಡೆಗೆ ಕತ್ತಿ ನೆಗಹಿ, "ಎಲೋ ಕಾಡು ಕಳ್ಳ ಕೊರಮಾ! ಕಟ್ಟಕಡೆಗೆ ನಿನ್ನ ದಾರಿಹೊಡಕ ಬುದ್ಧಿ ಮೇಲೆದ್ದಿತೇನು? ಅಡಗಿ ಹೊಂಚಿ ನಿರಾಯುಧರಾದ ಪಾಪದ ಪ್ರಯಾಣಿಕರನ್ನು ಹಿಡಿದು ಕೊಳ್ಳೆ ಹೊಡೆಯುವುದರ ಹೊರತು, ಖಾಡಾಖಾಡಿಯಾಗಿ ಎದುರಿಸಿ ನಿಂತು ಶತ್ರುಗಳೊಂದಿಗೆ ಹೋರಾಡುವ ಧೈರ್ಯ ಸಾಹಸ ನಿನ್ನಂಥವನಿಗೆ ಎಲ್ಲಿಯದು? ನಾಚಿಕೆಗೇಡಿಯೇ! ಸುಡಲಿ ನಿನ್ನ ಪ್ರತಾಪ!" ಎಂದನು ತಿರಸ್ಕಾರದಿಂದ.

ಕಳ್ಳ ನಾಗಮಲ್ಲನು ಎಲ್ಲರ ಕಡೆಗೂ ಹೀಯಾಳಿಕೆಯ ದೃಷ್ಟಿಯನ್ನು ಬೀರಿ, "ಶತ್ರುಮಿತ್ರ ಮುಂತಾದ್ದೆಲ್ಲಾ ನಿಮ್ಮಂಥವರಿಗೆ, ನನ್ನಂಥವನಿಗಲ್ಲ. ನನಗೆ ಶತ್ರುವೂ ಮಿತ್ರನೂ ಎಲ್ಲಾ ಒಂದೇ. ಬದುಕು ನಡೆಸಲು ಬೇಕಾದ ಒಂದಿಷ್ಟು ಧನವು ಯಾರ ಹತ್ತಿರ ಇದೆಯೋ ಅವರನ್ನು ದೋಚಿಕೊಳ್ಳುತ್ತೇನೆ. ಈಗ ಕೋಟೆಯೊಳಗೆ ದುರ್ಮುಖ ರಾಜನು ಗೆದ್ದರೂ, ಅವನ ಸಾಮಂತ ಸೂರ್ಯಭೂಪತಿ ಗೆದ್ದರೂ ನನಗೆ ಸಿಗುವ ಲಾಭ ಅಷ್ಟರಲ್ಲೇ ಇದೆ. ಸುಮ್ಮನೆ ನಾವೇಕೆ ನಡುವೆ?" ಎಂದನು.

ನಾಗಮಲ್ಲನು ತಮ್ಮ ಪಕ್ಷದಲ್ಲಿರಬೇಕಾದರೆ ಸಂಬಳದ ಹಣ ಸಿಗಬೇಕೆಂಬುದಕ್ಕಾಗಿ ಹೀಗೆ ಡೊಂಕು ಮಾತು ಹೇಳುವನೆಂದು ಕರಡಿಕೆಂಗಣ್ಣ ಮಾಂತ್ರಿಕನಿಗೆ ಗೊತ್ತಾಯಿತು. ಅವನು ತನ್ನ ಕತ್ತಿಯಿಂದ ನಾಗಮಲ್ಲನ ಬೆನ್ನನ್ನು ತಟ್ಟಿ, "ಎಲೋ ನಾಗಮಲ್ಲಾ! ಇದು ಅಷ್ಟೇನೂ ಮಂತ್ರಶಕ್ತಿಯ ಪ್ರಭಾವವಿಲ್ಲದ ಕತ್ತಿಯಾಯಿತು. ಇದೀಗ ಆ ಕಳೆದು ಹೋದ ನನ್ನ ಮಂತ್ರದಂಡವಾಗಿರುತ್ತಿದ್ದರೆ ನಿನ್ನನ್ನು ಈ ಕ್ಷಣದಲ್ಲಿ ಗುಳ್ಳೇ ನರಿಯಾಗಿ ಮಾರ್ಪಡಿಸಿ ಬಿಲದೊಳಗೆ ಓಡಿಸುತ್ತಿದ್ದೆ. ನನ್ನ ಮಾತು ಕೇಳು. ಈಗ ದುರ್ಮುಖ ರಾಜನ ಹೊರತು ಬೇರೆ ಯಾರು ಗೆದ್ದರೂ ನಿನ್ನನ್ನು ಅರಣ್ಯದ ಕ್ರೂರ ಮೃಗದ ಹಾಗೆ ಬೇಟೆಯಾಡಿಬಿಡುತ್ತಾರೆಂದು ತಿಳಿ. ಸದ್ಯ ನೀನು ಜಾರಿಕೊಂಡರೂ ಬಿಡುವವರಲ್ಲ. ಯೋಚನೆ ಇದ್ದರೆ ನಿನಗೇ ತಿಳಿಯುತ್ತದೆ!" ಎಂದು ಎಚ್ಚರಿಕೆ ಕೊಟ್ಟನು.

ಈ ಮಾತು ಕೇಳಿದ ಕೂಡಲೇ ನಾಗಮಲ್ಲನ ಮನಸ್ಸು ತಿರುಗಿತು. ಅವನಿಗೆ ತಾನು ದುರ್ಮುಖ

ರಾಜನ ಪಕ್ಷದಲ್ಲಿರುವುದೇ ಒಳ್ಳೆಯದೆನಿಸಿತು. ಇದರಿಂದ ತನ್ನ ಬೆಂಬಲವಾಗಿ ಮಾಂತ್ರಿಕರಂಥವರೂ, ರಾಕ್ಷಸನೂ ಇರುತ್ತಾರೆ. ಆದುದರಿಂದ ಈ ಯುದ್ಧದಲ್ಲಿ ದುರ್ಮುಖ ರಾಜನೇ ಗೆದ್ದು ಉದಯಗಿರಿ ರಾಜ್ಯಕ್ಕೆ ರಾಜನಾದಾನು. ಆಗ ಅವನ ಪಕ್ಷದಲ್ಲಿದ್ದ ತನಗೂ ಒಳ್ಳೆಯದಾದೀತು.

ಹೀಗೆಂದುಕೊಂಡು ನಾಗಮಲ್ಲನು ತನ್ನ ಇಬ್ಬರು ಅನುಚರರನ್ನು ನೋಡಿ, "ಏನ್ರೋ! ನನ್ನ ಮಾತು ಕೇಳಿ. ಇವತ್ತಿಗೆ ನಮಗೆ ಕಾಡು ಕಾಡು ಅಲೆದಾಡುವ ಕಾಟ ತಪ್ಪಿತು. ನಾವು ದುರ್ಮುಖ ರಾಜನ ಪಕ್ಷ ಸೇರಿ ಶತ್ರು ಸಂಹಾರ ಮಾಡಿದೆವೆಂದರೆ ಆ ರಾಜನು ನಮಗೆ ಸೈನ್ಯದಲ್ಲಿ ದೊಡ್ಡ ಸಂಬಳದ ಮೇಲೆ ಪದವಿಗಳನ್ನು ಕೊಡದಿರಲಾರ ಅದೇ ನಮಗೆ ಒಳ್ಳೆಯದಲ್ಲವೆ? ಏನನ್ನುವಿರಿ?" ಎಂದನು.

ತಮ್ಮ ನಾಯಕ ಹೀಗೆ ಹೇಳಿದ ಕೂಡಲೇ ಕಳ್ಳರಿಬ್ಬರೂ ತಮ್ಮ ಕತ್ತಿಗಳನ್ನು ಎತ್ತಿ ನಡುಗಿಸುತ್ತ, "ಹೌದು ಹೌದು! ಅದೇ ಒಳ್ಳೆಯದು. ದುರ್ಮುಖ ಮಹಾರಾಜರಿಗೆ ಜೈ!" ಎಂದು ಗಟ್ಟಿಯಾಗಿ ಕೂಗಿ, ಉರಿಯುತ್ತಿರುವ ಕೋಟೆಯ ದ್ವಾರದ ಮುಂದೆ ಬಿದ್ದಿದ್ದ ಕರಿಕೆಂಡಗಳನ್ನು ಕತ್ತಿಯಿಂದ ಆಚೀಚೆ ಸರಿಸುತ್ತ ದಾರಿ ಮಾಡತೊಡಗಿದರು.

ಕರಡಿಕೆಂಗಣ್ಣನೂ ಕಾಳೀವರ್ಮನೂ ತಮ್ಮ ವಾಹನಗಳನ್ನೇರಿಕೊಂಡರು. ಕಾಳೀವರ್ಮನು ಕರಡಿಯವನನ್ನು ನೋಡಿ, "ನಾವೀಗ ಎಲ್ಲಾ ಸೇರಿ ಹತ್ತು ಮಂದಿಗಳಷ್ಟೇ ಇದ್ದೇವೆ. ಮುಖ್ಯವಾಗಿ ನಾವು ಮಾಡಬೇಕಾದುದು ಮಾಯಾಮರ್ಕಟ ರೂಪದಲ್ಲಿರುವವನಿಂದ ಕೆಂಗಣ್ಣ ಮಾಂತ್ರಿಕರ ಮಂತ್ರದಂಡವನ್ನು ಎಳೆದುಕೊಳ್ಳಬೇಕು. ತರುವಾಯ ದುರ್ಮುಖ ರಾಜನ ಪ್ರಾಣವನ್ನು ಕಾಪಾಡುವುದು. ಈ ಕಾರ್ಯಗಳಿಗಾಗಿ ನಿಮ್ಮಲ್ಲಿ ಪ್ರತಿಯೊಬ್ಬರೂ ಜೀವದ ಹಂಗು ತೊರೆದು ಸಾಹಸ ಮಾಡಬೇಕಾಗುತ್ತದೆ. ಮಾಡುವಿರಾ?" ಎಂದು ಕೇಳಲು, ಎಲ್ಲರೂ ಆಯುಧಗಳನ್ನೆತ್ತಿ ಕುಣಿಸುತ್ತ "ಕಾಳೀವರ್ಮರಿಗೆ ಜೈ! ಕರಡಿಕೆಂಗಣ್ಣ ಮಹಾಮಾಂತ್ರಿಕರಿಗೆ ಜೈ!" ಎಂದು ಘೋಷಿಸಿದರು.



ಕಾಳೀವರ್ಮನು ಕುದುರೆಯ ಮೇಲೆ ಮುಂದಕ್ಕೆ ಕೋಟೆಯ ದ್ವಾರದ ಕಡೆಗೆ ಸಾಗುತ್ತ, ಏನೋ ನೆನಪಿಗೆ ಬಂದು ತಟ್ಟನೆ ಕುದುರೆಯನ್ನು ಹಿಂದಕ್ಕೆ ತಿರುಗಿಸಿ, "ಆ ಉಗ್ರದಂಡನೆಂಬ ರಾಕ್ಷಸನು ಎಲ್ಲಿ? ಇಲ್ಲೆಲ್ಲಿಯೂ ಕಾಣುವುದಿಲ್ಲವಲ್ಲಾ? ಎತ್ತಹೋದ?" ಎಂದು ಕೇಳಿದನು.

ಆಗ ತಾನೇ ಎಲ್ಲರ ಲಕ್ಷ್ಯ ಉಗ್ರದಂಡನ ಕಡೆಗೆ ಹೋಯಿತು. ಉಗ್ರದಂಡನು ಒಂದು ಆನೆಯ ಸೊಂಡಿಲನ್ನು ಹಿಡಿದುಕೊಂಡು ದೂರದಲ್ಲಿ ನಿಂತಿದ್ದ ಜಿತಕೇತುರಾಜನ ಮಂತ್ರಿ ಜೀವಗುಪ್ತನ ಗುಂಪಿನ ಕಡೆಗೆ ಹೋಗುವುದನ್ನು ನೋಡಿದರು.

ಅದನ್ನು ನೋಡಿ ಕಾಳೀವರ್ಮನು ಆಶ್ಚರ್ಯಪಡುತ್ತ, ಕರಡಿಕೆಂಗಣ್ಣನೊಂದಿಗೆ "ಗುರುಗಳೇ



ಎಲೋ ಆಟವಿಕನೇ, ನೀನೂ ನಮ್ಮೊಂದಿಗೆ ಬಾ. ನಿನ್ನ ಬಿಲ್ಲು ಬಾಣಗಳನ್ನು ತಯಾರಾಗಿಟ್ಟುಕೋ!" ಎಂದು ಆಜ್ಞೆ ಮಾಡಿ ತನ್ನ ಆನೆಯನ್ನು ಕಾಳೀವರ್ಮನ ಹಿಂದೆಯೇ ನಡೆಯಿಸಿದನು.

ಕುದುರೆಯ ಮೇಲೆ ಕಾಳೀವರ್ಮನೂ, ಆನೆಗಳ ಮೇಲೆ ಕಟುಕಕರಡಿಯವನೂ, ಅಂಗರಕ್ಷಕರೂ ಗುಂಪಾಗಿ ತನ್ನ ಕಡೆಗೆ ಬರುವುದನ್ನು ನೋಡಿ ಉಗ್ರದಂಡ ರಾಕ್ಷಸನಿಗೆ ಸ್ವಲ್ಪ ಆಶ್ಚರ್ಯವಾಯಿತು. ಏನೋ ಸಂದೇಹವೂ ಎದ್ದು, ತನ್ನ ಕಲ್ಲಿನ ಗದೆಯನ್ನು ಬಲಗೈಯಲ್ಲಿ ಎತ್ತಿ ಹಿಡಿದುಕೊಂಡು ಆನೆಯ ಸೊಂಡಿಲನ್ನು ಎಳೆದು ನಿಲ್ಲಿಸಿ, ಈ ಕಡೆಗೆ ತಿರುಗಿ ಎದೆಯುಬ್ಬಿಸಿ ನಿಂತನು.

ಕಾಳೀವರ್ಮನು ಅವನ ಸಮೀಪಕ್ಕೆ ಹೋಗಿ, "ಇದೇನು ಉಗ್ರದಂಡಾ, ನಮ್ಮೊಂದಿಗೆ ಕೋಟೆಯೊಳಗೆ ಬಂದು, ಸಾಮಂತ ಸೂರ್ಯ ಭೂಪತಿಯಿಂದ ದುರ್ಮುಖರಾಜನನ್ನು ಕಾಪಾಡುವ ಕೆಲಸ ಬಿಟ್ಟು ಹೀಗೆ ನಿನ್ನ ಪಾಡಿಗೆ ಹಿಂದಿರುಗುವುದೆಲ್ಲಿಗೆ? ನಮ್ಮೊಂದಿಗೆ ಹೇಳಲಿಲ್ಲವಲ್ಲಾ? ಏನಾಯಿತು?" ಎಂದು ಕೇಳಿದನು.

"ಕಾಳೀವರ್ಮಾ, ದುರ್ಭಾಗ್ಯದವನಾದ ಆ ದುರ್ಮುಖರಾಜನು ಇನ್ನೂ ಬದುಕಿರುವನೆಂದು ನಂಬುವಿಯೇನು?" ಎಂದು ಉಗ್ರದಂಡನು ತಿರುಗಿ ಕೇಳಿ ಒಂದು ವಿಧವಾಗಿ ನಕ್ಕನು.

"ಅವನು ಬದುಕಿಲ್ಲವೆಂಬ ಅನುಮಾನ ನಿನಗೇಕೆ ಬಂತು? ಕೋಟೆಯೊಳಗೆ ದುರ್ಮುಖನ ಪಕ್ಷದ ಸೈನಿಕರೂ ಇದ್ದಾರೆಂದು ನಿನಗೆ ಗೊತ್ತಾಗಲಿಲ್ಲವೆ? ಹಾಗಿಲ್ಲದಿದ್ದರೆ ಕೋಟೆಯೊಳಗೆ ನಡೆಯುವ ಯುದ್ಧವು ಯಾರು ಯಾರೊಳಗೆ ನಡೆಯುವುದೆನ್ನುವಿ?" ಎಂದನು ಕಾಳೀವರ್ಮ.

ಉಗ್ರದಂಡ ರಾಕ್ಷಸನು ದೂರದಲ್ಲಿರುವ ಮಂತ್ರಿ ಜೀವಗುಪ್ತನ ಸೈನಿಕರ ಕೈಡೆಗೆ ಕೈ ತೋರಿಸುತ್ತ,

ರಾಕ್ಷಸನ ರೀತಿ ನೋಡಿದರೆ ನನಗೇನೋ ಸಂದೇಹವಾಗಿದೆ. ನಮ್ಮ ಶತ್ರುವಾದ ಜಿತಕೇತುವಿನ ಪಕ್ಷಕ್ಕೆ ಸೇರಲು ಹೋಗುವ ಹಾಗಿದೆ." ಎಂದನು.

"ಹಾಗೆ ಒಮ್ಮೆಗೇ ಅಪಾರ್ಥ ಕಲ್ಪಿಸಬಾರದು. ಆತನಿಗೆ ನನ್ನ ಹತ್ತಿರ ಏನೋ ಕೆಲಸವಿರುವುದಾಗಿ ಗೊತ್ತಾಗಿದೆ. ಯಾವುದಕ್ಕೂ ಬೇಗನೇ ಹೋಗಿ ಅವನ ಅಂತರ್ಯವೇನೆಂಬುದನ್ನು ತಿಳಿದುಕೋ." ಎಂದನು ಕರಡಿಕೆಂಗಣ್ಣ.

ಈ ಸಂಭಾಷಣೆಗಳು ಕಟುಕಕರಡಿಯವನ ಕಿವಿಗೂ ಬಿದ್ದುವು. ಅವನು ಸಂದೇಹದಿಂದ ದುರ್ಮುಖನ ಅಂಗರಕ್ಷಕರನ್ನು ನೋಡಿ, "ಒಹೋಯ್, ಅಂಗರಕ್ಷಕ ಭಟರೇ! ಆ ರಾಕ್ಷಸನು ನಮ್ಮ ಕಾಳೀವರ್ಮ ದೊರೆಗಳ ಮೇಲೆ ತಿರುಗಿ ಬೀಳುವ ಹಾಗಿದೆ. ಯಾವುದಕ್ಕೂ ಒಳ್ಳೆಯದು, ನಾವು ಅವರ ಬೆನ್ನು ಕಾಯುತ್ತ ಹೋಗೋಣ. ನಿಮ್ಮ ಆನೆಗಳನ್ನು ಅತ್ತ ತಿರುಗಿಸಿರಿ. ಆಯುಧಗಳನ್ನು ತಯಾರಾಗಿಟ್ಟುಕೊಳ್ಳಿ.



"ಅಲ್ಲಿ ಅವರು ಹೇಗೆ ಕಾದಿದ್ದಾರೆ ನೋಡಯ್ಯ! ಕಾಳೀವರ್ಮಾ, ನೀವೆಲ್ಲಾ ಕೋಟೆಯ ದ್ವಾರದ ಹತ್ತಿರ ಹಾಳು ಹರಟೆ ಹರಟುತ್ತ ಕಾಲಯಾಪನೆ ಮಾಡಿದಿರಿ. ಒಳಗೆ ಏನು ನಡೆದರೂ ನಡೆದೀತು. ಈಗಲಾದರೂ ಮಿಂಚಿ ಹೋದುದೇನಿಲ್ಲ. ಬೇಗನೇ ಕೋಟೆಯೊಳಗೆ ಹೊಕ್ಕು ದುರ್ಮುಖರಾಜನನ್ನು ರಕ್ಷಿಸಿದರೆ ಒಳ್ಳೆಯದೇ. ಆ ಮಾಯಾ ಮರ್ಕಟದ ಕೈಯಲ್ಲಿರುವ ಮಂತ್ರದಂಡವನ್ನಾದರೂ ಕಿತ್ತುಕೊಳ್ಳಲಾಗುವುದೋ ನೋಡಿ." ಎಂದನು.

"ಆ ಕೆಲಸ ಮಾಡಲಿಕ್ಕೇ ಸಿದ್ಧರಾಗುತಿದ್ದೇವೆ. ನೀನು ಈ ಆನೆಯೊಂದಿಗೆ ಅದೆತ್ತಲೋ ಹೊರಟೆಯಲ್ಲ? ಎಲ್ಲಿಗೆಂದು ಹೇಳಲಾರೆಯಾ?" ಎಂದು ಕೇಳಿದ ಕಾಳೀವರ್ಮ.

ಉಗ್ರದಂಡ ರಾಕ್ಷಸನು ಕಲ್ಲಿನಗದೆಯನ್ನು ಜೀವಗುಪ್ತನ ಗುಂಪಿನ ಕಡೆಗೆ ಓಲಾಡಿಸುತ್ತ, "ಆ ಮಂತ್ರಿಯೂ, ಅವನೊಂದಿಗಿರುವ ಸೈನಿಕರೂ, ಕೋಟೆಯೊಳಗೆ ನಿಮ್ಮನ್ನು ಬೆಂಬತ್ತಿ ಹತ ಮಾಡದಂತೆ ಅವರನ್ನು ಅಡ್ಡಗಟ್ಟಲು ಹೋಗುತ್ತೇನೆ. ಗೊತ್ತಾಯಿತೇ? ನೀವು ನನ್ನನ್ನು ವ್ಯತ್ಯಾಸವಾಗಿ ತಿಳಿದುಬಿಟ್ಟಿರಿ ಪಾಪ!" ಎಂದು ನಕ್ಕನು.

ಆ ಮಾತು ಕೇಳಿ ಕಾಳೀವರ್ಮನಿಗೆ ಸಮಾಧಾನವಾಯಿತು. ಅವನು ಕಟುಕಕರಡಿ ಮೊದಲಾದವರ ಕಡೆಗೆ ತಿರುಗಿ, "ಹೋಗಿರಿ! ಕೋಟೆಯೊಳಗೆ ನುಗ್ಗಿರಿ!" ಎನ್ನುತ್ತ ತನ್ನ ಕುದುರೆಯನ್ನು ಕೋಟೆ ದ್ವಾರದ ಕಡೆಗೆ ಓಡಿಸಿದನು.

ಎಲ್ಲರೂಭೀಕರವಾಗಿ ಗರ್ಜಿಸುತ್ತ, ಕೂಗಾಡುತ್ತ ಕೋಟೆಯೊಳಗೆ ಹೊಕ್ಕರು. ಎರಡು ಆನೆಗಳ ಮೇಲೆ ಕತ್ತಿಗಳನ್ನೂ, ಕೊಡಲಿಯನ್ನೂ ಹಿಡಿದವರನ್ನು ನೋಡಿ, ಕೋಣದ ಮೇಲೆ ಕರಡಿಕೆಂಗಣ್ಣ ಮಾಂತ್ರಿಕನೂ, ಅವರ ಹಿಂದೆ ವೀರತಾಂಡವ ಮಾಡುತ್ತ ಬರುವ ಕಳ್ಳ ನಾಗಮಲ್ಲ ಮೊದಲಾದವರನ್ನೂ ನೋಡಿ, ಅದುವರೆಗೆ ಸಾಮಂತರಾಜನ ಪಕ್ಷದಲ್ಲಿ ದುರ್ಮುಖರಾಜನ ಸೈನಿಕರೊಂದಿಗೆ ಹೋರಾಡುತ್ತಿದ್ದವರು ಭಯ ಕಂಪಿತರಾಗಿ, "ಅಯ್ಯಾ! ಸೂರ್ಯಭೂಪತಿ ಮಹಾರಾಜರೇ! ಕರಡೀಕೆಂಗಣ್ಣ ಮಾಂತ್ರಿಕನಂತೆ! ಆನೆಗಳ ಮಂದೆಯೊಂದಿಗೆ ಬರುತ್ತಿದ್ದಾನೆ! ಬೇಗನೇ ನಾವು ಓಡಿ ಹೋಗುವುದೇ ಕ್ಷೇಮ! ಎಲ್ಲದಕ್ಕೂ ಮೊದಲು ಜೀವ ಉಳಿದರೆ. ಮುಂದೇನಾದರೂ ಮಾಡಬಹುದು." ಎಂದು ಪುಕ್ಕಲು ಕೂಗನ್ನೆಬ್ಬಿಸಿದರು.

ಆ ಕೂಗನ್ನು ಕೇಳಿ ಚಿಕ್ಕದೊಂದು ಕಟ್ಟಡದ ಹಿಂದಿನಿಂದ ಸಾಮಂತ ಸೂರ್ಯಭೂಪತಿ ಕುದುರೆಯ ಮೇಲೆ, ನೆತ್ತರಲ್ಲಿ ನೆನೆದ ಕತ್ತಿಯೊಂದಿಗೆ ಮುಂದಕ್ಕೆ ಬಂದು, "ನೀವಾರೂ ಯಾವುದಕ್ಕೂ ಹೆದರಬೇಕಾಗಿಲ್ಲ, ದುರ್ಮುಖನ ಪಕ್ಷ ಸೇರಿದವರೆಲ್ಲರನ್ನೂ ಹತ ಮಾಡಿಯಾದ ಹಾಗೇ ಆಯಿತು. ಈ ಕರಡೀಕೆಂಗಣ್ಣನೊಬ್ಬ ನಮ್ಮನೇನು ಮಾಡಬಲ್ಲನು? ಅವನೀಗ



ಹಲ್ಲು ಮುರಿದ ಮೃಗ ! ಮರ್ಕಟ ರೂಪದಲ್ಲಿ ನಮ್ಮ ಪಕ್ಷದಲ್ಲಿರುವವನು ಈ ಕೆಂಗಣ್ಣ ಮಾಂತ್ರಿಕನನ್ನು ಮಿಂಚಿದ ಮಂತ್ರ ಶಕ್ತಿಗಳುಳ್ಳವನುಗೊತ್ತಾ ? ಹೆದರಬೇಡಿರಿ. ಧೈರ್ಯದಿಂದ ಹೋರಾಡಿರಿ !" ಎಂದು ಕೂಗಿ ಹೇಳಿದನು.

ಆ ಸಾಮಂತರಾಜನನ್ನು ನೋಡಿದ ಕೂಡಲೇ ಕಾಳೀವರ್ಮನು ಕರಕರನೆ ಹಲ್ಲು ಕಡಿದು, "ಎಲೋ! ಹುಲು ಸಾಮಂತಾ ? ಕೋತಿಯ ಸಹಾಯದಿಂದ ಯುದ್ಧದಲ್ಲಿ ಗೆಲ್ಲುವೆನೆಂದುಕೊಂಡೆಯಾ? ನೀನು ದೊಡ್ಡ ರಾಮನಂಥವನೇನು ? ಎಲೋ ವಂಚಕನೇ ! ದುರ್ಮುಖ ರಾಜನನ್ನು ಏನು ಮಾಡಿದೆ ? ಅವನ ಕೈಯಿಂದಲೇ ನಿನ್ನ ತಲೆ ಕಡಿಸಲು ಬಂದಿದ್ದೇನೆ ! ತಪ್ಪಿದರೆ ಈಗಲೇ ನಿನ್ನ ತಲೆ ನೆಲಕ್ಕುರುಳುತ್ತದೆ" ಎಂದನು.

ಅಷ್ಟರಲ್ಲಿ ಕಟ್ಟಡದ ಗೋಡೆಯ ಮೇಲೆ ಮಾಯಾ ಮರ್ಕಟವು ಚಂಗನೆ ಹಾರಿ ಕಿಚಕಿಚವೆಂದು ಅರಚಿತು. ಎಲ್ಲರೂ ಅದರ ಕಡೆಗೆ ತಲೆಯೆತ್ತಿ ನೋಡಿದರು. ಮರ್ಕಟವು ಬಲಗೈಯಲ್ಲಿ ಮಂತ್ರದಂಡವನ್ನು ಹಿಡಿದು ಕೊಂಡಿತ್ತು. ಎಡದಕೈಯಲ್ಲಿ ಒಂದು ತಲೆಯನ್ನು ಜುಟ್ಟು ಹಿಡಿದು ಓಲಾಡಿಸುತ್ತಾ, "ಎಲೋ, ಕಾಳೀವರ್ಮಾ ! ದುರ್ಮುಖರಾಜನು ಎಲ್ಲಿರುವ ನೆಂದಲ್ಲವೇ ಕೇಳಿದೆ ? ಇಕೋ ಅವನ ತಲೆ ! ಮುಂಡ ಎಲ್ಲಿದೆಯೋ ನೀನೇ ಹುಡುಕಿ ಕಂಡು ಹಿಡಿ ! ಅಷ್ಟ ರೊಳಗೆ ನಿನ್ನ ತಲೆ ಸೂರ್ಯಭೂಪತಿಯ ಕತ್ತಿಗೆ ಬಲಿಯಾದರೆ, ಪಾಪ ! ಮತ್ತೆ ಯಾರು ಹುಡು ಕುತ್ತಾರೋ ! ನೋಡೋ ಸಾಯಲಿಕ್ಕಿಬಂದವನೇ !" ಎಂದು ಕಿಚಕಿಚನೆ ನಕ್ಕಿತು.

ಮರ್ಕಟನನ್ನು ನೋಡಿ, ಕರಡಿಕೆಂಗಣ್ಣ ಮಾಂತ್ರಿಕನು, ಕತ್ತಿ ಹಿರಿದು ತನ್ನ ಕೋಣವನ್ನು ಮುಂದಕ್ಕೆ ನಡೆಸುತ್ತ, "ಎಲೋ ! ಮರ್ಕಟ ರೂಪ ದಲ್ಲಿರುವ ದುಷ್ಟನೇ ! ನನ್ನ ಮಂತ್ರದಂಡವನ್ನು ಕದ್ದುಕೊಂಡು ಗೆದ್ದೆನೆಂದು ಹಾರಬೇಡ ! ಕಳ್ಳಾ ! ಭ್ರಾಂತಿಮತೀ ! ನನ್ನ ಈ ಖಡ್ಗವು ಆ ಮಂತ್ರ ದಂಡಕ್ಕೇನೂ ಕಡಿಮೆಯದಲ್ಲ. ನಿನ್ನ ಗುರು ತಾಂತ್ರಿಕ ಮಿಥ್ಯಾ ಮಿಶ್ರನು ಕೂಡಾ, ಆ ಬ್ರಹ್ಮಪುತ್ರಾ ನದಿಯ ಪ್ರಾಂತ ಬಿಟ್ಟು ಈ ಅರಣ್ಯ ಪ್ರದೇಶಕ್ಕೆ ಬಂದನೇನು? ಅವನ ಬೆಂಬಲದಿಂದಲೇ ನೀನಿಷ್ಟೂ ಹಾರುವುದೇನು? ಬೊಗಳೋ ಇನ್ನಿಷ್ಟು !" ಎಂದನು.

ಮಾಯಾಮರ್ಕಟನು ಹುಬ್ಬು ಹಾರಿಸಿ ಅವ ಹೇಳನೆಯಿಂದ ನಕ್ಕು, "ಓಹೋ ! ಭಲ್ಲೂಕ ರಕ್ತ ಲೋಚನಾ ! ನಿನ್ನ ಮಂತ್ರ ಶಕ್ತಿ ಅಷ್ಟು ದೊಡ್ಡ ದಾದರೆ ನನ್ನ ಗುರುಗಳು ಎಲ್ಲಿದ್ದಾರೆಂದು ತಿಳಿದು ಕೊಳ್ಳಲಾರೆಯೇನು ? ಆ ಮಹಾನುಭಾವನು ನಿನ್ನ ಗುರುವಾದ ಭಲ್ಲೂಕ ಪಾದನ ತಲೆ ತರಿಯುಲು ಮಂಜಿನ ಕಲ್ಲ ಮೇಲೆ ಕತ್ತಿ ಮಸೆಯುತ್ತಿದ್ದಾನು. ಹೋಗು, ಹುಡುಕಿಕೋ ! ನನ್ನ ಬಾಯಿಯಿಂದ ನಿನಗೆ ಸಹಾಯದ ಮಾತು ಬರಲಾರದು" ಎಂದನು.

ಮರ್ಕಟನ ಮಾತು ಕೇಳಿ ಕರಡಿಕೆಂಗಣ್ಣನಿಗೆ ವಿಪರೀತ ಕೋಪ ಬಂದಿತು. ಕಟುವಾದ ಕೆಂಗಣ್ಣಿನಿಂದ ಮರ್ಕಟನನ್ನು ಸುಡುವಂತೆ ನೋಡಿ, "ಕಾಳೀವರ್ಮಾ! ಕಟುಕ ನರಭಲ್ಲೂಕಾ! ಈ ಕೋಟೆಯೊಳಗಿನಿಂದ ಸಾಮಂತನ ಪಕ್ಷದವನು ಒಬ್ಬನು ಸಹಾ ಜೀವದೊಂದಿಗೆ ಓಡಿ ಹೋಗದಂತೆ ದ್ವಾರದ ಹತ್ತಿರ ನೋಡಿಕೊಳ್ಳಿ. ಈ ಮಾಯಾಮರ್ಕಟನನ್ನೂ ಜೀವದೊಂದಿಗೆ ಹಿಡಿದು ಚಿತ್ರವಧೆ ಮಾಡಿ ಕೊಲ್ಲದೇ ಬಿಡಲಾರೆ! ಹೇಗೆ ತಪ್ಪಿಸಿಕೊಂಡು ಹೋಗುತ್ತಾನೋ ನೋಡುತ್ತೇನೆ" ಎಂದನು.

ಮಾಂತ್ರಿಕನ ಮಾತು ಮುಗಿಯುವಷ್ಟರೊಳಗೆ ಕಟುಕಕರಡಿಯುವನೊಂದಿಗೆ ಆನೆಯ ಮೇಲೆ ಕುಳಿತಿದ್ದ ಆಟವಿಕನ ಕೈಗಳಿಂದ ಗುರಿತಪ್ಪದ ಬಾಣವು ಸೊಯ್ಯನೆ ಹೋಗಿ ಮಾಯಾಮರ್ಕಟನ ತೋಳಿನ ಮೂಲಕ್ಕೆ ತಾಗಿತು. ಆ ಪೆಟ್ಟಿಗೆ ಆ ಕೈಯಲ್ಲಿ ಹಿಡಿದಿದ್ದ ತಲೆ ಜಾರಿ ಬೀಳುತ್ತಿರಲು, ಮಾಯಾಮರ್ಕಟನು ಕೆಟ್ಟ ದನಿಯಿಂದ ಚೀರಿದನು. ಇದಿರು ನೋಡದ ಆ ಬಾಣದ ಹೊಡೆತದಿಂದ ತೋಳಿನಲ್ಲಿ ರಕ್ತ ಸುರಿಯುತ್ತಿತ್ತು. ಅಷ್ಟೆತ್ತರದಿಂದ ಬಿದ್ದ ತಲೆಯನ್ನು ನೋಡಿದ ಕೂಡಲೇ, ದುರ್ಮುಖನ ಅಂಗರಕ್ಷಕರಿಬ್ಬರೂ ಆನೆಯ ಮೇಲಿನಿಂದ ಕೆಳಗೆ ಹಾರಿ ಓಡಿಹೋಗಿ ಆ ತಲೆಯನ್ನು ನೋಡಿ, "ಓಹ್! ಇದು ದುರ್ಮುಖ ಮಹಾರಾಜರ ತಲೆಯೇ ಅಲ್ಲ, ಆ ಮಾಯದ ಕೋತಿ ನಮ್ಮನ್ನು ಮೋಸ ಮಾಡಲು ನೋಡಿತು." ಎಂದರು. ಆ ಕೂಡಲೇ ಕಟುಕಕರಡಿಯುವನು ಭೈರವನಾಮ ಗರ್ಜನೆ ಮಾಡುತ್ತ, ಚಪಗೊಡಲಿಯನ್ನು ಮೇಲೆತ್ತಿ ಕುಣಿಸುತ್ತ, "ಎಲೋ ಆಟವಿಕ ಸೇವಕಾ! ಮಾಯಾ ಮರ್ಕಟವನ್ನು ಹೊಡೆದು ಅದ್ಭುತವಾದ ಕೆಲಸ ಮಾಡಿದೆ. ಮಹಾಬಿಲ್ಲುಗಾರ ನೀನು. ಇನ್ನು ಆ ದುರ್ಮುಖ ರಾಜನನ್ನು ಹುಡುಕಿ ಕಂಡು ಹಿಡಿಯಬೇಕು. ನನ್ನ ಚಪಗೊಡಲಿಗೆ ತಪ್ಪಿದವರನ್ನು ನಿನ್ನ ಬಾಣಗಳಿಂದ ಹೊಡೆದುಕೊಲ್ಲು. ಅಪ್ಪಣೆ ಕೊಟ್ಟೆನು" ಎಂದು ಆನೆಯ ತಲೆಯ ಮೇಲೆ ಕೊಡಲಿಯ ಹಿಡಿಕೆಯಿಂದ ತಿವಿದನು.



ಆನೆ ಭಯಂಕರವಾಗಿ ಘೀಂಕರಿಸುತ್ತ ಬೇಗ ಬೇಗ ನಡೆಯಿತು. ಅಷ್ಟರೊಳಗೆ ಮಾಯಾಮರ್ಕಟವು ಗೋಡೆಯ ಮೇಲಿನಿಂದ ಕಾಣದೇ ಹೋದುದರಿಂದ ಕಾಳೀವರ್ಮನು ಕರಡಿಕೆಂಗಣ್ಣನೊಂದಿಗೆ, "ಮೊದಲು ನಾವು ಸಾಮಂತ ರಾಜನನ್ನೂ ಅವನ ಸೈನಿಕರನ್ನೂ ಹೊಡೆದುರುಳಿಸಬೇಕು. ದುರ್ಮುಖ ರಾಜನು ಈ ಕೋಟೆಯೊಳಗೆ ಯಾವುದೋ ಮೂಲೆಯಲ್ಲಿ ಬದುಕಿಕೊಂಡಿದ್ದಾನೆಂದೇ ನನಗೆ ಕಾಣುತ್ತದೆ. ಮೂಲೆ ಮುಡುಕು ಬಿಡದೆ ಸರಿಯಾಗಿ ಹುಡುಕಿರಿ" ಎಂದನು.

ಕೂಡಲೇ ಕರಡಿಕೆಂಗಣ್ಣ ಮಾಂತ್ರಿಕನು, "ಭಲ್ಲೂಕ ಪಾದಗುರೋ!" ಎಂದು ಗರ್ಜಿಸಿ ಕತ್ತಿಯನ್ನೆತ್ತಿ, "ಎಲೋ, ಕೇಳಿರಿ! ದುರ್ಮುಖ ರಾಜನ ಪಕ್ಷದವರೆಲ್ಲಾ ನಮ್ಮ ಹಿಂದೆ ಬನ್ನಿ. ಎದುರು ತಿರುಗಿದವರು

ನನ್ನ ಕತ್ತಿಗೆ ಬಲಿಯಾಗಿರಿ! ತಪ್ಪಿದವರು ಚಿತ್ರಹಿಂಸೆಗೆ ಬಲಿಯಾಗುವಿರಿ, ಜಾಗ್ರತೆ!" ಎಂದು ನಾಲ್ಕು ಸುತ್ತಲೂ ಕೇಳುವಂತೆ ಕೂಗಿದನು.

ಅದುವರೆಗೂ ಸಾಮಂತನ ಸೈನಿಕರ ಧಾವತಿಗೆ ತಾಳಿಕೊಳ್ಳಲಾಗದೆ ಕೋಟೆಯೊಳಗೆ ಅಲ್ಲಲ್ಲಿ ಅಡಗಿಕೊಂಡಿದ್ದ ದುರ್ಮುಖನ ಪಕ್ಷದ ಸೈನಿಕರು ಬೇಗಬೇಗನೆ ಮಾಂತ್ರಿಕನ ಬಳಿಗೆ ಓಡೋಡಿ ಬಂದು "ಅಯ್ಯಾ, ನಮ್ಮನ್ನು ರಕ್ಷಿಸಿರಿ. ನಿಜ ಸಂಗತಿ ಹೇಳುತ್ತೇವೆ, ನಮ್ಮ ದುರ್ಮುಖ ಮಹಾರಾಜರು ಶತ್ರುಗಳ ಕಾಟಕ್ಕೆ ಹೆದರಿ ಸಿಂಹಾಸನವಿರುವ ಸಭಾಮಂಟಪದಲ್ಲಿ ಅಡಗಿಕೊಂಡಿದ್ದಾರೆ" ಎಂದು ಹೇಳಿದರು.

"ಹಾಗಾದರೆ ಅಲ್ಲಿಗೆ ದಾರಿ ತೆಗೆಯಿರಿ. ಇನ್ನು ನಿಮಗೆ ಯಾವ ಭಯವೂ ಇಲ್ಲ. ದುರ್ಮುಖ ರಾಜನೂ ಹೆದರ ಬೇಕಾಗಿಲ್ಲ, ನಾವು ಅವನಮಿತ್ರರೇ. ಶತ್ರು ಸೈನಿಕರ ಸಂಗತಿಯನ್ನು ನಾವು ನೋಡಿಕೊಳ್ಳುತ್ತೇವೆ" ಎಂದನು ಕಾಳೀವರ್ಮ.

ದುರ್ಮುಖನ ಪಕ್ಷದವರು "ಹೀಗೆ ಬನ್ನಿ" ಎಂದು ಮುಂದೆ ಸಾಗಿದರು. ಕಾಳೀವರ್ಮನೂ, ಕರಡಿಕಂಗಣ್ಣನೂ ಸಭಾ ಮಂಟಪಕ್ಕೆ ಹೋಗುವ ದಾರಿಯಲ್ಲಿ ಒಬ್ಬ ಶತ್ರು ಪಕ್ಷದ ವ್ಯಕ್ತಿಯೂ ಕಾಣಲಿಲ್ಲ, ಅವರು ಕೋಟೆಯೊಳಗಿನ ಮತ್ತೊಂದು ಭಾಗ ಸೇರಿ ಮಂತ್ರಾಲೋಚನೆ ಮಾಡಿಕೊಂಡಿದ್ದರು. ಸಾಮಂತ ಸೂರ್ಯಭೂಪತಿ ಮಾಯಾಮರ್ಕಟನ ತೋಳನ್ನು ಪೂಸುತ್ತ ಮುಂದೇನು ಮಾಡಬೇಕೆಂದು ಆಲೋಚಿಸುತ್ತಿದ್ದನು.

ಕಾಳೀವರ್ಮನೂ ಮಾಂತ್ರಿಕನೂ ಸಭಾಮಂಟಪವನ್ನು ಸಮೀಪಿಸುವಷ್ಟರಲ್ಲಿ ಕಟುಕಭಲ್ಲೂಕನ ಆನೆಯ ಮೇಲಿನ ಸವಾರಿಯೂ ಅಲ್ಲಿಗೆ ಬಂದಿತು. ಆಗ ಸಿಂಹಾಸನದ ಮಂಟಪದ ಬಾಗಿಲು ಥಕ್ಕನೆ ತೆರೆದುಕೊಂಡಿತು. ಆ ಮಂಟಪದಂತಹ ಸುಂದರ ಕೋಣೆಯ ನಡುವೆ ಸಿಂಹಾಸನದ ಮೇಲೆ ದುರ್ಮುಖ ರಾಜನು ಕುಳಿತುಕೊಂಡಿದ್ದನು. ಅವನು ಬಂದವರನ್ನು ನೋಡಿ ಗಾಬರಿಯಿಂದ ಹಾರಿ ಚಲಿಸಲಿಲ್ಲ. ಹೆದರಿ ಕೂಗಲೂ ಇಲ್ಲ. ಅವನನ್ನು ನೋಡಿ ಕಾಳೀವರ್ಮ ಮೊದಲಾದವರು ಆಶ್ಚರ್ಯಪಡುತ್ತಿರಲು, ದುರ್ಮುಖ ರಾಜನು ಕೈಯೆತ್ತಿ, "ಕರಡಿ ಮುಖದ ಕಟುಕಾ! ಸ್ವಲ್ಪ ಹೊತ್ತಾದರೂ ಸಿಂಹಾಸನದ ಮೇಲೆ ಕುಳಿತುಕೊಳ್ಳಬೇಕೆಂಬ ನನ್ನ ಆಸೆ ತೀರಿತು. ಈಗ ನೀನು ನಿರ್ವಿಘ್ನವಾಗಿ ನನ್ನ ತಲೆಯನ್ನು ಕಡಿ. ನಿನ್ನ ಗುರುವಿಗೆ ಕಾಣಿಕೆ ಕೊಡು!" ಎಂದನು. ಅದನ್ನು ಕೇಳಿ ಕಟುಕರಡಿಯವನು ಉತ್ಸಾಹದಿಂದ ಕೂಗಿ, ಆನೆಯ ಮೇಲಿನಿಂದ ಸಭಾಮಂಟಪಕ್ಕೆ ಹಾರಿ ಚಪಗೊಡಲಿಯನ್ನು ತಿರುಗಿಸಿದನು. (ಇನ್ನೂ ಇದೆ)





# ಕರಡಿ ಕೆಂಗಣ್ಣ

## ೧೫

[ಕಾಳೀವರ್ಮ ತನ್ನ ಅನುಚರರೊಂದಿಗೆ ಕೋಟೆಯೊಳಗೆ ಪ್ರವೇಶಿಸಿದನು. ಮಾಯಾಮರ್ಕಟನು ಮುಂಡದಿಂದ ಬೇರ್ಪಟ್ಟ ಒಂದು ತಲೆಯನ್ನು ತೋರಿಸಿದನು. ಅದು ದುರ್ಮುಖರಾಜನ ತಲೆ ಅಲ್ಲವೆಂದು ಗೊತ್ತಾಯಿತು. ಅವರು ದುರ್ಮುಖನನ್ನು ಹುಡುಕುವಾಗ ಸಭಾ ಮಂಟಪದಲ್ಲಿ ಸಿಂಹಾಸನದಲ್ಲಿ ಕುಳಿತಿದ್ದ ದುರ್ಮುಖನನ್ನು ನೋಡಿದರು. ಆಗ ಕರಡಿ ಮನುಷ್ಯ ಆನೆಯ ಮೇಲಿನಿಂದ ಮಂಟಪದೊಳಗೆ ಹಾರಿದನು.]

ಆವೇಶದಿಂದ ಚಪಗೊಡಲಿಯನ್ನೆತ್ತಿಕೊಂಡು ಕಟುಕ ಕರಡಿಯಾವನು ಸಭಾ ಮಂಟಪದೊಳಗೆ ಹಾರಿದುದನ್ನು ನೋಡುತ್ತಲೇ, ಅವನಿಂದ ಬರುವ ಅಪಾಯವನ್ನು ಅರಿತು ಕಾಳೀವರ್ಮನು, ಆನೆಯ ಮೇಲಿದ್ದ ಆಟವಿಕನನ್ನು ನೋಡಿ, "ಎಲೋ! ಆಟವಿಕಾ! ಓಡಿ ಹೋಗಿ ಆ ಕೊಲೆಗಾರನು ದುರ್ಮುಖರಾಜನ ತಲೆ ಕಡಿಯದಂತೆ ಅಡ್ಡಗಟ್ಟು. ದುರ್ಮುಖ ರಾಜನು ಹಾಗೆಲ್ಲಾ ಸಾಯಕೂಡದು! ಓಡು! ಓಡು!" ಎಂದು ಕೂಗಿ ಹೇಳಿದನು. ಕಾಳೀವರ್ಮನ ಕಂಠದಿಂದ ಹೊರಟ ಗಂಭೀರ ಕೂಗಿನ ಅವರಸದ ಆಜ್ಞೆಯನ್ನು ಕೇಳುತ್ತಲೇ ಆಟವಿಕನು ಆನೆಯ ಮೇಲಿನಿಂದ ಕೆಳಗೆ ಹಾರಿ, ಓಡುತ್ತಾ, ಹೋಗಿ ಕಟುಕಕರಡಿಯವನ ಮುಂದೆ ಅಡ್ಡಗಟ್ಟಿ, ತಿರುಗಿ ನಿಂತು, "ಭಲ್ಲೂಕ ದೊರೇ! ದುಡುಕಬಾರದಂತೆ. ದುರ್ಮುಖರಾಜನ ತಲೆಯನ್ನು ಕಡಿಯಬಾರದು ಅಂತ ಕಾಳೀವರ್ಮ ಮಹಾನಾಯಕರು ಹೇಳುತ್ತಾರೆ." ಎಂದನು.

ಅದನ್ನು ಕೇಳಿ ಕಟುಕ ಕರಡಿಯವನು ಆಶ್ಚರ್ಯ ಪಡುತ್ತ, "ಇದೆಂಥ ವಕ್ರಮಾತು? ತಮ್ಮನ್ನು ಅವಮಾನಪಡಿಸಿದ ದುಷ್ಟ ದುರ್ಮುಖರಾಜನ ತಲೆ ಕಡಿದು ತರಬೇಕೆಂದಲ್ಲವೇ ಕರಡಿ ಕೆಂಗಣ್ಣ ಮಹಾ



ಮಾಂತ್ರಿಕರ ಆಜ್ಞೆ? ಅದಕ್ಕಾಗಿ ತಾನೇ ಇಷ್ಟೆಲ್ಲಾ ಹೇಚಾಡುತ್ತಿದ್ದೇನೆ? ಅವರ ಆಜ್ಞೆ ನೆರವೇರಿಸದೆ ಹೋದರೆ ನನ್ನನ್ನು ನಖಶಿಖಾಂತ ಕರಡಿಯನ್ನಾಗಿಯೇ ಮಾಡಿಬಿಟ್ಟಾರು!" ಎಂದನು.

ಅಷ್ಟರೊಳಗೆ ಅಲ್ಲಿಗೆ ಕಾಳೀವರ್ಮನು ಬಂದನು. ಕಟುಕಕರಡಿಯುವನು ಕಾಳೀವರ್ಮನನ್ನು ಮೀರಿ ಮುಂದು ವರಿಯಲು ಧೈರ್ಯವಿಲ್ಲದೆ ಟಕಮಕನೆ ನೋಡುತ್ತ ನಿಂತನು. ಕಾಳೀವರ್ಮನಿಗೂ ಸಿಂಹಾಸನ ದಲ್ಲಿ ಬೊಂಬೆಯ ಹಾಗೆ ಕುಳಿತಿರುವ ದುರ್ಮುಖ ನನ್ನು ನೋಡಿ ಆಶ್ಚರ್ಯವಾಯಿತು. "ಈ ರಾಜನಿಗೆ ಏನಾಯಿತು? ಮಂತ್ರ ಬಂಧನಗೊಂಡವನ ಹಾಗೆ ಕಣ್ಣುಮುಚ್ಚಿ ಕದಲದೆ ಕುಳಿತಿರುವನೇಕೆ? ನಿಜಕ್ಕೂ ಶತ್ರುಗಳೇನಾದರೂ ಮಂತ್ರ ಮಾಡಿರಬಹುದೆ?" ಎಂದು ತನಗೆ ತಾನೇ ಹೇಳಿಕೊಂಡನು.

"ಅದೇ ನಮ್ಮ ಕರಡಿ ಕೆಂಗಣ್ಣ ಮಹಾ ಮಾಂತ್ರಿಕರ ಮಹಿಮೆ ಎಂದರೆ! ಅವರ ಬಂಟನಾದ ನಾನು ಅವರ ಆಜ್ಞೆ ಹೊತ್ತುಕೊಂಡು ಬಂದದ್ದು ನೋಡಿ, ಹೀಗೆ ಪ್ರತಿಭಟನೆ ತೋರದೆ ಕುಳಿತಿದ್ದಾನೆ! ಅವರ ಮಂತ್ರ ಶಕ್ತಿಯ ಮಹಿಮೆಯೇ ಅಂಥಾದ್ದು! ಈಗ ನೀವೇನು ಆಜ್ಞೆ ಮಾಡುವಿರಿ? ಇವನ ತಲೆ ಕಡಿಯುವುದು ಬೇಡೆನ್ನುವಿರಾ? ಗುರುಗಳು ನಿಮ್ಮ ಹತ್ತಿರ ಏನಾದರೂ ಹೇಳಿದರೇನು?" ಎಂದು ಕೇಳಿದನು ಕಟುಕಕರಡಿಯುವನು.

ಕಾಳೀವರ್ಮನು ದುರ್ಮುಖನ ಹತ್ತಿರ ಹೋಗಿ ಪರೀಕ್ಷಿಸುತ್ತ, "ನರಭಲ್ಲೂಕಾ! ನೀನು ತಲೆ ಕಡಿಯುವು ದಕ್ಕೆ ಮೊದಲೇ ದುರ್ಮುಖನು ಪ್ರಾಣ ಬಿಟ್ಟಹಾಗಿದೆ. ಏನಾಗಿರಬಹುದು? ಕೊಡಲೀ ಬೀಸಿಕೊಂಡು ನೀನು ಬರುವುದನ್ನು ನೋಡಿಯೇ ಇವನ ಗುಂಡಿಗೆ ನಿಂತು ಹೋಯಿತೇನೋ?" ಎಂದನು.

"ನನ್ನ ನರಭಲ್ಲೂಕ ಶಿಷ್ಯನು ದುರ್ಮುಖನ ತಲೆ ಕಡಿಯಲಿಲ್ಲವಷ್ಟೆ?" ಎಂದು ಕೇಳುತ್ತ ಕೆಂಗಣ್ಣ ಮಾಂತ್ರಿಕನು ಅಲ್ಲಿಗೆ ಬಂದನು. ಅವನನ್ನು ನೋಡಿ ನರಭಲ್ಲೂಕನು ಬದಿಗೆ ಹಾರಿ ಪರಮ ವಿಧೇಯತೆ ಯಲ್ಲಿ ನಿಂತನು.

ಸಿಂಹಾಸನದಲ್ಲಿ ಅಚಲನಾಗಿ ಕುಳಿತಿದ್ದ ದುರ್ಮುಖ ರಾಜನನ್ನು ನೋಡಿ ಕರಡಿಕೆಂಗಣ್ಣನು, "ಪಾಪ! ಪ್ರಾಣಭಯದಿಂದ ಮೂರ್ಛೆ ಹೋಗಿದ್ದಾನೆ!" ಎನ್ನುತ್ತ ಕತ್ತಿಯನ್ನು ಅವನ ಹೆಗಲಿಗೆ ತಾಗಿಸಿ, "ರಾಜಾ! ದುರ್ಮುಖಾ! ನಿನ್ನ ಪ್ರಾಣಕ್ಕೆ ಏನೂ ಭಯವಿಲ್ಲ! ಎದ್ದೇಳು. ಕಣ್ಣು ಬಿಟ್ಟು ಮುಂದಿರುವವ ರನ್ನು ನೋಡು." ಎಂದನು.

ಆ ಕೂಡಲೇ ದುರ್ಮುಖನು ಕಣ್ಣು ತೆರೆದು ಎರಡು ಕೈಗಳನ್ನೂ ತಲೆಯ ಮೇಲಿನಿಂದ ಕುತ್ತಿಗೆಯ ವರೆಗೂ ಇಳಿಸಿಕೊಳ್ಳುತ್ತ, "ಆಹ್! ನನ್ನ ತಲೆ! ಏನೂ ಆಗದೆ ಕುತ್ತಿಗೇ ಮೇಲೆ ಇನ್ನೂ ಹಾಗೇ ಇದೆ! ಕಟುಕನ ಕೊಡಲಿಯ ಪೆಟ್ಟಿಗೂ ಏನೂ ಆಗ ಲಿಲ್ಲವೆ? ಪೆಟ್ಟು ಬಿದ್ದದ್ದೇ ಗೊತ್ತಾಗಲಿಲ್ಲ. ಅಷ್ಟು

ಗಟ್ಟಿ ನನ್ನ ತಲೆ!" ಎಂದನು ತನಗೆ ತಾನೇ. ಇನ್ನೂ ಅಲ್ಲಿರುವವರ ಮೇಲೆ ಅವನ ಲಕ್ಷ್ಯ ಹರಿದಿಲ್ಲ.

ಅವನ ಮಾತು ಕೇಳಿ ಎಲ್ಲರೂ ಗೊಳ್ಳನೆ ನಕ್ಕರು. ಆ ನಗುವನ್ನು ಕೇಳಿ ದುರ್ಮುಖನು ಗಾಬರಿಯಿಂದ ಎದ್ದು ನಿಂತು, "ಹ! ಕಾಳೀವರ್ಮ! ಮಾಂತ್ರಿಕ! ಎಲ್ಲರೂ ಇಲ್ಲಿರುವಿರಾ? ನನಗೇನೋ ಸಿಂಹಾಸನದ ಮೇಲೆ ಒಂದುಸಾರಿ ಕುಳಿತು ಪ್ರಾಣ ಬಿಡಬೇಕೆಂದಿತ್ತು. ಕುಳಿತಾಯಿತು. ಕೋರಿಕೆ ತೀರಿತು. ಇನ್ನೂ ತಲೆ ಏಕೆ ಹಾರಿಲ್ಲವೋ? ಈಗ ನನ್ನ ತಲೆ ಹಾರಿಬಿದ್ದರೂ ನನಗೇನೂ ವ್ಯಸನವಿಲ್ಲ." ಎಂದನು.

"ಇನ್ನೂ ಕುಳಿತುಕೋ ರಾಜಾ" ಎಂದು ಕಾಳೀವರ್ಮನು ದುರ್ಮುಖ ರಾಜನ ಭುಜಗಳನ್ನು ಹಿಡಿದು ಸಿಂಹಾಸನದ ಮೇಲೆ ಒತ್ತಿ ಕುಳ್ಳಿರಿಸಿ, "ದುರ್ಮುಖ ಮಹಾರಾಜನೇ, ನೀನೀಗ ನಮ್ಮ ಸ್ನೇಹಿತನಾಗಿರುವೆ. ನಡೆದು ಹೋದುದನ್ನೆಲ್ಲಾ ಮರೆತುಬಿಡು. ನಿನ್ನ ಕೋಟೆಯನ್ನು ಆಕ್ರಮಿಸಿದ ದುಷ್ಟನಾದ ಸಾಮಂತ ಸೂರ್ಯ ಭೂಪತಿಯೂ, ನಮ್ಮ ಗುರು ಕರಡಿ ಕೆಂಗಣ್ಣ ಮಾಂತ್ರಿಕರ ಮಂತ್ರದಂಡವನ್ನು ಅಪಹರಿಸಿದ ಮಾಯಾ ಮರ್ಕಟವೂ ಎಲ್ಲಿರುವರೆಂದು ಗೊತ್ತಾಗ ಲಿಲ್ಲ. ನಾವೀಗ ಮೊದಲು ಅವರನ್ನು ಹಿಡಿಯ ಬೇಕು. ಅದಕ್ಕೆ ಸಹಾಯ ಮಾಡುವುದರಿಂದ ನಿನಗೂ ಒಳ್ಳೆಯದಾಗುತ್ತದೆ. ನಿನಗೆ ಗೊತ್ತಿರುವುದನ್ನು ಹೇಳು." ಎಂದನು.

ಕಾಳೀವರ್ಮನ ಮಾತನ್ನು ಕೇಳುತ್ತಿದ್ದಂತೆ, ದುರ್ಮುಖರಾಜನ ಮುಖವು ವಿಕಸಿತವಾಗುತ್ತಾ ಹೋಯಿತು. ಕಡೆಗೆ ಅವನು ಅತ್ಯಂತ ಸಂತೋಷ ದಿಂದ ಸಿಂಹಾಸನದ ಮೇಲಿಂದೆದ್ದು ಸಭಾಮಂಟಪದ ಮಧ್ಯಕ್ಕೆ ಬಂದು, ಕತ್ತಿಯನ್ನು ಸರ್ರನೆ ಹಿರಿದು ಎತ್ತಿ ಹಿಡಿದು ದೊಡ್ಡ ಕಂಠದಿಂದ, "ಯಾರಲ್ಲೀ! ಉದಯ ಗಿರಿ ರಾಜನಾದ ನಾನು ಆಜ್ಞೆ ಮಾಡುತ್ತಿದ್ದೇನೆ. ವಿಶ್ವಾಸವುಳ್ಳ ಸೈನಿಕರೆಲ್ಲಾ ಈ ಕ್ಷಣವೇ ಇಲ್ಲಿಗೆ ಬನ್ನಿ.



ಬಂದವರಿಗೆಲ್ಲ ಬಹುಮಾನ! ಬಾರದೇ ಇದ್ದವರನ್ನು ರಾಜದ್ರೋಹಿಗಳೆಂದು ಭಾವಿಸಲಾಗುವುದು. ಅಂಥ ವರಿಗೆ ಶಿರಚ್ಛೇದವೇ ತಕ್ಕ ಶಿಕ್ಷೆ! ಎಚ್ಚರಿಕೆ! ಕೇಳಿಸಿ ತೇನು?" ಎಂದನು.

ಆಗ ನರಭಲ್ಲೂಕನು ಮಂಟಪದ ಮುಂದಿನ ಗೋಡೆಯ ಮೇಲೆ ಹಾರಿನಿಂತು, ತನ್ನ ಕೊಡಲಿ ಯನ್ನು ಝುಳಪಿಸುತ್ತ, "ಯಾರಲ್ಲೀ! ಈ ಕೋಟೆ ಯೊಳಗೂ ಹೊರಗೂ ಅಲ್ಲೀ ಇಲ್ಲೀ ಅಡಗಿರುವವ ರೆಲ್ಲಾ ದುರ್ಮುಖರಾಜರ ಆಜ್ಞೆಯನ್ನು ಕೇಳಿದಿರಾ? ಎಲ್ಲರೂ ಬನ್ನಿ! ಓಡೋಡಿ ಬನ್ನಿ!" ಎಂದು ಕರ್ಕಶ ಸ್ವರದಿಂದ ಅರಚಿ ಹೇಳಿದನು. ಕೂಡಲೇ ಕೋಟೆಯ ಎಲ್ಲಾ ಬದಿಗಳಿಂದಲೂ ಗುಂಪು ಗುಂಪಾಗಿ ಸೈನಿಕರು ಹೊರಟು ಬರುತ್ತ ಸಭಾ ಮಂಟಪದ ಮುಂದಿನ ಪ್ರಾಂಗಣದಲ್ಲಿ ಕೂಡ ತೊಡಗಿದರು. ಬರುವಷ್ಟು ಮಂದಿ ಬಂದು ಸೇರಿದ ಮೇಲೆ ಕಾಳೀವರ್ಮನು ಅವರನ್ನೆಲ್ಲಾ ಎಣಿಸಿ ನೋಡಿ, ರಾಜಾ ದುರ್ಮುಖ



ನೊಂದಿಗೆ, "ರಾಜಾ! ಈಗ ಬಂದಿರುವ ಸೈನಿಕರು ನಲುವತ್ತು ಮಂದಿಗಿಂತ ಹೆಚ್ಚಿಗಿಲ್ಲ. ಇಷ್ಟೇನಾ ನಿನ್ನ ಸೈನಿಕಬಲ? " ಎಂದು ಕೇಳಿದನು.

ದುರ್ಮುಖ ರಾಜನು ಅವಮಾನದಿಂದ ತಲೆ ತಗ್ಗಿಸಿ, "ಕಾಳೀವರ್ಮಾ, ನನ್ನ ಸೈನಿಕರೆಲ್ಲರನ್ನೂ ಘಾತುಕನಾದ ಆ ಸೂರ್ಯಭೂಪತಿ ಏನೋ ಆಶೆ ತೋರಿಸಿ ತನ್ನ ಕಡೆಗೆ ಮಾಡಿಕೊಂಡಹಾಗಿದೆ. ಮೊದಲು ನಾವು ಆ ದ್ರೋಹಿಯನ್ನು ಹುಡುಕಿ ಹಿಡಿಯಬೇಕು." ಎಂದನು.

ಕಾಳೀವರ್ಮನು ಕರಡಿಕೆಂಗಣ್ಣನನ್ನು ನೋಡಿ, "ಗುರುಗಳೇ, ಕೇಳಿದಿರಷ್ಟೆ? ಈಗ ನಿಮ್ಮ ಆಜ್ಞೆ ಏನು? " ಎಂದು ಕೇಳಿದನು.

ಕರಡಿಕೆಂಗಣ್ಣನು ಥಕ್ಕನೆ ಏನೂ ಹೇಳದೆ ಮಂಟಪದ ಮುಂದಿನ ಗೋಡೆಗೆ ಒರಗಿ ನಿಂತು ಸಮೀಪದಲ್ಲಿ ಕಾಣುವ ಕೋಟೆಯ ಗೋಡೆಗಳನ್ನೇ ನೋಡತೊಡಗಿದನು.

ಅವನಿಗೆ ತನ್ನ ಮಂತ್ರದಂಡವು ಕೈತಪ್ಪಿಹೋಯಿತೆಂದು ಚಿಂತೆ ಹಿಡಿದಿತ್ತು. ಅದನ್ನು ಹುಡುಕುತ್ತ ತಾನು ಆ ಪ್ರಾಂತವನ್ನು ಬಿಟ್ಟು ಹೋಗಿಬಿಟ್ಟರೆ ದುರ್ಮುಖರಾಜನು ಶತ್ರುಗಳ ಕೈಗೆ ಸಿಕ್ಕಿ ಸಾಯುವ ಹಾಗಾದೀತು. ಈಗಿನ ಪರಿಸ್ಥಿತಿಯಲ್ಲಿ ಕಾಳೀವರ್ಮ ಕೂಡಾ ತನ್ನ ಗುರುವಾದ ಭಲ್ಲೂಕಪಾದರಿರುವ ಪ್ರಾಂತಕ್ಕೆ ಬರಲು ನಿರಾಕರಿಸಬಹುದು...

ಹೀಗೆ ಆಲೋಚಿಸುತ್ತ ಕರಡಿ ಕೆಂಗಣ್ಣನು ಕಾಳೀವರ್ಮನನ್ನು ನೋಡಿ, "ಕಾಳೀವರ್ಮಾ! ನನ್ನ ಆಜ್ಞೆಯ ವಿಷಯ ಹಾಗಿರಲಿ. ನೀನು ಏನು ಮಾಡಬೇಕೆಂದಿರುವಿಯೋ ಅದನ್ನು ಮೊದಲು ಹೇಳು." ಎಂದು ಕೇಳಿದನು.

ಗುರುವಿನ ಅಭಿಪ್ರಾಯ ಕೇಳಿ ಕಾಳೀವರ್ಮನು ಆಶ್ಚರ್ಯಪಡುತ್ತ, "ಗುರುಗಳೇ ಇದೇನು ಕೇಳಿದಿರಲ್ಲ! ಒಂದುಸಾರಿ ನನ್ನನ್ನು ನಿಮ್ಮ ಗುರುಗಳಾದ ಭಲ್ಲೂಕಮಹಾಪಾದರಿರುವ ಪರ್ವತಕ್ಕೆ ಬರಬೇಕೆಂದಿದ್ದೀರಿ. ಆ ಮಾತನ್ನು ಮರೆತಿರಾ? " ಎಂದನು.

ಕರಡಿಕೆಂಗಣ್ಣನು ಆನಂದದಿಂದ ತಲೆಯೊಲಿಯುತ್ತ, "ಆಹಾ! ನೀನೇ ನಿಜವಾದ ಶಿಷ್ಯ. ನಿನ್ನ ಗುರುಭಕ್ತಿ ಮೆಚ್ಚತಕ್ಕದ್ದು. ಅಂತಲೇ ನನ್ನ ಮನೋಭಾವ ನಿನಗೂ ತಿಳಿಯುತ್ತದೆ. ನನ್ನ ಗುರುಗಳಾದ ಭಲ್ಲೂಕಪಾದರು ಒಬ್ಬ ದುಷ್ಟ ತಾಂತ್ರಿಕನಿಂದಾಗಿ ಪ್ರಸ್ತುತ ಕಷ್ಟದಲ್ಲಿದ್ದಾರೆ. ಅವರಿಗೆ ನಿನ್ನಂತಹ ಧೈರ್ಯ ಸಾಹಸವುಳ್ಳವನ ಸಹಾಯ ಸ್ವಲ್ಪ ಬೇಕಾಗುತ್ತದೆ. ಅದಕ್ಕೆ ಪ್ರತಿಫಲವಾಗಿ ನಿನಗೇನು ಬೇಕು ಕೇಳು. ಕೊಡಿಸುತ್ತೇನೆ." ಎಂದನು.

ಕಾಳೀವರ್ಮನು ಸ್ವಲ್ಪ ಯೋಚಿಸಿ, "ಗುರುಗಳೇ.. ಪ್ರತಿಫಲದ ವಿಷಯ ಆಮೇಲೆ ನೋಡೋಣ. ಆ ಜಿತಕೇತು ರಾಜನು ನನಗೆ ಶಿರಚ್ಛೇದ ಶಿಕ್ಷೆ ವಿಧಿಸಿದಾಗ ಅದನ್ನು ತಪ್ಪಿಸುವುದರಲ್ಲಿ ನೀವು ನನಗೆ ಬಹಳ ಸಹಾಯಮಾಡಿದಿರಿ. ಆಗಲೇ ನಿಮಗೆ ಎಲ್ಲಾ ವಿಧದಲ್ಲಿ

ಸಹಾಯಕನಾಗಿರುವೆನೆಂದು ಮಾತು ಕೊಟ್ಟೆನು. ನಾನು ನಿಮ್ಮ ಆಜ್ಞಾಧೀನನು ಈಗ ಏನುಮಾಡ ಬೇಕೆಂದು ಅಪ್ಪಣೆ ಕೊಡಿರಿ " ಎಂದನು.

"ಹಾಗಾದರೆ ನೀನು ನನ್ನ ಜತೆಯಲ್ಲಿ ಬ್ರಹ್ಮ ಪುತ್ರಾ ನದಿಯ ಜನ್ಮಸ್ಥಳ ಪ್ರಾಂತದಲ್ಲಿರುವ ಭಲ್ಲೂಕ ಪಾದ ಪರ್ವತದ ಕಡೆಗೆ ಬರಬೇಕು." ಎಂದನು ಕರಡಿ ಕೆಂಗಣ್ಣ.

"ನಡೆಯಿರಿ ಹಾಗಾದರೆ, ಹೋಗೋಣ. ಇಲ್ಲಿಯ ಗೊಡವೆಯಲ್ಲಿ ವೃಥಾ ಕಾಲಹರಣ ಮಾಡುವು ದೇಕೆ ಇನ್ನು?" ಎಂದು ಕಾಳೀವರ್ಮನು ಕದಲಿದನು.

ಇದನ್ನು ನೋಡಿ ದುರ್ಮುಖರಾಜನು ಸರ್ವಾಂಗ ಕಂಪಿಸುತ್ತ, "ಮಾಂತ್ರಿಕ ಮಹಾಪ್ರಭುವೇ! ನೀವು ಈ ದೀನರಾಜನ ವಿಷಯ ಅಂತರದಲ್ಲಿ ಬಿಟ್ಟು ಹೋಗುವಿರಲ್ಲಾ! ಈ ಸ್ವಲ್ಪಮಾತ್ರ ಸೈನಿಕರನ್ನಿಟ್ಟು ಕೊಂಡು ನಾನು ರಾಜನಾಗಿರುವುದು ಅಸಾಧ್ಯ. ಇದೇನೂ ಬೇಡ. ನಾನೂ ತಮ್ಮೊಂದಿಗೇ ಭಲ್ಲೂಕ ಪಾದ ಪರ್ವತಕ್ಕೆ ಬರುತ್ತೇನೆ. ರಾಜ್ಯವು ಹೇಗೆ ಬೇಕಾದರೂ ಹೋಗಲಿ." ಎಂದನು.

ಕರಡಿಕೆಂಗಣ್ಣ ಮಾಂತ್ರಿಕನು ರಾಜನಿಗೆ ಉತ್ತರ ಕೊಡುವುದರೊಳಗೆ, ಕಟುಕಕರಡಿಯವನು ಕೊಡಲಿ ಯನ್ನು ನೆಲಕ್ಕೆ ಕುಕ್ಕಿ ಅಳುಗೊರಲಿನಿಂದ ಕೈಜೋಡಿಸಿ, "ಅಯ್ಯಾ, ಮಾಂತ್ರಿಕ ಗುರುಗಳೇ! ನನ್ನ ಗತಿ ಏನು? ನೀವೆಲ್ಲಾ ಇಲ್ಲಿಂದ ಹೋದಮೇಲೆ ನನ್ನ ಹಳೆಯ ಯಜಮಾನ ಜಿತಕೇತುರಾಜ ನನ್ನನ್ನು ಸುಮ್ಮನೆ ಬಿಡುವನೇ? ತನ್ನ ಆಜ್ಞೆಯನ್ನು ಧಿಕ್ಕರಿಸಿ ಹೀಗೆಲ್ಲಾ ಮಾಡಿದುದಕ್ಕೆ ನನ್ನನ್ನು ಕಾಡು ಮೃಗದ ಹಾಗೆ ಬೇಟೆಯಾಡುತ್ತಾನಲ್ಲಾ! ನಾನೂ ಕರಡಿ ಮುಖದವ ನಾಗಿಯೇ ಉಳಿದಿದ್ದೇನೆ. ಈ ಸ್ಥಿತಿಯಲ್ಲಿ ಊರೊಳಗೆ ಹೇಗೆ ಹೋಗಲಿ? ನನ್ನನ್ನೂ ನಿಮ್ಮೊಂದಿಗೇ ಕರೆದು ಕೊಂಡು ಹೋಗಿರಯ್ಯಾ!" ಎಂದನು.



ಕರಡಿಕೆಂಗಣ್ಣನು ಮುಗುಳು ನಗುವಿನೊಂದಿಗೆ ತಲೆದೂಗುತ್ತ, ಕಟುಕಕರಡಿಯವನ ಬೆನ್ನನ್ನು ನೀವುತ್ತ, "ಹೆದರಬೇಡವೋ ನನ್ನ ಭಲ್ಲೂಕಾ! ನಾನು ನಿನ್ನನ್ನೂ ದುರ್ಮುಖ ರಾಜನನ್ನೂ ಮರೆತುಬಿಟ್ಟೆನೆಂದುಕೊಳ್ಳ ಬೇಡ. ನಿಮ್ಮಿಬ್ಬರ ಕ್ಷೇಮವನ್ನು ನಿರ್ಣಯಿಸಿದ ಮೇಲೆಯೇ ನಾನು ಈ ಪ್ರಾಂತದಿಂದ ಹೊರಟು ಹೋಗುವುದು. ಚಂದ್ರಶಿಲಾ ನಗರದ ರಾಜನಾದ ಆ ಜಿತಕೇತು ಕಾಳೀವರ್ಮನನ್ನು ಮಾತ್ರವಲ್ಲ, ನನ್ನನ್ನೂ ಅವಮಾನಿಸಿದ್ದಾನೆ. ನಾವು ಮೊದಲು ಆ ನಗರಕ್ಕೆ ಹೋಗಿ ಅವನ ಅಳವೆಷ್ಟೆಂದು ನೋಡ ಬೇಕಾಗಿದೆ" ಎಂದನು.

"ಆ ಸೊಕ್ಕು ಹಿಡಿದ ರಾಜನ ಮಂತ್ರಿಯೊಬ್ಬ ಜೀವಗುಪ್ತನೆಂಬವನು ಸ್ವಲ್ಪ ಸೈನಿಕರೊಂದಿಗೆ ಬಂದು ಈ ಕೋಟೆಯ ಹೊರಗೆ ಕಾವಲು ಕುಳಿತಿದ್ದಾನೆ. ಅವನು ಹಠಾತ್ತಾಗಿ ನಮ್ಮ ಮೇಲೆ ಬೀಳಲು ಹೊಂಚು ಹಾಕುವುದೆಂದು ಗೊತ್ತಾಗಿ, ಉಗ್ರದಂಡ



ರಾಕ್ಷಸನು ಅಡ್ಡ ನಿಂತಿದ್ದಾನೆ. ಇಲ್ಲಿ ಈ ಕೋಟೆಯೊಳಗೆ ಸಾಮಂತ ಸೂರ್ಯಭೂಪತಿಯೂ, ಮಾಯಾಮರ್ಕಟವೂ ಎಲ್ಲಿ ಯಾವ ಮೂಲೆಯಲ್ಲಿ ಅಡಗಿದ್ದಾರೋ ಗೊತ್ತಾಗುವುದಿಲ್ಲ. ಹೀಗಿದೆ ಪರಿಸ್ಥಿತಿ" ಎಂದನು ಕಾಳೀವರ್ಮ.

ಕಟುಕಕರಡಿಯುವನು ಉತ್ಸಾಹದಿಂದ ಚಪಗೊಡಲಿಯನ್ನು ಬೀಸಿ ಹೆಗಲಿಗೇರಿಸಿಕೊಂಡು, "ಕಾಳೀವರ್ಮ ದೊರೆಗಳೇ! ನಾನು ಆನೆಯ ಮೇಲೆ ಮುಂದಾಗಿ ಕೋಟೆಯ ಹೊರಗೆ ಹೋಗಿ ಅಲ್ಲಿಯ ಸ್ಥಿತಿ ಹೇಗಿದೆಯೆಂದು ನೋಡುತ್ತೇನೆ. ಉಗ್ರದಂಡ ರಾಕ್ಷಸನಿಗೆ ನಾನು ಸಹಾಯಕನಾಗಿ ಬಂದುದನ್ನು ನೋಡಿದ ಕೂಡಲೇ ಆ ಜೀವಗುಪ್ತ ಮಂತ್ರಿಯೂ ಅವನ ಸೈನಿಕರೂ ಹೆದರಿ ಓಡಿಹೋದರೂ ಹೋದಾರು. ಹಾಗೆ ಹೋದರೆ ಹೊರಗಿನ ಕಾಟ ತೀರುತ್ತದೆ. ಅಪ್ಪಣೆಯೆ?" ಎಂದನು. "ಸರಿ. ನೀನು ಹಾಗೇ ಮಾಡು. ನಾವು ಒಂದು ಸಾರಿ ಕೋಟೆಯೊಳಗಿನ ಸಂದುಗೊಂದುಗಳಲ್ಲೆಲ್ಲಾ ಆ ಸಾಮಂತನನ್ನೂ, ಮಾಯಾಮರ್ಕಟನನ್ನೂ ಗಾಳಿಸಿ ನೋಡಿ ಹೊರಗೆ ಬರುತ್ತೇವೆ." ಎಂದನು ಕಾಳೀವರ್ಮ.

ಕೂಡಲೇ ಕಟುಕಕರಡಿಯುವನು, "ಎಲೋ! ಆಟವಿಕ ಸೇವಕಾ! ಎಲ್ಲಿ ನನ್ನ ಆನೆ! ಅದನ್ನು ಮಂಟಪದ ಮುಂದೆ ತಾರೋ!" ಎಂದು ಕೂಗಿ ಹೇಳಿದನು.

ಆಟವಿಕನು ಆನೆಯನ್ನು ತಂದು ನಿಲ್ಲಿಸಿದ ಕೂಡಲೇ ಕಟುಕಕರಡಿಯುವನು ಅದರ ಮೇಲೆ ಏರಿ ಕುಳಿತನು. ಅದುವರೆಗೂ ಮೌನವಾಗಿದ್ದು ಎಲ್ಲವನ್ನೂ ಲಕ್ಷ್ಯಗೊಟ್ಟು ಕೇಳುತ್ತಿದ್ದ ದುರ್ಮುಖರಾಜನು, ಕರಡಿಕೆಂಗಣ್ಣನನ್ನು ನೋಡಿ, "ಅಯ್ಯಾ ಮಾಂತ್ರಿಕ ಪ್ರಭುವೇ! ನಾನು ಈ ಸ್ವಲ್ಪ ಮಾತ್ರ ಸೈನಿಕರೊಂದಿಗೆ ಈ ಕೋಟೆಯೊಳಗಿರುವುದು ಕ್ಷೇಮವಲ್ಲವೆಂದೇ ಕಾಣುತ್ತದೆ. ನಿಮ್ಮೊಂದಿಗೆ ನಾನೂ ಚಂದ್ರಶಿಲಾ ನಗರಕ್ಕೇ ಬರುತ್ತೇನೆ. ಜೀವ ಉಳಿದರೆ ಎಂದಾದರೂ ರಾಜ್ಯ ಬಂದೀತು!" ಎಂದನು.

"ನಾನು ಕೂಡಾ ಅದನ್ನೇ ಹೇಳಬೇಕೆಂದಿದ್ದೆ. ನಿನ್ನ ಕೇವಲ ನಾಲ್ವತ್ತುಮಂದಿ ಸೈನಿಕರೊಂದಿಗೆ ನೀನು ಹೊಸದಾಗಿ ಒಂದು ರಾಜ್ಯವನ್ನೇ ಜಯಿಸಲಿರುವಿ. ಹಾಗಾದರೆ ನಿನಗೆ ಸಂತೋಷ ತಾನೇ?" ಎಂದನು ಕರಡಿಕೆಂಗಣ್ಣ.

ದುರ್ಮುಖರಾಜನಿಗೆ ಸಂತೃಪ್ತಿಯಿಂದ ಉಸಿರೇ ಸಿಕ್ಕಿಕೊಂಡ ಹಾಗಾಗಿ ಕಣ್ಣನ್ನಗಲಿಸಿ ನೋಡುತ್ತಾ ಸುಮ್ಮನಿದ್ದ. ಆ ಮೇಲೆ ಎಲ್ಲರೂ ಸಭಾಮಂಟಪದಿಂದ ಕೆಳಗಿಳಿದು ಬಂದು, ಸಾಮಂತನನ್ನೂ, ಮರ್ಕಟದವನನ್ನೂ ಹುಡುಕಲು ಆಜ್ಞೆಗಳನ್ನು ಹೊರಡಿಸತೊಡಗಿದರು.

ಆಗ ಕೋಟೆಯ ಗೋಡೆಯ ಮೇಲೆ ಹತ್ತಿ ಬಂದ ದುರ್ಮುಖರಾಜನ ಅಂಗರಕ್ಷಕರಿಬ್ಬರು ಏಕಕಂಠದಿಂದ "ಮಹಾರಾಜರೇ! ದ್ರೋಹಿಯಾದ ಸಾಮಂತ

ಸೂರ್ಯಭೂಪತಿಯೂ, ಮಾಯದ ಕೋತಿಯೂ ಜಿತಕೇತು ರಾಜನ ಮಂತ್ರಿಯು ಬದಿಯಲ್ಲಿ ಸೇರಿಕೊಂಡಿದ್ದಾರೆ. ಅವರು ನಮ್ಮ ರಾಕ್ಷಸನೊಂದಿಗೆ ಏನೋ ಮಾತಾಡಿಕೊಳ್ಳುತ್ತಿದ್ದಾರೆ." ಎಂದು ಕೂಗಿ ಹೇಳಿದರು.

"ಹಾಗೇನು ? ನನಗೂ ಹಾಗೆ ಅನುಮಾನ ಬಾರದೆ ಹೋಗಲಿಲ್ಲ. ಹಾಗಾದರೆ ನಮಗೆ ಒಳಗೆ ವೃಥಾ ಹುಡುಕುವ ಶ್ರಮ ತಪ್ಪಿತು. ಸುಟ್ಟು ಹೋದ ಕೋಟೆಯ ದ್ವಾರದ ಹತ್ತಿರ ಬಲವಾದ ಕಾವಲಿಡಬೇಕು. ಬಹುಶಃ ಆ ದುಷ್ಟರೆಲ್ಲ ಸೇರಿ ಉಗ್ರದಂಡ ರಾಕ್ಷಸನನ್ನು ಸಹಾ ಒಳಪಡಿಸಿಕೊಳ್ಳುವ ತಂತ್ರ ಮಾಡುತ್ತಿರಬೇಕು. ಆದರೆ ರಾಕ್ಷಸನು ಸೀದಾ ಗುಣದವನಾಗಿ ಕಾಣುತ್ತಾನೆ. ಹಾಗೆಲ್ಲಾ ನಮ್ಮ ಶತ್ರುಗಳೊಂದಿಗೆ ಸೇರಿ ಮಿತ್ರ ದ್ರೋಹಿಯಾಗಲಾರ." ಎಂದನು ಕಾಳೀವರ್ಮ.

"ನಿಜ. ಅವರ ಪ್ರಯತ್ನಗಳು ಫಲಿಸುವಂಥವಲ್ಲ. ಆ ರಾಕ್ಷಸನು ನನ್ನಿಂದ ಏನೋ ಸಹಾಯದ ಅಪೇಕ್ಷೆಯಲ್ಲಿದ್ದಾನೆ. ನೋಡೋಣ, ನಾವೀಗ ಅತ್ತಲೇ ಹೊರಡುವಾ" ಎಂದನು ಕರಡಿಕೆಂಗಣ್ಣ. ಕಾಳೀವರ್ಮನು ಊಹಿಸಿದಂತೆ ಜಿತಕೇತುರಾಜನ ಮಂತ್ರಿ ಜೀವಗುಪ್ತನು ಉಗ್ರದಂಡ ರಾಕ್ಷಸನಿಗೆ ದೊಡ್ಡ ದೊಡ್ಡ ಆಶೆಗಳನ್ನು ತೋರಿಸಿ ತನ್ನ ಪಕ್ಷಕ್ಕೆ ಸೇರಿಸಿಕೊಳ್ಳುವ ಪ್ರಯತ್ನಮಾಡುತ್ತಿದ್ದನು. ಅದಕ್ಕೆ ಮಾಯಾಮರ್ಕಟ ರೂಪದಲ್ಲಿರುವ ಭ್ರಾಂತಿಮತಿಯೂ ಧೂಪ ಹಾಕುತ್ತಿದ್ದನು.

ರಾಕ್ಷಸನು ಕಡೆಗೆ ತನ್ನ ಕಲ್ಲಿನ ಗದೆಯನ್ನು ಮೇಲೆತ್ತಿ ಹಿಡಿದು, "ನನಗೆ ನಿಮ್ಮ ಯಾರಿಂದಲೂ ಯಾವ ಬಗೆಯ ಸಹಾಯದ ಅಗತ್ಯವೂ ಇಲ್ಲ. ನನಗೆ ಬೇಕಾದ್ದು ನನ್ನ ಬಂಧುವಿನ ಬಂಧ ವಿಮೋಚನೆ. ಅವನು ಭಲ್ಲೂಕಪಾದ ಪರ್ವತದಲ್ಲಿ ಸಿಕ್ಕಿಕೊಂಡಿದ್ದಾನೆ. ಅದಕ್ಕೆ ನಿಮ್ಮಿಂದೇನೂ ಸಹಾಯವಾಗದು." ಎಂದು ದೊಡ್ಡದೊಂದು ಉಸಿರುಬಿಟ್ಟನು.



ಆ ಮಾತು ಕೇಳಿ ಮಾಯಾಮರ್ಕಟನು ವ್ಯಂಗ್ಯಭಾವದಿಂದ ಕಿಚಕಿಚನೆ ಕಿರಿಚಿ, "ಉಗ್ರದಂಡಾ ! ಆ ಬಂಧು ನಿನ್ನ ಅಣ್ಣತಾನೇ? ಇನ್ನು ಅವನಿಗೆ ಬಂಧವೆಲ್ಲಿ, ಮುಕ್ತಿ ಎಲ್ಲಿ? ನನ್ನ ಗುರುಗಳಾದ ತಾಂತ್ರಿಕ ಮಿಥ್ಯಾಮಿಶ್ರರು ಅವನನ್ನು ಎಂದೋ ಭೂಸ್ಥಾಪನೆ ಮಾಡಿದ್ದಾರೆ. ನೀನು ಆ ಗೊಡವೆ ಬಿಟ್ಟು ಇಲ್ಲಿಯೇ ಜಿತಕೇತು ಮಹಾರಾಜರ ಆಶ್ರಯದಲ್ಲಿ ನಿಮ್ಮ ಹಳೆಯಕಾಲದ ವೈಭವ ಅನುಭವಿಸುತ್ತ ಸುಖವಾಗಿರುವುದು ಒಳ್ಳೆಯದು. ಯೋಚನೆ ಮಾಡು." ಎಂದನು. "ಏನಂದೆ ? ನನ್ನ ಅಣ್ಣನನ್ನು ಆ ಘೋರ ತಾಂತ್ರಿಕನು ನಿಜಕ್ಕೂ ಕೊಂದನೆ ? ಅಥವಾ ನೀನು ಸುಳ್ಳು ಹೇಳಿ ನನ್ನ ಮನಸ್ಸಿನೊಂದಿಗೆ ಆಟ ಆಡುವಿಯಾ? ಬೊಗಳು ಸತ್ಯ ಸಂಗತಿಯನ್ನು !" ಎಂದು ಉಗ್ರದಂಡನು ಹಲ್ಲು ಕಡಿದನು.

ಮಾಯಾಮರ್ಕಟನು ಏನೋ ಹೇಳಲು ಬಾಯಿ ತೆರೆದಾಗ ಜೀವಗುಪ್ತ ಮಂತ್ರಿ ಅವನನ್ನು ಸುಮ್ಮನಿರಿಸಿ.

"ಉಗ್ರದಂಡಾ! ಆಗಿ ಹೋದುದನ್ನೆಲ್ಲ ಮರೆತು ಬಿಡು. ನಮ್ಮ ರಾಜ್ಯದಲ್ಲಿ ಮಹಾ ಬಲಶಾಲಿಯಾದ ರಾಕ್ಷಸನೊಬ್ಬನು ಇರುವುದೆಂದರೆ ನಮಗೆ ಹೆಮ್ಮೆಯ ವಿಷಯ. ನೀನು ಕೂಡಾ ನಮ್ಮ ರಾಜರ ಆಶ್ರಯದಲ್ಲಿ ಬೇಕಾದ ಹಾಗೆ ತಿಂದುಂಡುಕೊಂಡು ನೆಮ್ಮದಿಯಾಗಿರಬಹುದು. ಕಾಡಿನೊಳಗಿನ ಗುಹಾವಾಸದಲ್ಲಿ ನಿದ್ರಾಹಾರಗಳಿಗೆ ಪೇಚಾಡುತ್ತ ಏನು ಸುಖವಿದೆ ಹೇಳು? ಮಹಾರಾಜರು ನಿನಗೊಂದು ಅರಮನೆಯನ್ನೇ ಕೊಟ್ಟುಬಿಡುತ್ತಾರೆ." ಎಂದನು.

"ಅಂದರೆ, ನನ್ನಿಂದ ಯಾವ ಸಹಾಯವನ್ನೂ ಹೊಂದದೆಯೇ ನಿಮ್ಮ ರಾಜನು ನನಗೆ ಸುಮ್ಮನೆ ಆತಿಥ್ಯ ಕೊಡುತ್ತಾನೆಂದಾಯಿತು. ಹೌದೇನು?" ಎಂದ ಉಗ್ರದಂಡ.

"ನಿನ್ನ ಸಹಾಯ ಇಲ್ಲವೆಂದರೇನರ್ಥ? ನಿನ್ನಿಂದ ಒಂದೇ ಒಂದು ಸಹಾಯ, ಅದುವೇ ಬ್ರಹ್ಮಾಂಡದಷ್ಟಾಯಿತು. ನಾವೀಗ ಈ ಕೋಟೆಗೆ ಪ್ರವೇಶಿಸುತ್ತೇವೆ. ಅಲ್ಲಿರುವ ಕರಡಿಕೆಂಗಣ್ಣನೆಂಬ ಮಾಂತ್ರಿಕನನ್ನೂ, ಕಾಳೀವರ್ಮನೆಂಬ ಅಪರಾಧಿಯನ್ನೂ, ದುರ್ಮುಖಿರಾಜನನ್ನೂ ಸೀಳಿ ಚೆಂಡಾಡಲಿಕ್ಕೆ ನೀನು ಸಹಾಯಮಾಡಿದರೆ ಸಾಕು. ಅದೇನೂ ಸಾಮಾನ್ಯ ಸಹಾಯವಲ್ಲವಷ್ಟೆ? ಆ ಜನ್ಮ ನಾವು ನಿನಗೆ ಋಣಿಗಳು!" ಎಂದ ಜೀವಗುಪ್ತಮಂತ್ರಿ.

"ಓಹೋ!" ಎಂದು ರಾಕ್ಷಸನು ಕೋಟೆಯ ಕಡೆಗೆ ತಿರುಗಿದನು. ಆಗ ಕೋಟೆಯೊಳಗಿನಿಂದ ಕೋಣನ ಮೇಲೆ ಕರಡಿಕೆಂಗಣ್ಣ, ಮೊದಲಾದವರು ಹೊರಗೆ ಬರುವುದು ಕಂಡಿತು. ಆ ದೃಶ್ಯವನ್ನು ನೋಡಿ ಜೀವಗುಪ್ತಮಂತ್ರಿ ಹೆದರಿ, ಏನುಮಾಡುವುದೆಂದು ಆಲೋಚಿಸುತ್ತ, ತನ್ನ ಪಕ್ಕದಲ್ಲೇ ಕುದುರೆಯ ಮೇಲಿದ್ದ ಮಾಯಾಮರ್ಕಟನನ್ನೂ, ಸಾಮಂತ ಸೂರ್ಯಭೂಪತಿಯನ್ನೂ ನೋಡಿದನು.

ಆಗ ಸೂರ್ಯಭೂಪತಿ ರಾಕ್ಷಸನನ್ನು ನೋಡಿ, "ಈಗಲೇ ನಿನ್ನ ಬಲವನ್ನು ಪ್ರದರ್ಶಿಸು." ಎಂದನು.

"ಹೌದು! ಆಗೋ ನೋಡು! ಅಲ್ಲಿ ಬರುವವರನ್ನು ನಿನ್ನ ಕಲ್ಲಿನ ಗದೆಯಿಂದ ನೆಲಕ್ಕೊರೆಸಿಬಿಡು!" ಎಂದನು ಮಾಯಾಮರ್ಕಟ.

ಉಗ್ರದಂಡ ರಾಕ್ಷಸನು ಒಂದುಸಾರಿ ಹೂಂಕರಿಸಿ, "ಮಂತ್ರೀ! ನಿನಗೂ ನಿನ್ನೊಂದಿಗಿರುವ ದುಷ್ಟ ಗಣಗಳಿಗೂ ನಾನು ಮಾಡುವ ಸಹಾಯ ಏನೆಂದು ಗೊತ್ತಾಯಿತೇ? ಇಕೋ ನೋಡು ಇದೇ!" ಎಂದು ಕಲ್ಲಿನ ಗದೆಯನ್ನೆತ್ತಿ ಕುದುರೆಯ ಮೇಲಿದ್ದ ಮಾಯಾಮರ್ಕಟನ ತಲೆಗೆ ಬೀಸಿದನು. ಅಷ್ಟರೊಳಗೆ ಮಾಯಾಮರ್ಕಟನು ಕೀಚ್ಚೆಂದು ಕಿರಿಚಿ ಮಿಂಚಿನ ವೇಗದಲ್ಲಿ ಕೆಳಗೆ ಹಾರಿದುದರಿಂದ, ಗದೆಯ ಪೆಟ್ಟು ಅವನ ಕುದುರೆಯ ತಲೆಗೆ ಠಪಾಲ್ಲನೆ ತಾಕಿತು. —(ಇನ್ನೂ ಇದೆ)





# ಕರಡಿಕೆಂಗಣ್ಣ

## ೧೬

[ಕರಡಿಕೆಂಗಣ್ಣನು ದುರ್ಮುಖಿರಾಜನನ್ನು ಕ್ಷಮಿಸಿ ಮಾಯಾಮರ್ಕಟನನ್ನು ಹುಡುಕಲು ತೊಡಗಿದನು. ಆ ಮರ್ಕಟನು ಜೀವಗುಪ್ತನ ಹತ್ತಿರ ಮಾತಾಡುವನೆಂದು ಅಂಗರಕ್ಷಕರಿಂದ ತಿಳಿಯಿತು. ಕಾಳೀವರ್ಮನೂ ಕರಡಿ ಕೆಂಗಣ್ಣನೂ ಅತ್ತ ಕಡೆಗೆ ಹೊರಟರು. ಇಷ್ಟರಲ್ಲಿ ಉಗ್ರದಂಡ ರಾಕ್ಷಸನು ಮಾಯಾಮರ್ಕಟನನ್ನು ಗದೆಯಿಂದ ಹೊಡೆಯಲು, ಆ ಏಟು ಮಾಯಾಮರ್ಕಟನ ಕುದುರೆಗೆ ತಾಗಿತು.]

ರಾಕ್ಷಸನು ತನ್ನ ಮೇಲೆ ಗದೆಯನ್ನೆತ್ತುತ್ತಲೇ ಮರ್ಕಟನು ಮಿಂಚಿನ ವೇಗದಲ್ಲಿ ಕುದುರೆಯ ಮೇಲಿಂದ ಮೇಲಕ್ಕೆ ಹಾರಿದನು. ತಲೆಗೆ ಗದಾ ಘಾತ ಪಡೆದ ಕುದುರೆ ಕೆಟ್ಟ ದನಿಯಿಂದ ಹೀಹೀ ಗರೆಯುತ್ತ, ಹುಚ್ಚು ಹಿಡಿದಂತೆ ಓಡಿ ಮತ್ತೊಂದು ಕುದುರೆಗೆ ಢೀ ಕೊಟ್ಟಿತು.

ಆ ಹೊಡೆತಕ್ಕೆ ಆ ಕುದುರೆಯ ಮೇಲಿದ್ದವನು ನೆಲಕ್ಕೆ ಬಿದ್ದನು. ಮೊದಲು ಆಕಾಶಕ್ಕೆ ಹಾರಿ ನೆಲಕ್ಕೆ ಧುಮುಕಿದ ಮಾಯಾ ಮರ್ಕಟನು ಸೈನಿಕನನ್ನು ನೆಲಕ್ಕೆ ಬೀಳಿಸಿ ಖಾಲಿಯಾದ ಆ ಕುದುರೆಯ ಮೇಲೇರಿ, ಅದರ ಕಡಿವಾಣವನ್ನು ಎಳೆಯುತ್ತ ವಾಯುವೇಗದಿಂದ ಓಡಿಸಿಕೊಂಡು ನಗರದ ಕಡೆಗೆ ಓಡ ತೊಡಗಿದನು.

ಉಗ್ರದಂಡ ರಾಕ್ಷಸನು ಮಾಯಾಮರ್ಕಟನನ್ನು ಹೊಡೆಯಲು ಮತ್ತೊಮ್ಮೆ ಗದೆಯನ್ನು ಎತ್ತಿ ದಾಗ, ಮಾಯಾಮರ್ಕಟನು ಓಡಿಹೋಗಿ ಮಂತ್ರಿ ಜೀವಗುಪ್ತನ ಹತ್ತಿರ ತಟ್ಟನೆ ಕುದುರೆಯನ್ನು ನಿಲ್ಲಿಸಿ, "ನೀವೆಂಥ ಮಹಾ ಮಂತ್ರಿಗಳೋ, ಬರೀಕಂತೆ ಬೊಂತೇ ಮಂತ್ರಿಗಳೋ ಏನೋ! ನಿಮ್ಮ ಉಪಾಯ ಒಂದು ಕೂದಲಿನಷ್ಟು ಸಹಾ ನಡೆಯಲಿಲ್ಲ



ನೋಡಿದಿರಾ? ಈಗ ನಾನು ಮುಂದಾಗಿ ಚಂದ್ರಶಿಲಾ ನಗರಕ್ಕೆ ಹೋಗಿ ಜಿತಕೇತು ಮಹಾರಾಜನೊಂದಿಗೆ ಇಲ್ಲಿ ನಡೆದ ಸಮಾಚಾರವನ್ನೆಲ್ಲಾ ಹೇಳಿ, ಈ ನಗರದ ರಕ್ಷಣೆಗೆ ತಕ್ಕ ಏರ್ಪಾಡು ಮಾಡಿಸಿಕೊಂಡು ಬರುತ್ತೇನೆ." ಎಂದನು.

ಆದರೆ ಮಂತ್ರಿ ಜೀವಗುಪ್ತನು ಅವನ ಮಾತನ್ನು ಅರ್ಥಮಾಡಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಕೋಟೆಯೊಳಗಿನಿಂದ. ತನ್ನ ಕಡೆಗೇ ಬರುತ್ತಿರುವ ಕರಡಿಕೆಂಗಣ್ಣ ಮಾಂತ್ರಿಕನನ್ನೂ, ಕಾಳೀವರ್ಮನನ್ನೂ ನೋಡಿ ಥರಥರನೆ ನಡುಗುತ್ತಿದ್ದನು. ಆ ಸ್ಥಿತಿಯಲ್ಲಿ ಅವನು ಮಾಯಾಮರ್ಕಟನನ್ನು ನೋಡಿ, "ಮಾಯಾವಿದ್ಯೆ ಕಲಿತ ನಿನಗೇನೂ ಭಯವಿಲ್ಲವೆಂದು ಕಾಣುತ್ತದೆ. ಸ್ವಲ್ಪ ನಿಲ್ಲಪ್ಪಾ ಮಾಯಾಮರ್ಕಟಾ! ನಿನ್ನ ಪಾಡಿಗೆ ಓಡಿಹೋಗಿ ಬಿಡಬೇಡ. ಅಗೋ ಅಲ್ಲಿ ಬರುತ್ತಿರುವ ದೊಡ್ಡ ಮಂತ್ರವಾದಿಯಿಂದ, ಅಮಾನುಷ ಶಕ್ತಿಯುಳ್ಳ ಆ ರಾಕ್ಷಸನಿಂದ ನಗರವನ್ನು ಕಾಪಾಡಲು ಯಾರಿಂದ ಸಾಧ್ಯವಾದೀತು ? ಪ್ರಸ್ತುತ ಅರಣ್ಯದೊಳಗೆ ಓಡಿಹೋಗುವುದೇ ಒಳ್ಳೇದು. ನನ್ನ ಮಾತು ಕೇಳು. ನೀನೂ ನನ್ನೊಂದಿಗೆ ಬಾ." ಎಂದನು.

"ಎಂತಹ ನಾಚಿಕೆಗೇಡಿನ ಮಾತು ಹೇಳುವೆ ಅಯ್ಯಾ ಮಹಾಮಂತ್ರೀ! ಅದು ಭೀರುಗಳು ಮಾಡುವ ಕೆಲಸ. ನಾನೀಗ ಮೊದಲು ನಿಮ್ಮ ಜಿತಕೇತು ಮಹಾರಾಜನನ್ನು ನೋಡಬೇಕು. ಅನಂತರ ಈ ಕರಡಿಕೆಂಗಣ್ಣ ಮಾಂತ್ರಿಕನನ್ನೂ, ಕಾಳೀವರ್ಮನನ್ನೂ ನಾಶಮಾಡುವ ಉಪಾಯ ಆಲೋಚಿಸುತ್ತೇನೆ." ಎಂದು ಹೇಳಿ ಮಾಯಾಮರ್ಕಟನು ಮಂತ್ರಿಯು ಪ್ರತ್ಯುತ್ತರಕ್ಕೂ ಕಾಯದೆ. ತನ್ನ ಕುದುರೆಯನ್ನು ನಗರದ ಕಡೆಗೆ ವೇಗವಾಗಿ ಓಡಿಸಿದನು.

ಉಗ್ರದಂಡ ರಾಕ್ಷಸನು ಏನೋ ನಿರಾಶೆಯ ಸಂತಾಪದಿಂದ, ಗಟ್ಟಿಯಾಗಿ ಹಲ್ಲು ಕಡಿದು, "ಎಲೋ, ಮಂತ್ರಿಯೇ! ನಿನ್ನಂಥ ಮಂತ್ರಿಯ ಮೇಲೆ ನನಗೇನೂ ಕೋಪವಿಲ್ಲ. ಈ ಸಾಮಂತ ಸೂರ್ಯಭೂಪತಿಯ ಮೇಲೆ ಕೂಡಾ ನನಗೇನೂ ಕೋಪವಿಲ್ಲ. ನೀನೂ ರಾಜನೂ ಕೂಡಿ ಕಾಳೀವರ್ಮನನ್ನು ಗಲ್ಲಿಗೇರಿಸುವ ಯೋಜನೆ ಹಾಕಿ ಇಷ್ಟೆಲ್ಲಾ ರಗಳೆಗಳಿಗೆ ಕಾರಣರಾದಿರಿ. ಅಂತಹ ನಿನ್ನನ್ನು ತಕ್ಕ ರೀತಿಯಲ್ಲಿ ಶಿಕ್ಷಿಸಬೇಕಾಗಿದೆ. ಮೊದಲು ನೀನು ಕುದುರೆಯಿಂದ ಇಳಿ!" ಎಂದನು.

ಉಗ್ರದಂಡ ರಾಕ್ಷಸನು ಮಾತು ಮುಗಿಸುವುದರೊಳಗೇ, ಮಂತ್ರಿ ಜೀವಗುಪ್ತನು ವಿಪರೀತವಾಗಿ ಹೆದರಿ ಕುದುರೆಯನ್ನು ತಟ್ಟಿ ಕೆರಳಿಸಿ, "ಈಗ ನೀನೇ ಗತಿ ನನ್ನ ಪ್ರೀತಿಯ ಕುದುರೆ ರಾಜಾ! ತಪ್ಪಿಸಿಕೊಂಡು ಬೇಗನೇ ಓಡು! ಈ ರಾಕ್ಷಸನು ನಮ್ಮಿಬ್ಬರನ್ನೂ ತಿಂದುಬಿಡುತ್ತಾನೆ. ಜೀವದ ಮೇಲೆ ಆಶೆಯಿರುವವರೆಲ್ಲರೂ ನನ್ನ ಹಿಂದೆ ಓಡಿಬನ್ನಿರಿ." ಎಂದು ಕೂಗಿ ಹೇಳಿ ನಗರದ ಕಡೆಗೆ ಹೊರಟನು. ಅವನ ಹಿಂದೆಯೇ ಸಾಮಂತ ಸೂರ್ಯಭೂಪತಿಯೂ,

ಸೈನಿಕರೂ ಸಹ ಮಂತ್ರಿಯನ್ನು ಅನುಸರಿಸಿ ಓಡಿ ಹೋಗ ತೊಡಗಿದರು.

ಆಗ ಉಗ್ರದಂಡ ರಾಕ್ಷಸನು ತನ್ನ ಕೈಗೆ ಸಿಕ್ಕಿದ ಒಂದು ಕುದುರೆಯ ಹಿಂದಿನ ಕಾಲುಗಳನ್ನು ಹಿಡಿದು ಎಳೆದನು. ಆ ಕುದುರೆಯ ಮೇಲಿದ್ದ ಸೈನಿಕನು ಧಡಾಲ್ಲನೆ ಬಿದ್ದನು. ಉಗ್ರದಂಡ ರಾಕ್ಷಸನು ಆ ಸೈನಿಕನ ಕುತ್ತಿಗೆಯ ಹಿಮ್ಮಡನ್ನು ಹಿಡಿದು ಮೇಲೆತ್ತಿ, "ಎಲೋ! ನರ ವೀರನೇ! ನಿನ್ನನ್ನು ಕೊಲ್ಲಲಾರೆ. ನಿನ್ನ ಕೈಕಾಲು ಮುರಿದು ಹೋದ ಹಾಗೆ ಯಾವ ಗುರುತುಗಳೂ ಇಲ್ಲ. ಇಲ್ಲಿರಬೇಡ. ಕಾಡಿನೊಳಗೆ ಓಡಿ ಹೋಗಿಬಿಡು. ನಗರಕ್ಕಿಂತಲೂ ನಿನಗೆ ಅರಣ್ಯವೇ ಕ್ಷೇಮ." ಎಂದು ಹೇಳಿ ಅವನನ್ನು ಕೆಳಗೆ ಜಾರಿಸಿಬಿಟ್ಟನು.

ಅಷ್ಟರಲ್ಲಿ ಅಲ್ಲಿಗೆ ಮಾಂತ್ರಿಕ ಕರಡಿಕೆಂಗಣ್ಣನೂ ಕಾಳೀವರ್ಮನೂ ಬಂದರು. ಶಮ್ಮ ನಗರದ ಕಡೆಗೆ ಹಿಂದಿರುಗಿ ಓಡಿಹೋಗುತ್ತಿರುವ ಜಿತಕೇತು ಸೈನಿಕರ ಕಡೆಗೆ ನೋಡುತ್ತ ಕಾಳೀವರ್ಮನು, "ಉಗ್ರದಂಡ ರಾಕ್ಷಸಾ! ಎಂಥಾ ಹೀನ ಕೆಲಸವಿದು ? ನಮ್ಮ ಶತ್ರುವಾದ ಆ ಮಂತ್ರಿಯನ್ನೂ, ಅವನ ಸೈನಿಕರನ್ನೂ ಹಾಗೆ ಓಡಲು ಬಿಟ್ಟು, ಈ ಒಬ್ಬ ಹೇಡಿ ಸೈನಿಕನನ್ನು ಹಿಡಿದೆಯಲ್ಲಾ ? ಏಕೆ ? ಇದು ನಿನ್ನಂಥವನಿಗೆ ಶೋಭಿಸುವುದೆ ? ನೀನು ಆ ಮಂತ್ರಿ ಜೀವಗುಪ್ತನನ್ನು ಹಿಡಿಯಬೇಕಿತ್ತು" ಎಂದನು.

ಕರಡಿಕೆಂಗಣ್ಣ ಮಾಂತ್ರಿಕನು ತುಂಬ ನಿರುತ್ಸಾಹದ ಮೋರೆ ಮಾಡಿಕೊಂಡು, "ಆ ಬುದ್ಧಿಗೇಡಿಮಂತ್ರಿಯ ದೇನಿದೆ ಬಿಡಪ್ಪಾ. ನನ್ನ ಮಂತ್ರದಂಡವನ್ನು ಕದ್ದುಕೊಂಡ ಆ ಮಾಯಾಮರ್ಕಟನನ್ನು ಹಿಡಿದು ಬಂಧಿಸಿದ್ದರೆ ನನಗೆ ತುಂಬಾ ಸಂತೋಷವಾಗುತ್ತಿತ್ತು. ಅವನು ಈ ರಾಕ್ಷಸನನ್ನು ತಪ್ಪಿಸಿಕೊಂಡು ಎಷ್ಟು ವೇಗವಾಗಿ ಓಡಿ ಕಣ್ಮರೆಯಾಗಿಬಿಟ್ಟನಲ್ಲ" ಎಂದನು.

ಆಗ ಉಗ್ರದಂಡ ರಾಕ್ಷಸನು ಕಾಲು ಮುರಿದವನ ಹಾಗೆ ಚಕ್ಕನೆ ಕುಳಿತು, ತನ್ನ ಕೈಯಲ್ಲಿದ್ದ ಕಲ್ಲಿನ ಗದೆಯನ್ನು ಅಷ್ಟು ದೂರಕ್ಕೆ ಬಿಸುಟು, "ಕರಡಿಕೆಂಗಣ್ಣ ಮಾಂತ್ರಿಕೇಶ್ವರಾ! ಆ ಮಾಯಾಮರ್ಕಟನ ಬಾಯಿಯಿಂದ ಬಹಳ ಕೆಟ್ಟ ವಾರ್ತೆ ಕೇಳಿದೆನಯ್ಯಾ! ತಾಂತ್ರಿಕ ಮಿಥ್ಯಾ ಮಿಶ್ರನು ನನ್ನ ಅಣ್ಣನನ್ನು ಕೊಂದು ಮಣ್ಣಿನೊಳಗೆ ಹುಗಿದಿದ್ದಾನಂತೆ! ಅದು ನಿಜವಾದರೆ ನನಗೇನೂ ಇಲ್ಲ! ಸರ್ವಶೂನ್ಯ! ಆ ಮರ್ಕಟ ಮೂತಿ ಹೇಳುವ ಈ ಮಾತನ್ನು ನಂಬಬಹುದೋ? ನಿನಗೇನು ತೋರುತ್ತೆ ?" ಎಂದು ಭಾರವಾದ ಸ್ವರದಿಂದ ಕೇಳಿದನು.



"ಆ ನಿನ್ನ ಅಣ್ಣನ ಹೆಸರೇನು ?" ಎಂದು ಕರಡಿಕೆಂಗಣ್ಣನು ಕೇಳಿದನು. "ನನ್ನ ಅಣ್ಣನ ಹೆಸರು ಕಾಲದಂಡನೆಂದು. ಆತನ ವಾಸಸ್ಥಾನ ಕೂಡಾ ಭಲ್ಲೂಕಪಾದ ಪರ್ವತ ಪ್ರಾಂತದಲ್ಲೇ ಇರುತ್ತದೆ. ನಿಮಗೆ ಗೊತ್ತೇ? ನೋಡಿದ್ದೀರಾ ನನ್ನ ಅಣ್ಣನನ್ನು ?" ಎಂದು ಆತುರದಿಂದ ಕೇಳಿದನು ಉಗ್ರದಂಡ. ಕರಡಿಕೆಂಗಣ್ಣನು ಸ್ವಲ್ಪ ಹೊತ್ತು ಆಲೋಚನೆ

ಮಾಡಿ, ತಲೆಯಾಡಿಸುತ್ತ, "ಉಗ್ರದಂಡಾ! ಆ ತಾಂತ್ರಿಕ ದುಷ್ಟನು ನನ್ನ ಗುರುವನ್ನು ಹತಮಾಡಲು ಎಂತೆಂಥವರನ್ನೆಲ್ಲಾ ತನ್ನ ಜತೆ ಸೇರಿಸಿಕೊಳ್ಳುತ್ತಿದ್ದ. ಕೆಲವರನ್ನು ತನ್ನ ತಾಂತ್ರಿಕ ಶಕ್ತಿಗಳಿಂದ ಬಂಧಿಸಿ ಊಳಿಗಮಾಡಿಸಿಕೊಳ್ಳುವುದೂ ಇದೆ. ನೀನು ಹೇಳುವ ಕಾಲದಂಡನೆಂಬ ಹೆಸರಿನ ರಾಕ್ಷಸನನ್ನು ನಾನು ಕೇಳಿಲ್ಲ. ಒಂದು ಸಂಗತಿ ಮಾತ್ರ ಮರೆಯಬೇಡ. ಸುಳ್ಳಿನ ಮೂರ್ತಿಯಾದ ಈ ಮಾಯಾಮರ್ಕಟನ ಮಾತು ಮಾತ್ರ ನಂಬಲೇ ಬೇಡ." ಎಂದನು.

ಅದನ್ನು ಕೇಳಿ ಉಗ್ರದಂಡ ರಾಕ್ಷಸನಿಗೆ ಹೊಸ ಹುರುಪು ಬಂದು, ಏನೋ ಬಾಚಿಕೊಳ್ಳುವವನಂತೆ ತಲೆ ಕೊಡರಿ ಕೈಗಳನ್ನಾಡಿಸಿ ಎದ್ದು ನಿಂತು, "ಹೌದು. ನಿಮ್ಮ ಬಾಯಿಗೆ ಅಮೃತ ಬೀಳಲಿ. ನನ್ನ ಅಣ್ಣ ಬದುಕಿಯೇ ಇದ್ದಾನೆಂದು ನನಗೊಂದು ನಂಬುಗೆ ಯಿದೆ. ಅದನ್ನು ನೀವು ಬಲಪಡಿಸಿದಿರಿ. ಕೆಲವು ವರ್ಷಗಳ ಕೆಳಗೆ ಬ್ರಹ್ಮಪುತ್ರಾನದಿಯ ಕಣಿವೆಯ ಪ್ರಾಂತಗಳಿಗೆ ಬಂದ ತಾಂತ್ರಿಕ ಶಕ್ತಿಗಳನ್ನು ಪಡೆದವರಿಗೆ ಹೆದರಿ, ನಾನು ಈ ಕಡೆಗೆ ಓಡಿಬಂದುಬಿಟ್ಟೆ. ಅವರ ಮಂತ್ರತಂತ್ರಗಳ ಮುಂದೆ ನನ್ನ ಈ ಕಲ್ಲಿನ ಗದೆ ಕೆಲಸಕ್ಕೆ ಬಾರದು. ನನ್ನದು ಸೀದಾ ರೀತಿಯ ಬಹಿರಂಗ ಶಕ್ತಿ ಅಷ್ಟೇ. ಅಂತರಂಗದ ಶಕ್ತಿಗಳಾದ ಮಂತ್ರವೂ ಒಳತಂತ್ರವೂ ನನಗೆ ತಿಳಿಯದು. ಮಂತ್ರ ಶಕ್ತಿಯಲ್ಲಿ ನಿಮ್ಮ ಗುರುಗಳು ಎಂತೆಂಥವರನ್ನೂ ಮೀರಿಸಿದವರೆಂದು ನೀವು ಹೇಳುವಿರಷ್ಟೆ? ಅದಕ್ಕೇ ನಾನು ನಿಮ್ಮೊಂದಿಗೆ ಆ ಪ್ರಾಂತಕ್ಕೆ ಬಂದು ಆ ದುಷ್ಟರ ಸರ್ವನಾಶಮಾಡಲು ನಿಮಗೆ ಸಹಾಯಕನಾಗಿರುತ್ತೇನೆ" ಎಂದನು.

ಉಗ್ರದಂಡನ ಮಾತುಗಳನ್ನು ಕೇಳಿ ಕೆಂಗಣ್ಣ ಮಾಂತ್ರಿಕನಿಗೆ ಮಾತ್ರವಲ್ಲ, ಕಾಳೀವರ್ಮನಿಗೂ ಬಹಳ ಸಂತೋಷವಾಯಿತು. ಅವನು ಉಗ್ರದಂಡನನ್ನು ನೋಡಿ. "ಉಗ್ರದಂಡಾ! ನಾವು ಆದಷ್ಟು ಬೇಗನೇ ಇಲ್ಲಿಂದ ಹೊರಟು ಆ ಭಲ್ಲೂಕಪಾದ ಪರ್ವತ ಪ್ರಾಂತಕ್ಕೆ ಹೋಗೋಣ. ಹೋಗುವ ಮೊದಲು ನಮ್ಮ ಗುರು ಮಾಂತ್ರಿಕರ ಮಂತ್ರದಂಡವನ್ನು ಸಂಪಾದಿಸಬೇಕು. ಅದಕ್ಕಾಗಿ ಆ ಮಾಯಾಮರ್ಕಟನನ್ನು ಹೇಗಾದರೂ ಮಾಡಿ ಹಿಡಿಯಬೇಕು. ಅಲ್ಲದೆ ದುಷ್ಟನಾದ ಜಿತಕೇತು ರಾಜನಿಗೂ ತಕ್ಕ ಬುದ್ಧಿ ಕಲಿಸಿಬಿಡಬೇಕು" ಎಂದನು.

ಕಾಳೀವರ್ಮನ ಬಾಯಿಯಿಂದ ಅಷ್ಟು ಮಾತು ಕೇಳಿದ ಕೂಡಲೇ ಕಟುಕಕರಡಿ ಮನುಷ್ಯನು "ಜೈ! ಭೈರವಾ!" ಎಂದು ಕೂಗಿ ತನ್ನ ಆನೆಯನ್ನು ನಗರದ ಕಡೆಗೆ ಹೊರಡಿಸಿದನು.

ಅಷ್ಟರೊಳಗೆ ಚಂದ್ರಶಿಲಾ ನಗರದಲ್ಲಿ ಏನಾಯಿತೆಂದರೆ, ಕುದುರೆಯ ಮೇಲೆ ಅತಿವೇಗವಾಗಿ ಹೋದ ಮಾಯಾಮರ್ಕಟನು, ನಗರದ ದ್ವಾರವನ್ನು ತಲಪಿದ ಕೂಡಲೇ, ಅಲ್ಲಿದ್ದ ಕಾವಲಿನ ಭಟರಿಬ್ಬರು, ಮರ್ಕಟದಂಥವನನ್ನು ನೋಡಿ ಆಶ್ಚರ್ಯಪಡುತ್ತ, "ಓಹೋ!

ಏನಿದು? ಮರಗಳಲ್ಲಿ ನೇತಾಡುವ ಕೋತಿ ಕುದುರೇ ಮೇಲೆ ಕೂತು ಓಡಿಬಂದಿದೆ! ಏನದ್ಭುತ!" ಎನ್ನುತ್ತ ಕತ್ತಿಗಳನ್ನು ಅಡ್ಡ ಹಿಡಿದು, "ಏಯ್! ಮರಮಂಗಾ! ಎಲ್ಲಿಗಿದು ಸವಾರೀ ? ನಿಲ್ ನಿಲ್ಲು!" ಎಂದರು.

ಮಾಯಾಮರ್ಕಟನು ಕಿವಿಗಳು ತೂತು ಬೀಳುವಂತೆ ಕೀಚಿಂದು ಅರಚಿ, "ಎಲವೋ ಭಟಾಧಮರೇ! ನಾನು ಸಾಧಾರಣ ಮರಮಂಗನಲ್ಲ! ಮಂತ್ರಶಕ್ತಿಗಳನ್ನು ಪಡೆದ ಭ್ರಾಂತಿಮತಿ ನಾನು. ದಾರಿ ಬಿಡಿ. ನಿಮ್ಮ ಮಹಾರಾಜನಿಗೆ ಬರುವ ದೊಡ್ಡದೊಂದು ಆಪತ್ತನ್ನು ನಿವಾರಣೆಮಾಡಲು ಬಂದಿದ್ದೇನೆ." ಎಂದು ಕುದುರೆಯನ್ನು ಮುಂದಕ್ಕೆ ಹೊರಡಿಸಿದನು.

ಕಾವಲುಗಾರರಲ್ಲೊಬ್ಬ ಅವನ ಮಾತು ಕೇಳಿ ಬೆರಗಾಗಿ ಬೆಜ್ಜರಗೊಂಡು ಎರಡಡಿ ಹಿಂದಿಟ್ಟನು. ಆದರೆ ಎರಡನೇ ಭಟನು ಯಾವುದಕ್ಕೂ ಹೆದರದೆ, ಕತ್ತಿಯನ್ನು ಮರ್ಕಟನ ತಲೆಗೆ ಗುರಿಯೆತ್ತಿ, "ನೀನು ತಾಂತ್ರಿಕನೋ ಮಾಂತ್ರಿಕನೋ ನಮಗೆ ತಿಳಿಯ ಬೇಕಾಗಿಲ್ಲ. ಮೊದಲು ನಮ್ಮ ಹಿಂದೆ ನಿಮ್ಮ ನಾಯಕರ ಬಳಿಗೆ ಬಾ." ಎಂದು ಕುದುರೆಯ ಕಡಿವಾಣಕ್ಕೆ ಕೈಹಾಕಿದನು.

ಆ ಕೂಡಲೇ ಮಾಯಾಮರ್ಕಟನು ತನ್ನ ಕೈಯಲ್ಲಿದ್ದ ಮಂತ್ರದಂಡದಿಂದ ಕಾವಲುಗಾರನ ಕತ್ತಿಯನ್ನು ಬದಿಗೆ ದೂಡಿದನು. ಮಂತ್ರದಂಡದ ಒರೆಸಾಟಕ್ಕೆ ಕತ್ತಿ ಮಿಂಚಿನ ಹಾಗೆ ಒಮ್ಮೆಗೇ ಧಗಧಗಿಸಿ ಉರಿದು ಕರ್ಪೂರದ ಕತ್ತಿಯಂತೆ ಮಾಯವಾಯಿತು!

ಕಾವಲುಗಾರರಿಬ್ಬರೂ ಸಾಯುವ ಹಾಗೆ ಕೂಗಿ ಬದಿಗೆ ತಪ್ಪಿಸಿಕೊಂಡರು, "ಜೈ! ತಾಂತ್ರಿಕ ಗುರೋ!" ಎಂದು ಕೂಗುತ್ತ ಮಾಯಾಮರ್ಕಟನು ಕುದುರೆಯನ್ನು ಮುಂದಕ್ಕೆ ಹರಿಸಿ ರಾಜಬೀದಿಯನ್ನು ಸೇರಿದನು.

ನಗರ ದ್ವಾರಕ್ಕೆ ಸ್ವಲ್ಪ ದೂರದಲ್ಲಿ ಗೋಡೆಯ ಹತ್ತಿರ ಕೆಲಮಂದಿ ಕಾವಲಿನ ಭಟರೊಂದಿಗೆ ಕೂಡಿ ನಗುತ್ತ ಕೆಲೆಯುತ್ತ ಹರಟೆಯಲ್ಲಿ ಮಗ್ನನಾದ ಅವರ ನಾಯಕನು, ದ್ವಾರದ ಹತ್ತಿರ ಭಟರು ಕೂಗಿಕೊಂಡು





ದನ್ನು ಕೇಳಿ ಕತ್ತೆತ್ತಿ ಇತ್ತ ನೋಡಿದನು. ಅವರ ಹರಟೆಗಳು ಅಲ್ಲಿಂದಲ್ಲಿಗೇ ನಿಂತುಹೋಗಿತ್ತು.

ಕುದುರೆಯ ಮೇಲೆ ವಿಚಿತ್ರ ಕೋತಿರೂಪದವನು ಹೋಗುವುದನ್ನು ನೋಡಿ, ನಾಯಕನು ಕತ್ತಿ ಹಿರಿದು ತನ್ನ ಕುದುರೆಯ ಕಡೆಗೆ ಓಡುತ್ತ, "ಓಹೋ! ಯಾವನೋ ಶತ್ರು ರಾಜರ ಗೂಢಚಾರಿ ಕೋತಿ ವೇಷದಲ್ಲಿ ಬಲವಂತದಿಂದ ನಗರದೊಳಗೆ ನುಗ್ಗಿದ್ದಾನೆ. ಬನ್ನಿರಿ! ಓಡಿಸಿರಿ! ಹಿಡಿಯಿರಿ ಅವನನ್ನು!" ಎಂದು ಕೂಗಿ ಹೇಳಿದನು.

ಕಾವಲು ಭಟರ ನಾಯಕನು ತನ್ನ ಕುದುರೆಯನ್ನೇರಿ, ಭಟರನ್ನು ಕೂಡ ಹಾಕಿ ಹೊರಡುವುದರೊಳಗೆ, ಮಾಯಾಮರ್ಕಟನು ವಾಯುವೇಗದಿಂದ ಬಹುದೂರ ಹೋಗಿದ್ದನು. ತುಸು ದೂರದಲ್ಲಿ ರಾಜಭವನವು ಕಾಣುತ್ತಿದ್ದಿತು. ಅಲ್ಲಿ ರಾಜಭವನದ ಮುಂದಿರುವ ವಿಶಾಲವಾದ ಮೈದಾನದ ಒಂದು ಬದಿಯಲ್ಲಿ ಜನರು ಗುಂಪಾಗಿ ಏನೋ ಆಟ ನೋಡುತ್ತಿದ್ದರು. ಅವರ ನಡುವೆ ಆಟವಿಕನೊಬ್ಬ ಕೋತಿ, ಕರಡಿ ಮೊದಲಾದ ಪಳಗಿಸಿದ ಪ್ರಾಣಿಗಳನ್ನು ಆಟವಾಡಿಸುತ್ತ ಸೇರಿದ ಜನರನ್ನು ಆನಂದಪಡಿಸುತ್ತಿದ್ದನು.

ಮಾಯಾಮರ್ಕಟನು ಕುದುರೆ ಮೇಲೇರಿ ಆ ಕಡೆಗೇ ಹೋಗಲು, ಗುಂಪಿನಲ್ಲಿದ್ದವರು ನೋಡಿ, ಉತ್ಸಾಹದಿಂದ ಚಪ್ಪಾಳೆ ಬಾರಿಸುತ್ತ, "ಆಹಾಹಾ! ಕಾಡು ಕೋತಿ! ಮನುಷ್ಯಮಂಗ! ಕುದುರೆ ಸವಾರಿ! ನೋಡಿ ನೋಡಿ! ಯಾರು ಈ ಕೋತೀ ವೇಷದ ಆಟಗಾರ?" ಎಂದು ಕೂಗಾಡ ತೊಡಗಿದರು.

ಆ ಪ್ರಾಣಿಗಳನ್ನು ಆಡಿಸುವ ಆಟವಿಕನು ಮಾಯಾಮರ್ಕಟನ ಕಡೆಗೆ ಒಮ್ಮೆ ನೋಡಿ, "ಇದಾವುದೋ ಒಳ್ಳೇ ಶಿಕ್ಷಣ ಪಡೆದ ಕೋತಿ! ಅದರ ಯಜಮಾನನ ಕಣ್ಣು ತಪ್ಪಿಸಿ ಹೀಗೆ ಓಡಿ ಬಂದಿರಬೇಕು! ಯಾವುದಕ್ಕೂ ಇದನ್ನು ಹಿಡಿಯುವುದು ಒಳ್ಳೇದು." ಎಂದುಕೊಂಡನು.

ಅವನು ಹೀಗೆಂದುಕೊಂಡು ಬೇಗನೇ ಮುಂದೆ ಬಂದು ಉರುಳಿನ ಹಗ್ಗವನ್ನು ಮಾಯಾಮರ್ಕಟನ ಕಂಠ ಪ್ರದೇಶಕ್ಕೆ ಗುರಿಯಿಟ್ಟು ಬೀಸಿದನು. ಆದರೆ ಹಗ್ಗದುರುಳು ಜಾರಿ ಮರ್ಕಟನ ಸೊಂಟದಲ್ಲಿ ಬಿಗಿದುಕೊಂಡಿತು. ಮರುಕ್ಷಣದಲ್ಲಿ ಮಾಯಾಮರ್ಕಟನು ಕೀಚುಧ್ವನಿ ಮಾಡಿ ಲಾಗಹಾಕಿದ ಹಾಗೆ ನೆಲಕ್ಕೆ ಬಿದ್ದನು. ಬೀಳುವಾಗ ಅವನ ಕೈಯಲ್ಲಿದ್ದ ಮಂತ್ರದಂಡವು ಹಾರಿ ಹೋಗಿ ಇನ್ನಿಷ್ಟು ದೂರದಲ್ಲಿ ಬಿತ್ತು. ಖಾಲೀ ಕುದುರೆ ಮುಂದೆ ಓಡಿತು.

ಪ್ರಾಣಿಗಳನ್ನು ಆಡಿಸುವವನು ಮಾಯಾಮರ್ಕಟನ ಬಳಿಗೆ ಓಡಿ, ಅವನ ಎರಡು ಕಿವಿಗಳನ್ನೂ ಹಿಡಿದು ಮೇಲೆತ್ತಿ ನಿಲ್ಲಿಸಿ, "ಓ! ಕೀಚು ಕೀಚು ಕೀಚಣ್ಣಾ! ಈ ಕ್ಷಣದಿಂದ ನಿನ್ನ ಯಜಮಾನ ನಾನು! ಇನ್ನು ಮೇಲೆ ನನ್ನ ಮಾತು ಕೇಳದೆ ತುಂಟಾಟ ಮಾಡಿದೆಯೆಂದರೆ, ನಿನ್ನ ಬಾಲಕ್ಕೆ ಎಣ್ಣೇ ಬಟ್ಟೆ ಸುತ್ತಿ ಬೆಂಕಿ ಹಚ್ಚುತ್ತೇನೆ! ಲಂಕಾದಹನದ ಹಾಗೆ ಮಾಡಲು

ಇಲ್ಲಿ ಯಾರೂ ರಾಕ್ಷಸರಿಲ್ಲ. ಬಾಲ ಮುದುಡಿ ನನ್ನ ಜತೆಯಲ್ಲಿ ಬಾ ಸುಮ್ಮನೆ!" ಎಂದನು.

ಮಾಯಾಮರ್ಕಟನು ಹಲ್ಲು ಕಡಿಯುತ್ತ ಸುತ್ತಲೂ ನಿಂತವರನ್ನು ನೋಡಿ, ನಂತರ ತನ್ನನ್ನು ಹಿಡಿದವನನ್ನು ದುರುಗುಟ್ಟಿ ನೋಡುತ್ತ, "ಎಲೋ ಮೂಢನೇ! ಭಂಡನೇ! ಬುದ್ಧಿ ಮಣ್ಣು ತಿಂದವನೇ! ನನ್ನನ್ನು ಯಾರೆಂದು ತಿಳಿದೇ? ನಾನು ಸಾಧಾರಣ ಕೋತಿಯಲ್ಲ. ಅದ್ಭುತ ಶಕ್ತಿಗಳನ್ನು ಪಡೆದ ತಾಂತ್ರಿಕ ಭ್ರಾಂತಿಮತಿ! ನಿಮ್ಮ ರಾಜನಿಗೆ ದೊಡ್ಡದೊಂದು ವಿಪತ್ತು ಬರುತ್ತಿದೆ. ಅದನ್ನು ಹೇಳಿ ಎಚ್ಚರ ಪಡಿಸಲಿಕ್ಕೇ ಹೋಗುತ್ತಿದ್ದೇನೆ. ಇಂತಹ ದೊಡ್ಡ ರಾಜ ಕಾರಣದವನಾದ ನನ್ನನ್ನು ಮಧ್ಯದಲ್ಲಿ ವಿಚಾರ ಸಾಚಾರವಿಲ್ಲದೆ ಹೀಗೆ ಅವಮಾನ ಪಡಿಸಿದೆಯಾ? ಇದು ನಿನ್ನ ರಾಜನಿಗೇ ದ್ರೋಹ! ರಾಜನೇ ನಿನ್ನ ತಲೆ ಹಾರಿಸುವಂತೆ ಮಾಡುತ್ತೇನೆ. ಎಲ್ಲಿ ನನ್ನ ಮಂತ್ರದಂಡ?" ಎಂದು ಕರ್ಕಶ ಸ್ವರದಲ್ಲಿ ಹೇಳಿ ಅತ್ತಿತ್ತ ನೋಡಿದನು.

ಅವನ ಮಾತುಗಳನ್ನು ಕೇಳಿ ಪ್ರಾಣಿಗಳನ್ನು ಆಡಿಸಿ ಬದುಕುವ ಆಟವಿಕನ ತಲೆ, ಹೆದರಿ ತಿರುಗ ತೊಡಗಿತು. ಅವನು ಎರಡು ಮೂರು ಅಡಿಗಳನ್ನು ಹಿಂದಕ್ಕಿಟ್ಟು, ಏನೋ ಒಂದು ಉಪಾಯವನ್ನು ನೆನೆದು, ತನ್ನ ಕರಡಿಯನ್ನು ನೋಡಿದನು. ಆ ಕರಡಿಯ ಕೊರಳಿಗೆ ಸಿಕ್ಕಿಸಿದ್ದ ಕಬ್ಬಿಣದ ಸಂಕಲೆಯನ್ನು ಹಿಡಿದು ಅದನ್ನು ಮುಂದಕ್ಕೆ ಎಳೆಯುತ್ತ, "ಇದು ಯಾವುದೋ ಪಿಶಾಚಿ. ಕೋತಿ! ಏನೋ ಹೇಳಿ ಹೆದರಿಸಲು ನೋಡುತ್ತೆ! ಪ್ರಾಣಿಯನ್ನು ಪ್ರಾಣಿಯ ಮೂಲಕವೇ ಅಡಗಿಸಬೇಕು" ಎನ್ನುತ್ತ ತನ್ನ ಪಳಗಿದ ಕರಡಿಗೆ ಸನ್ನೆಮಾಡಿ ಮುಂದಕ್ಕೆ ಬಿಟ್ಟನು.

ಆ ಕರಡಿ ಜಟ್ಟಿಯಂತೆ ತೋಳುಗಳನ್ನು ತಟ್ಟಿ ಕೊಂಡು, ಬಾಯಿಯನ್ನು ಅಗಲಿಸಿಕೊಂಡು ಮಾಯಾ ಮರ್ಕಟನ ಮೇಲೆ ಧುಮುಕಿತು. ಮಾಯಾ



ಮರ್ಕಟನು ಈ ಹೊಸ ಆಕ್ರಮಣದಿಂದ ಸಾಯುವ ಹಾಗೆ ಕಿರಿಚುತ್ತ, "ಲೋ! ಲೋ! ನಾನು ಜಿತಕೇತು ಮಹಾರಾಜರಿಗೆ ಒಳ್ಳೆಯದು ಮಾಡಲಿಕ್ಕೆ ಬಂದವನೋ! ಅವರಿಗೆ ಕರಡಿಕೆಂಗಣ್ಣು ಮಾಂತ್ರಿಕನಿಂದ ಆಪತ್ತು ಬರುತ್ತದೆ. ಎಲ್ಲೀ ನಿಮ್ಮ ರಾಜ? ನನ್ನ ಮಂತ್ರದಂಡ ಎಲ್ಲೀ?" ಎಂದು ಕೂಗುತ್ತ ಕರಡಿ ಯಿಂದ ಬಿಡಿಸಿಕೊಳ್ಳುತ್ತ ಸಿಕ್ಕಸಿಕ್ಕಲ್ಲಿ ಅದನ್ನು ಕಚ್ಚುತ್ತ ಉರುಡಾಡ ತೊಡಗಿದನು.

ಸುತ್ತಲೂ ಸೇರಿದ ಜನರು ಮರ್ಕಟನ ಮಾತು ಗಳನ್ನು ಸ್ವಲ್ಪವೂ ಲಕ್ಷ್ಯಮಾಡದೆ, ಇದೊಂದು ಆಟವೆಂದೇ ಭಾವಿಸಿ, "ಅಹಾ! ಮಾತು ಕಲಿತ ಕೋತಿ! ಮೂಗ ಬಂಟ ಕರಡಿಗೂ ಕೋತಿಗೂ ಖಾಡಾಖಾಡೀ ಕುಸ್ತಿ! ಈ ಅದ್ಭುತ ಈವರೆಗೆ ನೋಡಿಲ್ಲ! ಭಲೇ ಭಲೇ!" ಎಂದು ಹೇಳುತ್ತ, ಸಿಳ್ಳು ಹಾಕುತ್ತ ಚಪ್ಪಾಳೆ ತಟ್ಟುತ್ತಲಿದ್ದರು. ಅಷ್ಟರಲ್ಲಿ ಅಲ್ಲಿಗೆ ಕುದುರೆಯ ಮೇಲೆ ವೇಗವಾಗಿ

ಕಾವಲು ಭಟರ ನಾಯಕನು ಬಂದು, "ಏನಿದು ನಿಮ್ಮ ಆಟ!" ಎಂದು ಗರ್ಜಿಸಿ ಕತ್ತಿ ಹಿರಿದು, ಸ್ವಲ್ಪ ದೂರದಲ್ಲಿ ನಿಂತಿದ್ದ ಪ್ರಾಣಿಗಳನ್ನಾಡಿಸುವವನನ್ನು ನೋಡಿ, "ಎಲೋ! ಕೋತಿವೇಷ ಹಾಕಿಕೊಂಡು ಬಂದ ಶತ್ರು ಗೂಢಚಾರಿ ಇವನು! ಇವನನ್ನು ನಿನ್ನ ಕರಡಿಯಿಂದ ಕೊಲ್ಲಿಸಲು ನೋಡುವೆಯಾ? ಜಾಗ್ರತೆ! ಮೊದಲು ಈ ಗೂಢಚಾರಿಯನ್ನು ಜೀವದೊಂದಿಗೆ ಹಿಡಿದು ಮಹಾರಾಜರ ಬಳಿಗೆ ಕರೆದುಕೊಂಡು ಹೋಗಬೇಕು! ಅವನ ಜೀವಕ್ಕೆ ಏನೂ ಆಗಬಾರದು!" ಎಂದನು.

ನಾಯಕನ ಮಾತನ್ನು ಕೇಳಿ ಪ್ರಾಣಿಗಳನ್ನು ಆಡಿಸುವವನು ಮುಂದಕ್ಕೆ ಹೋಗಿ ಕರಡಿಯ ಸಂಕಲಿಯನ್ನು ಹಿಡಿದು ಈಚೆಗೆ ಎಳೆದನು. ಕರಡಿ ಮರ್ಕಟನನ್ನು ಬಿಟ್ಟಿತು. ಮಾಯಾ ಮರ್ಕಟವು ತನ್ನ ಶರೀರಕ್ಕೆ ಉಂಟಾದ ಗಾಯಗಳಿಂದ ನರಳುತ್ತ, "ಎಂಥಾ ಹುಚ್ಚರು ನೀವೆಲ್ಲಾ! ನಿಮ್ಮ ರಾಜನನ್ನು ಆಪತ್ತಿನಿಂದ ಉಳಿಸಲು ಬಂದ ನನ್ನನ್ನು ಹೀಗೆಲ್ಲಾ ಅವಮಾನಪಡಿಸುವಿರಾ? ನಿಮಗೆಲ್ಲಾ ಜೀವದ ಮೇಲೆ ಆಶೆಯಿದ್ದರೆ ಓಡಿಹೋಗಿ ನಿಮ್ಮ ರಾಜನನ್ನು ನನ್ನ ಬಳಿಗೆ ಬರಲಿಕ್ಕೆ ಹೇಳಿ. ಎಲ್ಲಿ ನನ್ನ ಮಂತ್ರದಂಡ?" ಎಂದು ಕಣ್ಣು ತಿರುಗಿಸುತ್ತ ಸುತ್ತಲೂ ನೋಡಿದನು. ಮರ್ಕಟನ ಮಾತು ಕೇಳಿ ನಾಯಕನಿಗೆ ಬಹಳ ಸಿಟ್ಟು ಬಂತು. ಅವನು ಹಲ್ಲು ಕಡಿಯುತ್ತ, "ಎಲೋ ಶತ್ರು ಗೂಢಚಾರೀ! ನಮ್ಮ ಮಹಾರಾಜರು ನಿನ್ನ ಹತ್ತಿರ ಬರಬೇಕೆ? ನಿನಗೆ ಗರ್ವ ತಲೆಗೇರಿದೆ!" ಎಂದು ನುಡಿದು ಪ್ರಾಣಿಗಳನ್ನು ಆಡಿಸುವವನನ್ನು ನೋಡಿ, "ಎಲೋ ನಿನ್ನ ಕರಡಿಯಿಂದ ಈ ಕೋತಿರಾಯನನ್ನು ಹಿಡಿಯಿಸಿ, ಎಳೆಯಿಸಿಕೊಂಡು, ನನ್ನ ಹಿಂದೆ ಮಹಾರಾಜರ ಬಳಿಗೆ ಬಾ" ಎಂದು ಅಪ್ಪಣೆಮಾಡಿ ರಾಜಭವನದ ಕಡೆಗೆ ನಡೆಯತೊಡಗಿದನು.

"ಹೊರಿಸಿಕೊಂಡೇ ಬರುತ್ತೇನೆ ದೊರೆಗಳೇ" ಎಂದು ಹೇಳಿ ಪ್ರಾಣಿಗಳನ್ನು ಆಡಿಸುವವನು ತನ್ನ ಕರಡಿಗೆ ಸೈಗೆ ಮಾಡಿದನು. ಕರಡಿ ರಭಸದಿಂದ ಹೋಗಿ ಮಾಯಾ ಮರ್ಕಟನನ್ನು ಬಾಚಿ ಸುತ್ತಿ ಎತ್ತಿ ತನ್ನ ಹೆಗಲಿನ ಮೇಲೆ ಹಾಕಿಕೊಂಡು, ತನ್ನ ಒಡೆಯನ ಹಿಂದಿನಿಂದ ರಾಜಭವನದ ಕಡೆಗೆ ಹೊರಟಿತು. ಸುತ್ತಲೂ ಕೂಡಿದ ಜನರು ಅತ್ಯಂತ ಉತ್ಸಾಹದಿಂದ ಕೇ ಕೇ ಕೂಗುತ್ತ ಹಿಂದೆಯೇ ಸಾಗಿದರು.

ಮಾಯಾಮರ್ಕಟನು ಕರಡಿಯ ಹೆಗಲ ಮೇಲೆ ತುಳ್ಳಾಡುತ್ತ, "ತಾಂತ್ರಿಕ ಗುರೋ! ನೀವೇ ಕಾಪಾಡಬೇಕು! ನನ್ನ ಮಂತ್ರದಂಡ! ಮಂತ್ರದಂಡ!" ಎಂದು ಕೂಗುತ್ತಲೇ ಇದ್ದನು. —(ಇನ್ನೂ ಇದೆ)





# ಕರಡಿಕೆಂಗಣ್ಣ

## ೧೭

[ಮಾಯಾಮರ್ಕಟನು ಕರಡಿಕೆಂಗಣ್ಣನ ಮಂತ್ರದಂಡದೊಂದಿಗೆ ಕಾಳೀವರ್ಮ ಮೊದಲಾದವರನ್ನು ತಪ್ಪಿಸಿಕೊಂಡು ನಗರಕ್ಕೆ ಹೋದನು. ಅಲ್ಲಿ ರಾಜಭವನದ ಹತ್ತಿರ ಆಟ ತೋರಿಸುತ್ತಿದ್ದ ಆಟವಿಕನ ಕರಡಿ, ಮರ್ಕಟನ ಮೇಲೆ ಧುಮುಕಿತು. ಆಗ ಅಲ್ಲಿಗೆ ಬಂದ ಕಾವಲಗಾರರ ನಾಯಕನು, ಕರಡಿಯಿಂದ ಮರ್ಕಟನನ್ನು ಹೊರಿಸಿಕೊಂಡು ರಾಜನ ಬಳಿಗೆ ಹೊರಟನು. ಈ ಗಡಿಬಿಡಿಯಲ್ಲಿ ಮರ್ಕಟನ ಕೈಯಲ್ಲಿದ್ದ ಮಂತ್ರದಂಡ ಎಲ್ಲೋ ಬಿದ್ದಿತ್ತು.]

**ರಾ**ಜಭವನದ ಮುಖದ್ವಾರದ ಮೆಟ್ಟಲಿನ ಹತ್ತಿರ ಹೋದ ಕೂಡಲೇ ಕಾವಲುಗಾರರ ನಾಯಕನು ಕತ್ತಿಯನ್ನು ಮೇಲೆತ್ತಿ, ಹಿಂದೆ ಬರುತ್ತಿರುವವರನ್ನು ನಿಲ್ಲುವಂತೆ ಆಡಿಸಿದನು. ಹಾಗೆಯೇ ಪ್ರಾಣಿಗಳ ಆಟಗಾರನನ್ನು ನೋಡಿ, "ಎಲೋ, ಮಹಾರಾಜರು ಈಗ ಸಭಾಭವನದಲ್ಲಿ ಒಡ್ಡೋಲಗ ನಡೆಸುವಂತೆ ಕಾಣುತ್ತದೆ. ಅಲ್ಲಿಗೆ ಈ ಕೊಳಕು ಕಾಡು ಕರಡಿ ಬರುವುದು ಮರ್ಯಾದೆ ಅಲ್ಲ. ಮಹಾರಾಜರಿಗೆ ಕೋಪ ಬಂದೀತು. ಆದ್ದರಿಂದ ಅದು ಹೊತ್ತು ಕೊಂಡಿರುವ ಕಳ್ಳ ಕೋತೀಭಂಡನನ್ನು ನೀನೇ ಹೆಗಲಿಗೇರಿಸಿಕೊಂಡು ನನ್ನ ಹಿಂದೆ ಮಹಾರಾಜರ ಬಳಿಗೆ ಬರಬಲ್ಲೆಯಾ?" ಎಂದು ಕೇಳಿದನು.

ಆ ಮಾತು ಕೇಳಿ ಆಟಗಾರನ ಮುಖವು ಕೋಪದಿಂದ ಗಂಟಿಕ್ಕಿಕೊಂಡಿತು. "ನೀವು ನನ್ನನ್ನು ಏನು ಬೇಕಾದರೂ ಹೇಳಿರಿ, ಕೇಳುತ್ತೇನೆ. ಬುದ್ಧಿಯುಳ್ಳ ಈ ನನ್ನ ಸಾಕು ಕರಡಿಯನ್ನು ಮಾತ್ರ ಕಾಡಿನ ಕೊಳಕಾ ಅಂತ ಹೇಳಿ ಅವಮಾನ ಪಡಿಸಿದರೆ ನನಗೆ ಸಹಿಸಲಾಗುವುದಿಲ್ಲ. ಇದರ ಬುದ್ಧಿವಂತಿಕೆಯ ಕೆಲಸ ನೋಡಿ ಎಷ್ಟೋ ರಾಜರೂ, ಸಾಮಂತರೂ, ಪಂಡಿತರೂ ಆಶ್ಚರ್ಯಪಟ್ಟು, ಮೆಚ್ಚಿದ್ದಾರೆ ಗೊತ್ತಾ? ಲಂಕೆಗೆ



ಸೇತುವೆ ಕಟ್ಟಿದವರಲ್ಲಿ ಇದರ ಪೂರ್ವಿಕನೊಬ್ಬ ಇದ್ದ ನೆಂಬುದಕ್ಕೆ, ನನ್ನ ಹತ್ತಿರವಿರುವ ತಾಳಪತ್ರಗಳಲ್ಲಿ ರುಜುವಿದೆ. ಅದು ನನ್ನ ಚೀಲದಲ್ಲೇ ಇದೆ. ಬೇಕಾದರೆ ಹೇಳಿ, ಈಗಲೇ ತೋರಿಸುತ್ತೇನೆ" ಎಂದು ಅವನು ತನ್ನ ದುಸ್ತಿನೊಳಗಿನಿಂದ ಒಂದು ತಾಳಪತ್ರ ಗ್ರಂಥ ವನ್ನು ಹೊರಗೆ ತೆಗೆದನು. ಕಾವಲುಗಾರರ ನಾಯಕನು, ದೊಡ್ಡದನಿಯಿಂದ ನಕ್ಕು. "ಇರಲಿರಲಿ, ಅದನ್ನು ದುಸ್ತಿನೊಳಗೇ ಇಟ್ಟುಕೋ. ನಿನ್ನ ಕರಡಿಯ ವಂಶ ವೃಕ್ಷದ ಸಂಗತಿಯನ್ನು ಸಂದರ್ಭ ಬಂದಾಗ ಆಸ್ಥಾನ ಪುರೋಹಿತರಿಗೆ ತೋರಿಸಿ ಮಹಾರಾಜರಿಂದ ಏನಾದರೂ ಒಳ್ಳೆಯ ಬಹುಮಾನ ಪಡೆಯಬಹುದು. ಮೊದಲು ಆ ಕೋತೀವೇಷದ ಶತ್ರು ಗೂಢಚಾರಿ ಯನ್ನು ಕರಡಿಯ ಹೆಗಲಿನಿಂದ ಕೆಳಗಿಳಿಸಿ ನೀನು ಹೊತ್ತುಕೋ. ತಡಮಾಡಿದರಾಗಲಿಲ್ಲ." ಎಂದನು.

ಆಟಗಾರನು ಇಷ್ಟವಿಲ್ಲದವನಂತೆ ಮುಖಮಾಡಿ ಕೊಂಡು, ಕರಡಿಯ ಬಳಿಗೆ ಬಂದು ಅದರ ಬೆನ್ನು ತಡವುತ್ತ, "ವೀರ ಬಂಟಾ, ನೀನು ಹೊತ್ತವನನ್ನು ಕೆಳಗೆ ಇಳಿಸಪ್ಪ, ಹೋಗಲಿ ಬಿಡು" ಎಂದು ಹೇಳಿ ಮಾಯಾಮರ್ಕಟನ ನಡುವಿಗೆ ಕಟ್ಟಿರುವ ಹಗ್ಗವನ್ನು ಗಟ್ಟಿಯಾಗಿ ಹಿಡಿದುಕೊಂಡನು.

ಕರಡಿ ಕೋರೇ ಹಲ್ಲುಗಳನ್ನು ತೋರಿಸಿ ದೊಡ್ಡ ದೊಂದು ಗರ್ಜನೆ ಹೊರಡಿಸಿ, ಮಾಯಾಮರ್ಕಟ ನನ್ನು ಇಳಿಸಲು ಬಾಗಿತು. ಅಷ್ಟರಲ್ಲೇ ಮರ್ಕಟ ದವನು ಕಿರ್ರನೆ ಕಿರುಚಿ ಕೆಳಗೆ ಹಾರಿ ದೊಡ್ಡ ಕಂಠದಿಂದ, "ಎಲೆಲೋ ಬುದ್ಧಿಗೇಡಿಗಳೇ! ನಿಮ್ಮ ನಗರಕ್ಕೆ ಕರಡಿಕೆಂಗಣ್ಣ ಮಾಂತ್ರಿಕನಿಂದ ಆಪತ್ತು ಬರುತ್ತಾ ಇದೆ. ನಿಮ್ಮ ರಾಜನು ಎಲ್ಲಿದ್ದಾನೆ? ಬೇಗ ತೋರಿಸಿರಿ! ನನ್ನ ಮಂತ್ರದಂಡ ಎಲ್ಲಿ? ಕೊಡಿರಿ ಹೀಗೆ!" ಎಂದು ಕೂಗಿ ಹೇಳಿದನು ಅತ್ತಿತ್ತ ನೋಡುತ್ತ.

ಆ ಮಾತು ಕೇಳಿ ಅಲ್ಲಿದ್ದ ಜನರೆಲ್ಲ ಹೋ ಹೋ ಎಂದು ಕೂಗುತ್ತ ಚಪ್ಪಾಳೆ ತಟ್ಟಿದರು. ಅವರ ಲ್ಲೊಬ್ಬನು ಉದ್ದವಾಗಿದ್ದ ತನ್ನ ಕೈಕೋಲನ್ನು ಮರ್ಕಟನ ಕಡೆಗೆ ಚಾಚಿ, "ಇಕೋ ನಿನ್ನ ಮಂತ್ರ ದಂಡ! ಏನೇನು ಅದ್ಭುತ ಕಾರ್ಯಮಾಡುವೆಯೋ ಮಾಡಿ ತೋರಿಸು!" ಎಂದನು.

ಮಾಯಾಮರ್ಕಟನು ಆ ಕೋಲನ್ನು ಎಳೆದು ಕೊಂಡು ಅದನ್ನು ನೆಟ್ಟಗೆ ನೆಲದ ಮೇಲಿಟ್ಟು, ಠಣ್ಣನೆ ಅದರ ಕೊನೆಯ ಮೇಲೆ ಹಾರಿ ಒಂಟಿಗಾಲಿ ನಲ್ಲಿ ನಿಂತು, "ಎಲೋ ಬುದ್ಧಿಗೆಟ್ಟವರೇ! ಇಂತಹ ಆಟ ನೀವೆಂದಾದರೂ ನೋಡಿದ್ದೀರಾ? ಹೀಗೆ ಆಟ ನೋಡುತ್ತಾ, ಪೇಚಾಟಕ್ಕೆ ಬೀಳುವುದೇ ನಿಮ್ಮ ಹಣೆ ಬರೆಹವಾದರೆ ನೋಡುತ್ತಾ ಸಾಯಿರಿ. ನಿಮ್ಮ ರಾಜನಿಗೂ ರಾಜ್ಯಕ್ಕೂ ಆಪತ್ತು ಸಮಾಪಿಸಿ ಕೊಂಡಿರುವ ಈ ಸಮಯದಲ್ಲಿ ಗಾರುಡೀ ವಿದ್ಯೆ ನೋಡಿ ಸಂತೋಷಪಡುವವರಿಗೆ ಏನು ಹೇಳ ಬೇಕು?" ಎಂದನು.

ಕಾವಲುಗಾರರ ನಾಯಕನು ಮಾಯಾಮರ್ಕಟನ ಬಳಿಗೆ ಬಂದು, ಅವನು ಒಂಟಿಗಾಲಿನಲ್ಲಿ ನಿಂತಿರುವ ಕೋಲನ್ನು ಕಡಿಯುವವನಂತೆ ಕತ್ತಿಯನ್ನು ಆಡಿಸುತ್ತ, "ಎಲೋ! ನರಮರ್ಕಟಾ, ಏನೇನೋ ಸಮಾಚಾರ ಹೇಳುವವನಂತೆ ಮಾತಾಡುವೆಯಲ್ಲಾ? ನೀನು ನಿಜಕ್ಕೂ ಶತ್ರುವಿನ ಗೂಢಚಾರಿ ಅಲ್ಲಾ ಎನ್ನುವೆಯಾ? ಯಾರೋ ಕರಡೀ ಕೆಂಗಣ್ಣ ಮಾಂತ್ರಿಕ ಅಂದೆಯಲ್ಲಾ? ಅದೆಲ್ಲಾ ನಿಜವೇನು?" ಎಂದು ಕೇಳಿದನು.

ಮಾಯಾಮರ್ಕಟನು ಮಿಂಚಿನ ವೇಗದಲ್ಲಿ ಕೆಳಕ್ಕೆ ಧುಮುಕಿ, ಕಾವಲುಗಾರರ ನಾಯಕನ ಕೈಯಲ್ಲಿದ್ದ ಕತ್ತಿಯನ್ನು ಸರಕ್ಕೆಂದು ಕಿತ್ತು, ಅದರಿಂದ ತನ್ನ ನಡುವಿಗೆ ಕಟ್ಟಿದ್ದ ಹಗ್ಗವನ್ನು ಕಡಿದು, "ಮೂರ್ಖರೇ! ನನ್ನ ಶಕ್ತಿ ಸಾಮರ್ಥ್ಯಗಳು ಎಂಥವೆಂದು ಸ್ವಲ್ಪ ಮಟ್ಟಿಗಾದರೂ ಗೊತ್ತಾಯಿತೆ? ನಿಮ್ಮ ರಾಜನನ್ನು ಈಗಲೇ ನನ್ನ ಇದಿರಿಗೆ ಕರೆದು ತನ್ನಿರಿ. ನಿಮಗೆಲ್ಲಾ ರಾಜಭಕ್ತಿಯಿದ್ದರೆ ಈಗಲೇ ನಿರೂಪಿಸಿರಿ. ಅವನು ಸ್ವಲ್ಪಕಾಲ ಸುಖವಾಗಿ ಬದುಕಿರಬೇಕೆಂದು ನನ್ನ ಆಸೆ!" ಎಂದು ಅವಸರಪಡಿಸಿದನು.

ಈಗ ಮಾತ್ರ ಎಲ್ಲರಿಗೂ ಏನೋ ಭಯ ಹುಟ್ಟಿತು. ಕಾವಲುಗಾರರ ನಾಯಕನೂ ಹೆದರಿ ಮರ್ಕಟನನ್ನೇ ಬೆದರು ಕಣ್ಣುಗಳಿಂದ ನೋಡುತ್ತ ಬಾಯಿ ಮುಚ್ಚಿ ನಿಂತನು.

ಮಾಯಾಮರ್ಕಟನು ಕತ್ತಿ ಝಳಪಿಸುತ್ತ ಅವನ ಬಳಿಗೆ ಬಂದು, "ಏನೋಯ್ ಮಂದಮತೀ! ಬೆಚ್ಚಪ್ಪನ ಹಾಗೆ ನಿಂತಿದ್ದಿ? ನನ್ನ ಆಜ್ಞೆ ಕೇಳಲಿಲ್ಲವೇ?" ಎಂದನು.

ಕಾವಲುಗಾರರ ನಾಯಕನು ಹೆದರಿ ನಡುಗುತ್ತ, "ಮಹಾರಾಜರು ತುಂಬಿದ ಸಭೆಯಲ್ಲಿರುವಾಗ ಅವರನ್ನು ಇಲ್ಲಿಗೆ ಬರುವಂತೆ ನಾನು ಕರೆದರೆ, ಮೊದಲು ನನ್ನ ತಲೆ ಹಾರುತ್ತದೆ" ಎಂದನು.



"ಹಾಗಾದರೆ ಬಿಡು, ನಾನೇ ಅಲ್ಲಿಗೆ ಹೋಗುತ್ತೇನೆ, ದಾರಿ ತೋರಿಸಿ ಮುಂದೆ ನಡೆ" ಎಂದ ಮಾಯಾಮರ್ಕಟ.

ಕಾವಲುಗಾರರ ನಾಯಕನು ಮೆಟ್ಟಲೇರಿ ರಾಜಭವನದೊಳಗೆ ನಡೆದನು. ಅವನ ಹಿಂದೆಯೇ ಮರ್ಕಟನೂ ಸಾಗಿದನು. ಜನರು ಹಿಂದೆಯೇ ಹೋಗಲು ಧೈರ್ಯವಿಲ್ಲದೆ, ಇದ್ದಲ್ಲೇ ಮೌನಮುದ್ರೆಯಿಂದ ಸುಮ್ಮನೇ ನಿಂತರು.

ಜಿತಕೇತು ರಾಜನು ಸಿಂಹಾಸನದಲ್ಲಿ ಕುಳಿತುಕೊಂಡು ಸಭೆಯಲ್ಲಿರುವ ಪುರಪ್ರಮುಖರೊಂದಿಗೆ ಏನೋ ಮಾತಾಡಿಕೊಂಡಿದ್ದನು. ಆ ಸಮಯದಲ್ಲಿ ಹಠಾತ್ತಾಗಿ ಕಾವಲುಗಾರರ ನಾಯಕನು ಸಭೆಯೊಳಗೆ ಹೊಕ್ಕು, "ಮಹಾಪ್ರಭುಗಳು ಕ್ಷಮಿಸಬೇಕು. ನನ್ನ ಹಿಂದೆ ಮರ್ಕಟ ರೂಪದಲ್ಲಿ, ಕತ್ತಿ ಹಿಡಿದುಕೊಂಡು ಬರುವವನು ಮಹಾಶಕ್ತಿವಂತನು. ನಮ್ಮ ರಾಜ್ಯದ ಮೇಲೆ ಬರುವ ಬಲುದೊಡ್ಡ ಅಪಾಯವನು,



ಕುರಿತು ಅವಸರವಾಗಿ ತಮ್ಮ ಮುಂದೆ ಹೇಳಿ ಎಚ್ಚರಿಸಬೇಕಂತೆ. ಅದಕ್ಕೇ ಅಪ್ಪಣೆ ಇಲ್ಲದೆ ಬರಬೇಕಾಯಿತು." ಎಂದು ಹೇಳಿ ಬದಿಗೆ ಸರಿದನು.

ಜಿತಕೇತು ರಾಜನೂ, ಸಭೆಯಲ್ಲಿದ್ದವರೂ ಮಾಯಾ ಮರ್ಕಟನನ್ನು ನೋಡಿ ಮೊದಲು ಆಶ್ಚರ್ಯಪಟ್ಟರು. ಆತನ ವಿಚಿತ್ರ ರೂಪವನ್ನೂ, ಹಾವ ಭಾವಗಳನ್ನೂ ನೋಡಿ ಕೆಲವರ ಮುಖದಲ್ಲಿ ನಗುವಿನ ರೇಖೆಗಳೆದ್ದುವು.

ಜಿತಕೇತು ರಾಜನು ಸಿಂಹಾಸನದ ಅಕ್ಕಪಕ್ಕಗಳಲ್ಲಿ ನಿಂತಿದ್ದ ಇಬ್ಬರು ಮಂತ್ರಿಗಳನ್ನು ನೋಡಿ, "ಬಂದವನನ್ನು ನೋಡುವುದೇ ಒಂದು ಸಂತೋಷವಾಗಿದೆ ಅಲ್ಲವೇ? ಪ್ರಧಾನಮಂತ್ರಿ ಜೀವಗುಪ್ತನು ಸಮಯಕ್ಕೆ ಇಲ್ಲದೆ ಹೋದನು. ಅವನು ಈ ಪ್ರಾಣಿಯನ್ನು ನೋಡಿ ಎಷ್ಟು ಸಂತೋಷಪಡುತ್ತಿದ್ದನೋ!" ಎಂದನು. ಅಷ್ಟರಲ್ಲಿ ಏನೋ ಆಲೋಚನೆ ಬಂದವನಂತೆ, ಮುಖವನ್ನು ಗಂಭೀರವಾಗಿ ಮಾಡಿಕೊಂಡು, ಕಾವಲುಗಾರರ ನಾಯಕನನ್ನು ನೋಡುತ್ತ, "ಅಂಜುಕುಳಿ ಭಡವಾ! ಒಂದು ಆಟದ ಕೋತಿಯನ್ನು ನೋಡಿ, ಮಹಾ ದ್ವಾರವನ್ನು ತೆರೆದಿಟ್ಟು ಇದನ್ನು ಸ್ವಯಂ ಇಲ್ಲಿಗೆ ಕರೆದು ತಂದ ನೀನು, ನಿಜಕ್ಕೂ ಶತ್ರು ಸೈನಿಕರು ದ್ವಾರದ ಹತ್ತಿರ ಬಂದರೆ ಏನು ಗತಿಯಾದೀತೆಂದು ಆಲೋಚಿಸಿದೆಯಾ? ನಿನಗೆ ಶಿರಚ್ಛೇದ ಶಿಕ್ಷೆಯನ್ನೇ ಕೊಡಬೇಕಾಗಿದೆ. ನಮ್ಮ ಕಟುಕರನಾಯಕ ಬಂದ ಕೂಡಲೇ ನಿನ್ನ ಶಿಕ್ಷೆ ಅಮಲಾಗುತ್ತದೆ." ಎಂದು ಅವನನ್ನು ಎಳೆದೊಯ್ಯುವಂತೆ ಭಟರ ಕಡೆಗೆ ನೋಡಿದನು.

ಈ ಶಿಕ್ಷೆಯ ಮಾತನ್ನು ಕೇಳಿದ ಕೂಡಲೇ ಸಭೆಯವರೆಲ್ಲ "ಶಭಾಸ್! ಸರಿಯಾದ ದಂಡನೆ!" ಎನ್ನುತ್ತ ಆನಂದೋತ್ಸಾಹದಿಂದ ಚಪ್ಪಾಳೆ ತಟ್ಟಿದರು. ಅದುವರೆಗೂ ರಾಜನ ಕಡೆಗೂ, ಸಭಾಸದರ ಕಡೆಗೂ ನೋಡುತ್ತಾ ಇದ್ದ ಮಾಯಾಮರ್ಕಟನು, "ಜೈ ತಾಂತ್ರಿಕ ಗುರೋ!" ಎಂದು ಕೂಗಿದನು. ಮರುಕ್ಷಣದಲ್ಲಿ ಇಡೀ ಸಭೆ ಸ್ತಬ್ಧವಾಯಿತು. ಮಾಯಾ ಮರ್ಕಟನು ಕರ್ಕಶ ಕಂಠದಿಂದ, "ಎಲೈ ಜಿತಕೇತು ಮಹಾರಾಜಾ, ಏನೂ ತಿಳಿಯದೆ ಆನಂದಪಡುತ್ತಿರುವ ನಗರ ಪ್ರಮುಖರೇ! ನಿಮ್ಮ ಮನಸ್ಸನ್ನು ಸ್ವಲ್ಪ ಸ್ವಾಧೀನದಲ್ಲಿಟ್ಟುಕೊಂಡು ನಾನು ಹೇಳುವ ಮಾತನ್ನು ಕೇಳಿರಿ. ನನ್ನನ್ನು ಮಾಮೂಲು ಕೋತಿ ಎಂದು ತಿಳಿಯಬೇಡಿ. ನಾನು ಮಹಾ ತಾಂತ್ರಿಕವೇತ್ತರ ಪ್ರಧಾನ ಶಿಷ್ಯನಾದ ಭ್ರಾಂತಿಮತಿ ಎಂಬವನು. ಈಗ ನಿಮ್ಮ ನಗರದ ಮೇಲೆ ಕಾಳೀವರ್ಮನೆಂಬ ಮಹಾಶೂರನೂ, ಕರಡಿಕೆಂಗಣ್ಣನೆಂಬ ಮಹಾ ಮಾಂತ್ರಿಕನೂ ದಾಳಿ ಬೀಳಲು ಬರುತ್ತಿದ್ದಾರೆ. ನಿಮಗೆ ಆ ವಿಷಯವನ್ನು ಮುಂದಾಗಿ ಹೇಳಿ ಎಚ್ಚರಿಸಲೆಂದೇ ನಾನು ಬಂದಿದ್ದೇನೆ. ಅದು ತಿಳಿಯದೆ ನಿಮ್ಮ ಭಟರು ನನ್ನನ್ನು ಎಷ್ಟೆಲ್ಲಾ ಅವಮಾನಪಡಿಸಿದರು ಗೊತ್ತಾ?" ಎಂದು ಹೇಳಿ ಎಲ್ಲರನ್ನೂ ತಿರಸ್ಕಾರದಿಂದ ನೋಡಿದನು.

ಮಾಯಾಮರ್ಕಟನ ಮಾತು ಕೇಳಿ ಸಭೆಯಲ್ಲಿ ಒಂದು ಬಗೆಯ ಗೊಣಗೊಣವೆದ್ದಿತು. ರಾಜನು ಬೆರಗಾಗಿ, ಸಿಂಹಾಸನದಿಂದ ಎದ್ದು ನಿಂತು ಮಾಯಾ ಮರ್ಕಟನನ್ನು ನೋಡಿ, "ಅದಕ್ಕೆ ಕಾರಣ ನಿನ್ನ ಈ ಕೋಪವೇ. ಆದರೆ ನಿನ್ನ ಮಾತಿನ ರೀತಿಯನ್ನು ನೋಡಿದರೆ ನಿನ್ನ ರೂಪಕ್ಕೆ ತಕ್ಕಹಾಗಿಲ್ಲ. ಆದುದ ರಿಂದ ನೀನು ಮಾಮೂಲು ಕೋತಿ ಅಲ್ಲವೆಂಬುದು ನಿಜವೇ. ನೀನು ಹೇಳಿದ ಎಚ್ಚರಿಕೆಯಲ್ಲಿ ಕಾಳೀವರ್ಮ ಎಂಬ ಹೆಸರಿರುವುದನ್ನು ನೋಡಿ ಆಶ್ಚರ್ಯವಾಗಿದೆ. ನಮ್ಮ ಮುಂದೆ ಅಪರಾಧಿಯಾದ ಆ ಕಾಳೀವರ್ಮ ನೊಂದಿಗೆ ಅವನ ಮಿತ್ರರೆಲ್ಲರನ್ನೂ ಹಿಡಿದು ಬಂಧಿಸಿ ತರಬೇಕೆಂದು, ನಮ್ಮ ಪ್ರಧಾನ ಮಂತ್ರಿ ಜೀವಗುಪ್ತ ನನ್ನು ಕೆಲಮಂದಿ ಸೈನಿಕರನ್ನು ಜತೆಗೆ ಕೊಟ್ಟು ಕಳುಹಿಸಿ ದ್ದೇನೆ. ಹಾಗಾದರೆ ಅವರೆಲ್ಲಾ ಏನಾದರು?" ಎಂದನು.

ರಾಜನ ಪ್ರಶ್ನೆಗೆ ಮರ್ಕಟನು ಒಮ್ಮೆ ಕೀಚ್ಚೆಂದು ನಗುವನ್ನು ಹಾರಿಸಿ, "ಈಗ ಮಹಾರಾಜನ ತಲೆಗೆ ನನ್ನ ಮಾತಿನ ಅರ್ಥ ಏರಿತು. ನಿಮ್ಮ ಆ ಗುಂಪನ್ನೆಲ್ಲಾ ಕಾಳೀವರ್ಮನು ತನ್ನ ಕತ್ತಿಯಿಂದ, ಕರಡಿಕೆಂಗಣ್ಣ ಮಾಂತ್ರಿಕನು ತನ್ನ ಮಂತ್ರದಂಡ ದಿಂದ...ಅಂದಹಾಗೆ ಎಲ್ಲಿ ನನ್ನ ಮಂತ್ರದಂಡ?" ಎಂದು ಹೆದರಿದವನಂತೆ ಸುತ್ತಲೂ ನೋಡಿ ಕಾವಲು ಗಾರರ ಮುಖ್ಯಸ್ಥನ ಬಳಿಗೆ ಹಾರಿ, "ನೀನು ತಾನೇ ನನ್ನನ್ನು ಅಟಕಾಯಿಸಿ ಇಲ್ಲಿಗೆ ಕರೆದು ತಂದೆ? ಎಲ್ಲಿ ಹೋಯಿತು ನನ್ನ ಕೈಯಲ್ಲಿದ್ದ ಮಂತ್ರದಂಡ?" ಎಂದು ಅವನ ಕುತ್ತಿಗೆ ಹಿಡಿದನು.

ಕಾವಲಿನ ನಾಯಕನು ಮರ್ಕಟನ ಹಿಡಿತದಿಂದ ಬಿಡಿಸಿಕೊಳ್ಳಲು ಒದರಾಡುತ್ತ "ಮರ್ಕಟಪ್ರಭೋ! ಮಂತ್ರದಂಡದ ಸಂಗತಿ ನನಗೇನು ಗೊತ್ತು? ನಾನರಿಯೆನಲ್ಲಾ! ಮಹಾಪ್ರಭೂ! ಜೀವದಾನ! ಜೀವದಾನ! ನನ್ನ ಪ್ರಾಣ ರಕ್ಷಿಸಿರಿ!" ಎಂದು ಮೊರೆಯಿಡ ತೊಡಗಿದನು.



ಆಗ ಸಭೆಯಲ್ಲಿದ್ದವರಲ್ಲಿ ಇಬ್ಬರು ಧೈರ್ಯಶಾಲಿ ಗಳಾದ ಬಲಶಾಲಿಗಳು ತಟ್ಟನೆ ಹೋಗಿ, ಮಾಯಾ ಮರ್ಕಟನ ಕೈಗಳನ್ನೂ ನಡುವನ್ನೂ ಹಿಡಿದು ಈಚೆಗೆ ಎಳೆದು, "ರಾಜ್ಯದಲ್ಲಿ ಮನುಷ್ಯರ ಪ್ರಾಣ ತೆಗೆಯುವ ಹಕ್ಕು ನಮ್ಮ ಮಹಾರಾಜರೊಬ್ಬರಿಗೇ ಇದೆ. ಅವರ ಮುಂದೆ ನೀನು ಹೀಗೆ ಅವಸರಪಡುವುದು ಕಾನೂನಿಗೆ ವಿರೋಧ" ಎಂದರು.

ಮಾಯಾಮರ್ಕಟನು ಕೋಪದಿಂದ ಕರಕರನೆ ಹಲ್ಲು ಕಡಿದು, "ಜಿತಕೇತು ಮಹಾರಾಜಾ, ಕಿವಿ ಗೊಟ್ಟು ಕೇಳು! ಸಂಗತಿಯನ್ನು ಎರಡೇ ಮಾತಿನಲ್ಲಿ ಹೇಳುತ್ತೇನೆ. ನೀನು ಇಲ್ಲಿ ನಗರ ದ್ವಾರಗಳನ್ನು ಹಾಕಿಕೊಂಡು, ಸಭೆಯಲ್ಲಿ ಒಡ್ಡೋಲಗ ನಡೆಸುತ್ತಾ ವಿನೋದ ಹರಟೆಗಳಲ್ಲಿ ಕಾಲಕ್ಷೇಪ ಮಾಡುತ್ತಿರುವೆ. ಆ ಕಾರಣದಿಂದ ನಗರದ ಹೊರಗೆ ಏನೇನು ನಡೆ ಯುವುದೆಂದು ನಿನಗೆ ಗೊತ್ತಾಗುವುದಿಲ್ಲ. ನಿನ್ನ ಕಟುಕರ ನಾಯಕ ಈಗ ಕರಡಿ ರೂಪದಲ್ಲಿದ್ದಾ



ನೆಂಬುದು ಗೊತ್ತೇ ? ಅವನೂ, ಕಾಳೀವರ್ಮನೂ, ಕರಡಿಕೆಂಗಣ್ಣ ಮಾಂತ್ರಿಕನೂ ಒಂದಾಗಿದ್ದಾರೆಂಬುದನ್ನು ಬಲ್ಲೆಯಾ ? ಅವರು ಒಬ್ಬ ರಾಕ್ಷಸನನ್ನೂ ಕರೆದುಕೊಂಡು ಈ ನಗರದ ಮೇಲೆ ದಾಳಿ ಮಾಡಲು ಬರುತ್ತಿದ್ದಾರೆಂದು ಈಗಾದರೂ ತಿಳಿದು ತಕ್ಕ ಬಂದೋಬಸ್ತು ಮಾಡು. ಸಾಧ್ಯವಾದಷ್ಟು ಬೇಗನೇ ಮಾಡು." ಎಂದನು.

ರಾಕ್ಷಸನ ಹೆಸರು ಕೇಳಿದ ಕೂಡಲೇ ಜಿತಕೇತು ರಾಜನು ಅದುರಿಬಿದ್ದು, "ರಾಕ್ಷಸನೇ ? ಅಂಥವರು ನಿಜಕ್ಕೂ ಇದ್ದಾರೇನು ? ಎಲ್ಲಿಯೋ ಕಥೆಯಲ್ಲಿ ಕೇಳಿದ್ದೇನೆಯೇ ಹೊರತು ಈ ಕ್ಷಣದವರೆಗೂ ಕಣ್ಣೆದಿರು ಕಂಡಿಲ್ಲವಲ್ಲ !" ಎಂದನು.

ಮಾಯಾಮರ್ಕಟನು ವಿಕಟವಾಗಿ ನಗುತ್ತ, "ಕಣ್ಣಾರೆ ನೋಡಬೇಕೆಂಬ ನಿನ್ನ ಕೋರಿಕೆ ಇನ್ನು ಸ್ವಲ್ಪ ಹೊತ್ತಿನಲ್ಲಿಯೇ ತೀರಿಹೋಗುತ್ತದೆ. ಆದರೆ ಆ ಭಯಂಕರ ರಾಕ್ಷಸನನ್ನು ನೋಡಿದ ಮೇಲೆ, ನೋಡಿದೆನೆಂಬ ತೃಪ್ತಿಯನ್ನು ನೀನು ಅನುಭವಿಸುವುದು ಸತ್ತ ಮೇಲೆಯೇ ! ನೋಡಿದ ಮೇಲೆ ಒಂದೆರಡು ಕ್ಷಣ ಬದುಕಿದ್ದರೆ ಹೆಚ್ಚು !" ಎಂದನು.

ಜಿತಕೇತು ರಾಜನ ಮಂತ್ರಿಗಳಿಬ್ಬರೂ ಭೀತಿಯಿಂದ ನಡುಗುತ್ತ ಮುಖಮುಖ ನೋಡಿಕೊಂಡು. "ಮಹಾರಾಜರೇ ! ನಾವು ಈ ಅಪಾಯದಿಂದ ಪಾರಾಗುವ ಬಗೆ ಹೇಗೆ ? ಆದಷ್ಟು ಬೇಗ ಆಲೋಚಿಸಬೇಕಾಗಿದೆಯಲ್ಲ !" ಎಂದರು.

"ಇದು ರಾಜನಾದ ನಾನು ಮಂತ್ರಿಗಳಾದ ನಿಮ್ಮನ್ನು ಕೇಳಬೇಕಾದ ಪ್ರಶ್ನೆ. ನೀವು ಅತಿಕ್ರಮಿಸಿ ನನ್ನನ್ನೇ ಕೇಳಿದ್ದರಿಂದ ಈಗಲೇ ನಿಮ್ಮನ್ನು ಉದ್ಯೋಗದಿಂದ ತೊಲಗಿಸಿದ್ದೇನೆ. ಪ್ರಧಾನಮಂತ್ರಿ ಜೀವಗುಪ್ತನಿರುತ್ತಿದ್ದರೆ ತಕ್ಕ ಮಂತ್ರಾಲೋಚನೆ ಮಾಡಿ ಬರಲಿರುವ ಆಪತ್ತಿನಿಂದ ಎಲ್ಲರನ್ನೂ ಕಾಪಾಡುತ್ತಿದ್ದ." ಎಂದು ಹೇಳಿ ಜಿತಕೇತುರಾಜನು ಸಿಂಹಾಸನದ ಕಡೆಯಿಂದ ಕದಲಿ ಮಾಯಾಮರ್ಕಟನ ಬಳಿಗೆ ಬರುತ್ತ, ಸಭಿಕರನ್ನು ನೋಡಿ, "ಸುದ್ದಿ ಕೇಳಿದಿರಷ್ಟೆ ? ನಮ್ಮ ನಗರದ ಮೇಲೆ ಮಾಂತ್ರಿಕನೂ ರಾಕ್ಷಸನೂ ಹೋರಾಟಕ್ಕೆ ಬರುತ್ತಿದ್ದಾರೆ. ಈಗ ಏನು ಮಾಡಿದರೆ ಚೆನ್ನಾಗಿರುತ್ತದೆ ? ನಿಮಗೇನಾದರೂ ಉಪಾಯ ತೋರಿದರೆ ಹೇಳಿರಿ" ಎಂದನು.

ಸಭೆಯವರಾರೂ ಉತ್ತರ ಕೊಡಲಿಲ್ಲ. ಪ್ರತಿಯೊಬ್ಬರ ಮನಸ್ಸಿನಲ್ಲಿಯೂ ರಾಕ್ಷಸನ ಆಕಾರವೂ, ತಾವೂ ತಮ್ಮ ಹೆಂಡಿರು ಮಕ್ಕಳೂ ಅವನಿಗೆ ಆಹಾರವಾಗುವ ಘೋರ ಚಿತ್ರಗಳೂ, ಮೂಡ ತೊಡಗಿದ್ದುವು. ಆ ರಾಕ್ಷಸನು ನಗರದೊಳಗೆ ಪ್ರವೇಶಿಸುವುದಕ್ಕೆ ಮೊದಲೇ ತಮ್ಮ ಮನೆಯೊಳಗಿದ್ದ ಪ್ರಿಯರಾದವರನ್ನೂ, ಧನವನ್ನೂ, ಮುಖ್ಯ ವಸ್ತುಗಳನ್ನೂ ತೆಗೆದುಕೊಂಡು ಓಡಿಹೋಗುವುದು ಹೇಗೆಂದು ಲೆಕ್ಕ ಹಾಕಿಕೊಂಡಿದ್ದರು. ರಾಕ್ಷಸನು ಬಂದುಬಿಟ್ಟರೆ ರಾಜನು ಇದ್ದರೂ ಒಂದೇ, ಇಲ್ಲದಿದ್ದರೂ ಒಂದೇ!

ಜಿತಕೇತುರಾಜನು ಸಭಿಕರಿಂದ ಯಾವ ಪ್ರತ್ಯುತ್ತರವೂ ಬಾರದಿರುವುದನ್ನು ನೋಡಿ, ಭಯಕಂಪಿತರಾಗಿ ಏನೂ ಹೇಳದಿರುವರೆಂದು ತಿಳಿದು, ಮಾಯಾ ಮರ್ಕಟನ ಬಳಿಗೆ ಹೋಗಿ, "ರೂಪದಲ್ಲಿ ನೀನು ಮರ್ಕಟದ ಹಾಗಿದ್ದರೂ ಮಂತ್ರಾಲೋಚನೆಯಲ್ಲಿ ನನ್ನ ಪ್ರಧಾನಮಂತ್ರಿ ಜೀವಗುಪ್ತನಿಗೆ ಸಾಟಿಯಾಗುವ ಹಾಗಿರುವೆ. ನೀನು ಹೇಳುವುದನ್ನು ನೋಡಿದರೆ ಆ ಮಂತ್ರಿಯನ್ನು ರಾಕ್ಷಸನು ಹೊಟ್ಟೆಗೆ ಸೇರಿಸಿಕೊಂಡಿರಬೇಕು. ಆದ್ದರಿಂದ ಈಗ ನಿನ್ನನ್ನೇ ನನ್ನ ಪ್ರಧಾನಮಂತ್ರಿಯಾಗಿ ನಿಯಮಿಸುತ್ತೇನೆ. ಶತ್ರು ಸಂಹಾರಕ್ಕೂ, ರಾಜ್ಯ ವಿಸ್ತರಣೆಗೂ ತಕ್ಕುದಾದ ಒಂದು ಒಳ್ಳೆಯ ಪಥಕವನ್ನು ತತ್‌ಕ್ಷಣವೇ ಆಲೋಚಿಸಿ ಅಮಲು ಮಾಡಿಬಿಡು. ನಿನಗೆ ಪೂರ್ಣ ಅಧಿಕಾರ ಕೊಟ್ಟಿದ್ದೇನೆ. ಏಕೆಂದರೆ, ನೀನು ನಮ್ಮ ಹಿತಚಿಂತನೆಯಿಂದಲೇ ಮುಂದಾಗಿ ಬಂದು, ಈ ಸುದ್ದಿ ನಮಗೆ ತಿಳಿಸಿದೆ!" ಎಂದು ಮರ್ಕಟನ ಕೈ ಹಿಡಿದು ಸಿಂಹಾಸನದ ಬಳಿಗೆ ನಡೆಯಿಸಿಕೊಂಡು ಹೋದನು.

ಅದನ್ನು ನೋಡಿ ಇಡೀ ಸಭೆಯೇ ಜೀವಬಂದಂತೆ ಕರತಾಡನ ಧ್ವನಿಯನ್ನು ಎಬ್ಬಿಸಿತು. ಮಾಯಾ ಮರ್ಕಟನು ಅಭಯ ದಾನ ಮಾಡುವವನ ಹಾಗೆ, ಕತ್ತಿಯನ್ನು ಬಾಯಿಯಲ್ಲಿ ಹಿಡಿದುಕೊಂಡು, ಎರಡು ಕೈಗಳನ್ನೂ ಮೇಲೆತ್ತಿ ಆಡಿಸಿದನು. ಆ ಮೇಲೆ ಕತ್ತಿಯನ್ನು ಬಾಯಿಯಲ್ಲಿ ಇಟ್ಟುಕೊಂಡೇ ಏನೋ ಹೇಳಲು ಹೋದಾಗ ಕತ್ತಿ ಝಣಾಲ್ಲೆಂದು ಕೆಳಗೆ ಬಿತ್ತು. ಕೂಡಲೇ ಮಾಯಾಮರ್ಕಟನು ತಲೆಯನ್ನು ಬಗ್ಗಿಸದೆ, ಬಾಲದಿಂದಲೇ ಬಿದ್ದ ಕತ್ತಿಯನ್ನು ಸುತ್ತಿ ಹಿಡಿದು, ಮೇಲಕ್ಕೆತ್ತಿ ನಿಲ್ಲಿಸಿಕೊಂಡು, "ಜೈ, ತಾಂತ್ರಿಕ ಗುರೋ!" ಎಂದನು. ಅದೇ ಹೊತ್ತಿನಲ್ಲಿ ಸಭಾ ದ್ವಾರದ ಹತ್ತಿರ ಏನೋ ಕಲಕಲರವ ಎದ್ದಿತು. ರಾಜನೂ ಸಭಾಸದರೂ ಆ ಕಡೆಗೆ ದೃಷ್ಟಿ ಹರಿಸಿದರು.



ಮಂತ್ರಿ ಜೀವಗುಪ್ತನು ಹರಿದುಹೋದ ದುಸ್ತುಗಳಿಂದ, ಶಿರಸ್ತ್ರಾಣವಿಲ್ಲದೆ ಕೆದರಿದ ತಲೆಯಿಂದ, ಉಸಿರು ಬಿಡುತ್ತ ಸಭೆಯೊಳಗೆ ಪ್ರವೇಶಿಸಿದನು. ಅವನ ಹಿಂದೆ ಸಾಮಂತ ಸೂರ್ಯಭೂಪತಿಯೂ, ಇಬ್ಬರು ಸೈನಿಕರೂ ಸಹ ಇದ್ದರು. ಆ ಸ್ಥಿತಿಯಲ್ಲಿ ಜೀವಗುಪ್ತನನ್ನು ನೋಡಿ ಸಭಿಕರು, "ನಮ್ಮ ಪ್ರಧಾನಮಂತ್ರಿಗಳೂ ಸಜೀವರಾಗಿದ್ದಾರೆ! ರಾಕ್ಷಸನಿಗೆ ಮೋಸ ಕೊಟ್ಟು ಹೇಗೋ ಪಾರಾಗಿ ಬಂದಿದ್ದಾರೆ!" ಸುಸ್ವಾಗತ! ಸುಸ್ವಾಗತ!" ಎನ್ನುತ್ತ ಉತ್ಸಾಹದಿಂದ ಕೇಕೇ ಹಾಕಿ[illegible]ತು.

ಮಾ[illegible]ಟನು ಕೋಪದಿಂದ ಕತ್ತಿಯನ್ನು ಎತ್ತಿ ಕುಣಿಸುತ್ತ, "ಎಲೋ ಮಹಾ ಮೂರ್ಖರಾದ ನಗರ ಪ್ರಮುಖರೇ! ಈಗ ತಾನೇ ನಿಮ್ಮ ರಾಜನು ನನ್ನನ್ನು ಪ್ರಧಾನಮಂತ್ರಿಯಾಗಿ ನಿಯಮಿಸಿದ್ದು? ಮರೆತಿರೇನು? ನನಗೆ ಜಯಕಾರ ಮಾಡುವುದನ್ನು ಬಿಟ್ಟು ಅರೆ ಜೀವನಾಗಿ ಬಂದವನನ್ನು ನೋಡಿ

ಕೇಕೇ ಹಾಕುವಿರೇನು?" ಎಂದು ಹೇಳಿ ಜಿತಕೇತುವನ್ನು ನೋಡಿ, "ರಾಜಾ, ಇದಕ್ಕೆ ನೀನೇನು ಹೇಳುವಿ? ಇಲ್ಲಿ ಈಗ ಪ್ರಧಾನ ಮಂತ್ರಿಯಾಗಿರುವವನು ನಾನೋ. ಅಲ್ಲ ಶತ್ರುವಿಗೆ ಬೆನ್ನು ತೋರಿಸಿ ಲಜ್ಜೆಯಿಲ್ಲದೆ ಓಡಿ ಬಂದ ಈ ಜೀವಗುಪ್ತನೋ? ಬೇಗ ನಿರ್ಣಯಮಾಡಿ ಹೇಳಿಬಿಡು." ಎಂದು ಕೇಳಿದನು.

"ಈ ಮರ್ಕಟ ಮಹಾನುಭಾವನೇ ನಮ್ಮ ರಾಜ್ಯದ ಪ್ರಧಾನಮಂತ್ರಿ. ಈ ಮಾತು ಬೇಕಾದರೆ ಇನ್ನೊಂದು ಸಾರಿ ಹೇಳುತ್ತೇನೆ. ಜೀವಗುಪ್ತನು ಈ ಕ್ಷಣದಿಂದ ನಗರದ ಒಬ್ಬ ಸಾಮಾನ್ಯ ಪ್ರಜೆ. ಇದಕ್ಕೇನೂ ಸಂದೇಹವಿಲ್ಲ" ಎಂದನು ಜಿತಕೇತು ಮಹಾರಾಜ.

ಈ ಮಾತು ಕೇಳಿ ಮಂತ್ರಿ ಜೀವಗುಪ್ತನು ಕೋಪದಿಂದ, ಏನು ಬಂದರೂ ಸಿದ್ಧನಾಗುವವನಂತೆ, ಕತ್ತಿ ಹಿರಿದು ಮಾಯಾಮರ್ಕಟನನ್ನು ಕೆಂಗಣ್ಣಿನಿಂದ ನೋಡುತ್ತ "ಈ ಮುಚ್ಚು ಕೋತಿ ಭಂಡ ಚಂದ್ರಶಿಲಾ ನಗರದ ಪ್ರಧಾನಮಂತ್ರಿಯೇ? ಇವನನ್ನು ರಾಕ್ಷಸನ ಕಲ್ಲಿನ ಗದೆಯ ಏಟಿನಿಂದ ಕಾಪಾಡಿದವನು ನಾನು. ಅಂಥವನು ನನ್ನ ಮುಂದೆಯೇ ನನ್ನನ್ನು ಹೀಯಾಳಿಸಿ ಮಾತಾಡುವುದನ್ನು ನಾನೆಂದಿಗೂ ಸಹಿಸಲಾರೆ! ಈಗ ನಾನೇ ಕೈಯಾರೆ ಇವನ ಹುಚ್ಚು ಕೋತಿ ತಲೆಯನ್ನು ಹಾರಿಸಿಬಿಡುತ್ತೇನೆ!" ಎಂದು ಗರ್ಜಿಸುತ್ತ ಮರ್ಕಟನ ಕಡೆಗೆ ಧಾವಿಸಿ ಬಂದನು.

ಜಿತಕೇತು ರಾಜನು "ನಿಲ್ಲು ಜೀವಗುಪ್ತಾ! ಇವನು ಮಾಮೂಲು ಮರ್ಕಟನಲ್ಲ. ಭ್ರಾಂತಿಮತಿ ಎಂಬ ಮಹಾತಾಂತ್ರಿಕ. ಅವನ ಗೊಡವೆಗೆ ಬಂದರೆ ನಿನಗೆ ಮರಣ ದಂಡನೆ!" ಎಂದನು ಕೋಪದಿಂದ.

ಆ ರಾಜನ ಮಾತನ್ನು ಜೀವಗುಪ್ತನು ಲಕ್ಷ್ಯ ಮಾಡದೆ, "ಇವನಾರೆಂದು ನಿಮಗಿಂತಲೂ ಹೆಚ್ಚಾಗಿ ನನಗೊಗ್ಗೊತ್ತು, ಈ ತಾಂತ್ರಿಕ ಮಂಗ ಕದ್ದುಕೊಂಡು ಬಂದ ಕರಡಿಕೆಂಗಣ್ಣನ ಮಂತ್ರದಂಡ ಎಲ್ಲಿದೆ? ಅದಿಲ್ಲದ ಮೇಲೆ ಇವನು ಸಾಧಾರಣ ಮರಕೋತಿಗಿಂತಲೂ ನಿಸ್ಸಹಾಯನೇ! ನೀಚಬುದ್ಧಿಯವನು! ಇವನ ತಲೆಯನ್ನೂ ಬಾಲವನ್ನೂ ನಾನೇ ಕಡಿಯುತ್ತೇನೆ. ನನ್ನ ತಲೆ ಹೋದರೂ ಚಿಂತಿಲ್ಲ!" ಎಂದು ಮರ್ಕಟನ ಮೇಲೆ ಎಗರಿದನು.

ಮಾಯಾಮರ್ಕಟನು, "ಜೈ ತಾಂತ್ರಿಕ ಗುರೋ!" ಎನ್ನುತ್ತ ಬಾಲವನ್ನು ಮಿಂಚಿನಂತೆ ತಿರುಗಿಸಿ ಜೀವಗುಪ್ತನ ಕೈಯಲ್ಲಿದ್ದ ಕತ್ತಿಯನ್ನು ಬಾಲದಿಂದಲೇ ಎಳೆದೆತ್ತಿ, ಇನ್ನೊಂದು ಕೈಯಲ್ಲಿದ್ದ ಕತ್ತಿಯನ್ನೂ ಮೇಲೆತ್ತಿ ಅಟ್ಟಹಾಸ ಮಾಡಿದನು. ಇಡಿಯ ಸಭೆಯೇ ದಂಗುಬಡೆದಂತಿತ್ತು. —(ಇನ್ನು ಇದೆ)





# ಕರಡಿಕೆಂಗಣ್ಣ

## ೧೮

[ ಮಾಯಾಮಾರ್ಕಟನು ಜಿತಕೇತು ರಾಜನಿಗೆ ನಗರಕ್ಕೆ ಅಪಾಯ ಬರಲಿದೆ ಎಂದು ಹೇಳಿ ಎಚ್ಚರಿಸಿದನು. ಆ ಶತ್ರುಗಳಲ್ಲಿ ರಾಕ್ಷಸನೊಬ್ಬನಿರುವನೆಂದು ಕೇಳಿ, ರಾಜನು ಮಾಯಾಮಾರ್ಕಟನನ್ನೇ ಪ್ರಧಾನ ಮಂತ್ರಿಯನ್ನಾಗಿ ಮಾಡಿದನು. ಅದನ್ನು ನೋಡಿ ಮಂತ್ರಿ ಜೀವಗುಪ್ತನು ಮರ್ಕಟನ ಮೇಲೆ ಕತ್ತಿಯೆತ್ತಲು, ಮರ್ಕಟನು ಆ ಕತ್ತಿಯನ್ನು ಎಳೆದುಕೊಂಡು ತನ್ನ ಕತ್ತಿಯನ್ನು ಜೀವಗುಪ್ತನ ಮೇಲೆ ಎತ್ತಿದನು.]

ಮಾಯಾಮಾರ್ಕಟನ ಬಾಲದ ತುದಿಯಲ್ಲಿಯೂ, ಕೈಯಲ್ಲಿಯೂ ಎತ್ತಿ ಹಿಡಿಯಲ್ಪಟ್ಟ ಬಿಚ್ಚುಗತ್ತಿಗಳನ್ನು ನೋಡಿ, ಸಭೆಯೊಳಗೆ ಹಾಹಾಕಾರವೆದ್ದಿತು. ಬಹುದೊಡ್ಡ ಒಳರಗಳೆಯಾಗುವುದೆಂದು ಅಂಜಿದ ಜಿತಕೇತು ರಾಜನು ಅವಸರದಿಂದ ಬಂದು ಮರ್ಕಟನ ಕೈಯನ್ನು ಹಿಡಿದುಕೊಂಡು, "ಮರ್ಕಟಾಮಾತ್ಯಾ ! ಅವಸರಪಡಬೇಡ. ಸಭಾಭವನದಲ್ಲಿ ನೆತ್ತರು ಚಿಮ್ಮಿದರೆ ರಾಜ್ಯಕ್ಕೇ ಕೆಡುಕಾಗುತ್ತದೆ. ಅದೂ ಅಲ್ಲದೆ ನಾನು ಈ ಜೀವಗುಪ್ತನಿಗೆ ಶಿರಚ್ಛೇದನ ಶಿಕ್ಷೆ ವಿಧಿಸಿದ್ದೇನೆ. ಅದನ್ನು ಅಮಲು ಪಡಿಸಬೇಕಾದವನು ಶಿರೀಷವನದ ಕಟುಕನಾಯಕ. ಬೇರೆ ಯಾರಿಂದಾದರೂ ಅದು ಅಮಲಾದರೆ ಕೊಲೆ ಪಾತಕವೆನಿಸಿ ಬೇಡದ ಸಿಕ್ಕಾಟ ಬರುತ್ತೆ." ಎಂದನು.

"ಒಳ್ಳೆಯದು ರಾಜಾ. ನಿನ್ನ ಮಾತಿಗೆ ಗೌರವ ಕೊಡಬೇಕಾದ್ದು ನ್ಯಾಯವೇ." ಎಂದು ಮರ್ಕಟನು ತನ್ನ ಕತ್ತಿಯನ್ನು ಒರೆಯೊಳಗೆ ಇಟ್ಟುಕೊಂಡು, ಜೀವಗುಪ್ತನನ್ನು ನೋಡಿ, "ಎಲೋ, ಹಳೆಯ ಅಮಾತ್ಯಾ ! ಸದ್ಯಕ್ಕೆ ಬದುಕಿದೆ. ಓಡಿಹೋಗು. ಈ ಕೂಡಲೇ ರಾಜ್ಯವನ್ನು ಬಿಟ್ಟು ಹೋಗಿಬಿಡು. ನನ್ನ ಕಣ್ಣಿಗೆ ಎಂದೂ ಬೀಳಬೇಡ" ಎಂದನು ಕಣ್ಣು ತಿರುಗಿಸುತ್ತ.



ಮರ್ಕಟನು ಬಾಲದ ತುದಿಯಿಂದ ಕೆಳಗೆ ಕುಕ್ಕಿದ ತನ್ನ ಕತ್ತಿಯನ್ನು ತೆಗೆದುಕೊಂಡು ಒರೆಯೊಳಗೆ ತುರುಕಿಕೊಂಡನು. ಜೀವಗುಪ್ತನು ರಾಜನನ್ನು ಕೋಪದಿಂದೊಮ್ಮೆ ನೋಡಿ, "ಮಹಾರಾಜರೇನೋ ನನಗೆ ಶಿರಚ್ಛೇದನ ಶಿಕ್ಷೆ ಕೊಟ್ಟೆನೆನ್ನುತ್ತಾರೆ. ಈ ಮರ್ಕಟನೇನೋ ದೇಶಬಿಟ್ಟು ಹೋಗಲು ಹೇಳು ತ್ತಾನೆ. ಯಾರ ಮಾತನ್ನು ಕೇಳಲಿ ? ಸಭಾಸದರಾದ ಓ ಪ್ರಮುಖ ಮಹಾನುಭಾವರೆ! ನಾನೀಗ ಏನು ಮಾಡಬೇಕು ? ನೀವು ಹೇಳಿರಿ" ಎಂದು ಸಭಿಕರನ್ನು ನೋಡಿ ಕೇಳಿದನು.

ಸಭೆಯವರು ಇಕ್ಕಟ್ಟಿನಲ್ಲಿ ಸಿಕ್ಕಿಬಿದ್ದವರಂತಿದ್ದರು. ರಾಜಾಜ್ಞೆಯನ್ನು ಬಲಪಡಿಸಬೇಕೋ. ಹೊಸತಾಗಿ ಮಂತ್ರಿಯಾದ ಮರ್ಕಟನ ಮಾತಿಗೆ ಹೌದೆನ್ನಬೇಕೋ ಗೊತ್ತಾಗದೆ, ಒಬ್ಬರನ್ನೊಬ್ಬರು ನೋಡಿಕೊಂಡು ಸುಮ್ಮನಿದ್ದುಬಿಟ್ಟರು. ರಾಜನೆಂದರೂ ಭಯವೇ, ಮರ್ಕಟಾಮಾತ್ಯನ ರೀತಿ ಅದಕ್ಕಿಂತ ಹೆಚ್ಚು ಭಯ!

ಆಗ ಸಾಮಂತ ರಾಜನಾದ ಸೂರ್ಯಭೂಪತಿ ಜಿತಕೇತು ರಾಜನಿಗೆ ನಮಸ್ಕಾರಮಾಡಿ, "ಮಹಾ ರಾಜರೇ! ನನ್ನ ಹೆಸರು ಸೂರ್ಯಭೂಪತಿ. ಸದ್ಯಕ್ಕೆ ಈ ಜೀವಗುಪ್ತನನ್ನು ಕ್ಷಮಿಸಿಬಿಟ್ಟುಬಿಡುವುದು ಒಳ್ಳೆಯದು. ಈಗ ಅವಸರದಿಂದ ಮಾಡಬೇಕಾದುದು ನಗರ ರಕ್ಷಣೆಯ ವಿಷಯ. ಏಕೆಂದರೆ, ನಿಮ್ಮ ನಗರದ ಮೇಲೆ ದಾಳಿ ಬರುವವರಲ್ಲಿ ಉದಯಗಿರಿ ರಾಜನಾದ ದುರ್ಮುಖನೂ ಇದ್ದಾನೆ. ಆದುದರಿಂದ ಮೊದಲು ನಗರ ರಕ್ಷಣೆಗೆ ತಕ್ಕ ಏರ್ಪಾಡು ಮಾಡಿಸುವುದು ಒಳ್ಳೆಯದು" ಎಂದನು.

ದುರ್ಮುಖರಾಜನ ಹೆಸರು ಕೇಳುತ್ತಲೇ ಜಿತ ಕೇತು ರಾಜನು ಮೆಟ್ಟಿಬಿದ್ದವನಂತೆ, ನಗರ ದ್ವಾರದ ಕಾವಲು ಭಟರ ನಾಯಕನನ್ನು ನೋಡಿ, "ಎಲೋ, ನೀನು ಬೇಗನೇ ಹೋಗಿ ನಗರ ದ್ವಾರವನ್ನು ಮುಚ್ಚಿಸಿ ಶತ್ರುಗಳು ಒಳಗೆ ಬಾರದಂತೆ ನಿನ್ನ ಸಾಮರ್ಥ್ಯ ತೋರಿಸು. ನಮ್ಮ ಸೇನಾನಾಯಕನ ಹತ್ತಿರ, ಸೈನ್ಯಗಳನ್ನು ಸಿದ್ಧಪಡಿಸಿ ಬುರುಜುಗಳನ್ನೂ, ಅಗಳತೆಗಳನ್ನೂ ಕಾಪಾಡುವಂತೆ ನಾನು ಆಜ್ಞೆ ಮಾಡಿರುವೆನೆಂದು ಹೇಳು" ಎಂದನು.

"ಅಪ್ಪಣೆ ಮಹಾರಾಜಾ!" ಎಂದು ಬಾಗಿ ನಮಸ್ಕರಿಸಿ ಕಾವಲುಗಾರರ ನಾಯಕನು ಜೀವ ಉಳಿದದ್ದೇ ದೊಡ್ಡದೆಂಬ ಹಾಗೆ ಅಲ್ಲಿಂದ ಹೊರಟು ಹೋದನು. ಜಿತಕೇತು ರಾಜನು ಸಾಮಂತ ಸೂರ್ಯ ಭೂಪತಿಯ ಕಡೆಗೆ ತಿರುಗಿ, "ಆ ದುರ್ಮುಖ ರಾಜನ ಸಂಗತಿ ನಿನಗೆ ಗೊತ್ತಿರುವುದೆಂದಾಯಿತು. ಅವನ ಬಲವೂ ನಿನಗೆ ಗೊತ್ತಿದೆ. ಅವನು ದೊಡ್ಡ ಸೈನ್ಯ ತೆಗೆದುಕೊಂಡು ಬರುತ್ತಿದ್ದಾನೆಂದರೆ, ಎಷ್ಟು ದೊಡ್ಡ ಸೈನ್ಯವಿದೆ ?" ಎಂದು ಕೇಳಿದನು.

ಸೂರ್ಯಭೂಪತಿ ದಿಗಿಲು ಬಡೆದ ಮುಖದಿಂದ, "ಅದನ್ನೇನು ಹೇಳಲಿ ಮಹಾರಾಜಾ! ಬಹಳ ಕಾಲದಿಂದ ನಾನು ಆ ಹಾಳು ರಾಜನ ಸಾಮಂತ

ನಾಗಿದ್ದವನು. ಕಡೆಗೆ ಅವನು ರಾಜ್ಯವಾಳಲು ತಕ್ಕವನಲ್ಲವೆಂದು ತಿರುಗಿಬಿದ್ದು ಅವನ ನಗರವನ್ನು ಆಕ್ರಮಿಸಿ ಹಿಡಿದುಕೊಂಡೆ. ಆಗ ದುರ್ಮುಖಿನ ಬಹಳಮಂದಿ ಸೈನಿಕರು ನನಗೆ ಸಹಾಯಮಾಡಿದರು. ಆದರೆ ಮಧ್ಯದಲ್ಲಿ ಕಾಳೀವರ್ಮನೆಂಬ ಕ್ಷತ್ರಿಯ ಯುವಕನೂ ಕರಡಿಕಿಂಗಣ್ಣನೆಂಬ ಮಾಂತ್ರಿಕನೂ, ನರಭಲ್ಲೂಕನಾದವನೊಬ್ಬನೂ, ಕಾಡಿನ ದಾರಿ ಹೊಡಕ ಕಳ್ಳರೂ ಇಂತಹ ಪುಂಡ ಪೋಕರಿಗಳೆಲ್ಲಾ ಒಂದಾಗಿ ಬಂದು ನನ್ನನ್ನು ಕೋಟೆಯೊಳಗಿನಿಂದ ಓಡಿಸಿಬಿಟ್ಟರು. ಆ ದುರ್ಮುಖಿರಾಜನಿಗೆ ಮುಖ್ಯ ಸಹಾಯಕರಾದವರೆಂದರೆ ಈ ಬಗೆಯ ಹಾಳು ಮೃಗ ಮನುಷ್ಯರೇ. ದೊಡ್ಡ ಸೈನ್ಯವೇನೂ ಅವನಿಗಿಲ್ಲ. ಸರಿಯಾದ ಸೈನ್ಯವಾದರೆ ನಾನೇಕೆ ಸೋತು ಓಡುತ್ತಿದ್ದೆ? ತುಂಬಾ ಆಕ್ರಮ!" ಎಂದನು.

ಸೂರ್ಯಭೂಪತಿ ಹೇಳಿದ ಮಾತುಗಳನ್ನು ಕೇಳಿ ಜಿತಕೇತುರಾಜನು ಸ್ವಲ್ಪ ಹೆದರಿದವನಾಗಿ ಮಾಯಾಮರ್ಕಟನನ್ನು ನೋಡಿ, "ಮರ್ಕಟಾಮಾತ್ಯಾ! ಈ ಸೂರ್ಯಭೂಪತಿ ಹೇಳುವುದನ್ನು ಕೇಳುವಾಗ, ಶತ್ರುಗಳು ಕೆಲವೇ ಮಂದಿಗಳಾದರೂ ಮಹಾ ಬಲಿಷ್ಠರೂ, ದೊಡ್ಡ ಸಾಹಸಿಗಳೂ ಎಂದು ಗೊತ್ತಾಗುತ್ತದೆ. ನಾವು ಕೋಟೆಯ ಹೊರಗಿನ ನಗರವನ್ನು ರಕ್ಷಿಸುವ ವಿಷಯ ಆ ಮೇಲೆ ನೋಡೋಣ. ಮೊದಲು ಈ ಕೋಟೆಯೊಳಗಿನ ವಠಾರವನ್ನು ಕಾಪಾಡಿಕೊಳ್ಳುವ ಮಾರ್ಗವೇನೆಂದು ಬೇಗ ನೋಡಬೇಕು. ಅದಕ್ಕೆ ನಿನ್ನ ಮಂತ್ರಾಲೋಚನೆ ಅತ್ಯಗತ್ಯ. ಬೇಗ ಆಲೋಚನೆ ಮಾಡಿ ಏನು ಮಾಡಬೇಕೆಂದು ಹೇಳಿಬಿಡು" ಎಂದನು.

ಎಲ್ಲವನ್ನೂ ಕೇಳಿಕೊಂಡೂ ನೋಡಿಕೊಂಡೂ ಇದ್ದ ಮಾಯಾಮರ್ಕಟನು, ರಾಜನು ತನ್ನನ್ನೇ ನಂಬಿಕೊಂಡವನಂತೆ ಹೇಳಿದುದನ್ನು ಕೇಳಿ, ಅದೆಷ್ಟರ ವಿಷಯವೆಂಬಂತೆ ಒಮ್ಮೆ ಹಾರಿ, "ಓಯ್ ಮಹಾ



ರಾಜಾ! ಕೋಟೆಯ ರಕ್ಷಣೆಯನ್ನು ಕುರಿತು ನೀನೇನೂ ಹೆದರಬೇಡ. ಆ ಕರಡಿಕಿಂಗಣ್ಣನೂ, ಅವನ ಒತ್ತಾಸೆಯವರೂ ಸೂರ್ಯಭೂಪತಿಯ ಕೋಟೆಯೊಳಗೆ ಹೇಗೆ ಪ್ರವೇಶಿಸಿದರು ಗೊತ್ತಾ? ಆ ಕೋಟೆಯ ದ್ವಾರಕ್ಕೆ ಬೆಂಕಿ ಹಚ್ಚಿ ಸುಟ್ಟು! ಆದುದರಿಂದ ಈಗ ಮುಖ್ಯವಾಗಿ ಮಾಡಬೇಕಾದ್ದು ದ್ವಾರರಕ್ಷಣೆ. ಗೊತ್ತಾಯಿತೇ? ಬೆಂಕಿ ಹಿಡಿಯದ ಹಾಗೆ..." ಎನ್ನುವಷ್ಟರಲ್ಲಿ ರಾಜನು "ಗೊತ್ತಾಯಿತು. ಸಾಮಂತ ಸೂರ್ಯಭೂಪತೀ! ನೀನು ಒಂದುಸಾರಿ ದ್ವಾರ ರಕ್ಷಣೆಯನ್ನು ಸರಿಯಾಗಿ ನೋಡಿಕೊಳ್ಳದೆ ಸಿಕ್ಕಿದ ಸಿಂಹಾಸನವನ್ನು ಜಾರಬಿಟ್ಟವನಾದ್ದರಿಂದ, ನಿನ್ನನ್ನೇ ನಮ್ಮ ಕೋಟೆಯ ದ್ವಾರರಕ್ಷಣೆಗೆ ನಿಯಮಿಸುತ್ತೇನೆ. ಈ ಬಾಧ್ಯತೆಯನ್ನು ಸಾಮರ್ಥ್ಯದಿಂದ ನೆರವೇರಿಸಿದಿಯಾದರೆ, ನಿನ್ನನ್ನು ನನ್ನ ಪ್ರಧಾನ ಸಾಮಂತನನ್ನಾಗಿ ಮಾಡಿ ಗೌರವಿಸುತ್ತೇನೆ. ಬೇಗ ಹೋಗಿ ನಿನ್ನ ಸಾಮರ್ಥ್ಯವನ್ನು ತೋರಿಸು." ಎಂದನು.



"ಅಪ್ಪಣೆ ಮಹಾರಾಜರೇ!" ಎಂದು ಹೇಳಿ ಸೂರ್ಯಭೂಪತಿ ಅಲ್ಲಿಂದ ಹೊರಡಲು ಸಿದ್ಧನಾದನು. ಆಗ ಜೀವಗುಪ್ತನು ದೊಡ್ಡ ಕಂಠಸ್ವರದಿಂದ, "ಹಾಗಾದರೆ ಈಗ ನನ್ನ ವಿಷಯ ಏನಾಯಿತು? ಸರಿಯಾಗಿ ತಿಳಿಯಲಿಲ್ಲವಲ್ಲಾ? ನನ್ನ ಉದ್ಯೋಗ ನಿಂತಿದೆಯೋ ಹೋಗಿದೆಯೋ?" ಎಂದು ಕೇಳಿದನು.

ಆ ಪ್ರಶ್ನೆಯನ್ನು ಕೇಳಿ ಮಾಯಾಮರ್ಕಟನು ಕೀಚೆಂದು ಅರಚಿ, "ಎಲೋ ಹಳೇಮಂತ್ರೀ! ನಿನ್ನ ಉದ್ಯೋಗ ಯಾವಾಗಲೋ ಹೊರಟುಹೋಯಿತು. ತಲೆ ಮಾತ್ರ ಇನ್ನು ಕೆಲವು ದಿನಗಳವರೆಗೆ ಕೊರಳಿನ ಮೇಲಿರುತ್ತೆ. ತಕ್ಷಣವೇ ಈ ಸಭಾ ಭವನದಿಂದ ಹೊರಗೆ ನಡೆ!" ಎಂದನು. ರಾಜನು ಮಾತಾಡಲಿಲ್ಲ.

"ಸರಿ ಹೊರಟೆ ಮರ್ಕಟಾಮಾತ್ಯಾ, ಅಲ್ಲಲ್ಲ ಮರ್ಕಟ ಮಹಾರಾಜಾ!" ಎಂದು ಹೇಳಿ ಜೀವಗುಪ್ತನು ಸೂರ್ಯಭೂಪತಿಯ ಹಿಂದೆಯೇ ಹೊರಟನು. ಅವರಿಬ್ಬರ ಹಿಂದೆ ಸ್ವಲ್ಪ ದೂರದಲ್ಲಿ ಸಭೆಯಲ್ಲಿದ್ದ ಪುರಪ್ರಮುಖರೂ ಹೊರಗೆ ಸಾಗಿದರು. ಹೀಗೆ ಎಲ್ಲರೂ ಸಭಾಭವನದೊಳಗಿನಿಂದ ಹೊರಗಿನ ಅಂಗಳಕ್ಕೆ ನಡೆದರು.

ಆಗ ಮಾಯಾಮರ್ಕಟನು ಏನೋ ನೆನಪಾದವನಂತೆ ಭವನದೊಳಗಿನಿಂದ ಮೆಟ್ಟಲಿನವರೆಗೆ ಬಂದು ಅಲ್ಲಿಯೇ ನಿಂತು, ಕತ್ತಿಯನ್ನು ಮೇಲೆತ್ತಿ ಹಿಡಿದು, ಬಾಲವನ್ನು ಗಿರಗಿರ ತಿರುಗಿಸುತ್ತ, "ಕೇಳಿರೆಲ್ಲರೂ! ನನ್ನ ಕೈಯಲ್ಲಿದ್ದ ಮಂತ್ರದಂಡವನ್ನು, ಕರಡೀ ಆಟಗಾರನ ಗುಂಪಿನವರಾರೋ ಕದ್ದಿರುವರು. ಅದನ್ನು ತಿರಿಗಿ ತಂದುಕೊಟ್ಟವರಿಗೆ ಜಿತಕೇತು ಮಹಾರಾಜರು ಅರ್ಧರಾಜ್ಯವನ್ನೂ ಕೊಟ್ಟು ತಮ್ಮ ಕುಮಾರಿಯನ್ನೂ ಮದುವೆಮಾಡಿ ಕೊಡುತ್ತಾರೆ." ಎಂದು ಕೂಗಿ ಹೇಳಿದನು.

ಮರ್ಕಟನ ಮಾತನ್ನು ಕೇಳಿ ಎಲ್ಲರೂ ಆಶ್ಚರ್ಯದಿಂದ ಹಾಗೆ ಹಾಗೇ ನಿಂತರು. ಜೀವಗುಪ್ತನು ಗಹಗಹಿಸಿ ನಗುತ್ತ, "ಆಹಾ! ಅದ್ಭುತ ಸಾಮರ್ಥ್ಯಶಾಲಿಯಾದ ಈ ಮರ್ಕಟ ಮಂತ್ರಿರಾಯರಿಗೆ, ಅಲ್ಲಲ್ಲ, ಹೊಸ ಮರ್ಕಟ ರಾಜರಿಗೆ ಅಸಲೇ ಸಂತಾನವಿಲ್ಲದ ಮಾಜೀ ರಾಜನ ಸಂಗತಿ ಗೊತ್ತಿಲ್ಲದೆ ಭಾರೀ ಭಾರೀ ದಾನಗಳನ್ನು ಸಾರಿಬಿಟ್ಟರಲ್ಲ! ಏನು ಸಾಮರ್ಥ್ಯವಪ್ಪಾ!" ಎಂದನು.

ಮಂತ್ರಿಯ ಮಾತು ಕೇಳಿ ಎಲ್ಲರೂ ಗೊಳ್ಳೆಂದು ನಕ್ಕರು. ಅಷ್ಟರಲ್ಲಿ ಅಲ್ಲಿಗೆ ಬಂದ ಜಿತಕೇತುರಾಜನು ಜನರ ಕಡೆಗೆ ಕೈಯಾಡಿಸಿದನು. ಮಾಯಾಮರ್ಕಟನು ಜಿತಕೇತುರಾಜನನ್ನು ಕೋಪದಿಂದ ನೋಡುತ್ತ, "ಓಯ್! ಎಂಥಾ ಬರಡು ರಾಜನಯ್ಯ ನೀನು? ನಿನಗೆ ಸಂತಾನವೇ ಇಲ್ಲವೇನು?" ಎಂದು ಕೇಳಿದನು.

"ಮರ್ಕಟಾಮಾತ್ಯಾ! ಆ ಸಮಾಚಾರವನ್ನೆಲ್ಲ ಆಮೇಲೆ ಹೇಳುತ್ತೇನೆ. ಮೊದಲು ಆ ಮಂತ್ರ

ದಂಡವು ಅಷ್ಟು ಮುಖ್ಯವೇನು? ಅದಿಲ್ಲದೆ ಶತ್ರುಗಳನ್ನು ಜಯಿಸಲು ನಿನಗಾಗದೇ?" ಎಂದು ಕೇಳಿದನು ರಾಜ.

"ಮುಖ್ಯವೇ ಎಂದು ಕೇಳುವೆಯಲ್ಲಾ? ಒಂದೂ ಗೊತ್ತಿಲ್ಲದ ನೀನೆಂಥ ರಾಜನೋ! ಆ ಮಂತ್ರದಂಡವು ಕೈಯಲ್ಲಿದ್ದರೆ ಅಸಾಧ್ಯವೆಂಬ ಮಾತೇ ಇಲ್ಲ. ಅದನ್ನು ಮೀರಿಸುವ ಶಕ್ತಿ ಈ ಲೋಕದಲ್ಲೇ ಇಲ್ಲವೆಂದು ತಿಳಿ! ನಿಮ್ಮ ಸಿಂಹಾಸನವನ್ನಲ್ಲದೆ ನಿನ್ನ ಪ್ರಾಣ ಕಾಪಾಡಲಿಕ್ಕೂ ಅದು ಬೇಕೇ ಬೇಕು. ಅದೀಗ ನನಗೆ ಸಿಕ್ಕಲೇ ಬೇಕು." ಎಂದನು ಮಾಯಾಮರ್ಕಟ.

ಕೂಡಲೇ ರಾಜನು ಕೈಯೆತ್ತಿ ಎಲ್ಲರಿಗೂ ಕೇಳಿಸುವಂತೆ ಗಟ್ಟಿಯಾಗಿ, "ನನಗೆ ಕುಮಾರಿ ಇಲ್ಲವೆಂದು ಯಾರೂ ಸಂಶಯ ಪಡಬೇಡಿರಿ, ಒಬ್ಬಳು ಕನ್ಯೆಯನ್ನು ದತ್ತಕ್ಕೆ ತೆಗೆದುಕೊಂಡು ನನ್ನ ಅರ್ಧ ರಾಜ್ಯದೊಂದಿಗೆ ಆ ಮಂತ್ರದಂಡ ತಂದುಕೊಟ್ಟವನಿಗೆ ವಿವಾಹಮಾಡಿ ಕೊಡುತ್ತೇನೆ. ಬೇಗ ಬರಲಿ ನಮ್ಮ ಮರ್ಕಟಾಮಾತ್ಯನ ಮಂತ್ರದಂಡ." ಎಂದನು.

ಅವನ ಮಾತನ್ನು ಕೇಳಿ ಅಲ್ಲಿದ್ದವರೆಲ್ಲ ಹರ್ಷಧ್ವಾನ ಮಾಡಿದರು. ಅದಕ್ಕೆ ಮೊದಲು ಆಟವಿಕನ ಕರಡಿಯಾಟ ನೋಡಲು ಬಂದವರ ಗುಂಪಿನಲ್ಲಿ ಕೆಲವರು ದೂರದಲ್ಲಿ ನಿಂತಿದ್ದರು. ಅವರಲ್ಲಿ ಬೈರಾಗಿಗಳಂತೆ ಕಾಣುವ ಯುವಕರಿಬ್ಬರು, ರಾಜನು ಹೇಳಿದ ಮಾತು ಕೇಳಿ ಸಂತೋಷವನ್ನು ತಾಳಲಾರದೆ ಹಾರಿ ಕುಣಿದರು. ಅವರಲ್ಲೊಬ್ಬನು ತನ್ನ ಜೋಳಿಗೆಯೊಳಗೆ ಕೈ ಹಾಕುವಾಗ, ಎರಡನೆಯವನು ಅವನನ್ನು ತಡೆಯುತ್ತ, "ಲೋ ಉಪಶಿಷ್ಯಾ, ಅವಸರಪಡಬೇಡ. ಮೊದಲು ನಮ್ಮ ಗುರುಗಳ ಅಭಿಪ್ರಾಯ ತಿಳಿದುಕೊಳ್ಳುವುದು ಒಳ್ಳೆಯದು" ಎಂದನು.

ಆ ಕೂಡಲೇ ಆ ಬೈರಾಗಿ ಯುವಕರಿಬ್ಬರೂ ಅಲ್ಲಿಂದ ಹೊರಟರು. ಪುರಪ್ರಮುಖರು ಜಿತಕೇತು ರಾಜನಿಗೆ, ಮಂತ್ರದಂಡ ತಂದುಕೊಟ್ಟವನಿಗೆ ಬಹುಮಾನ ಕೊಡುವ ಸಂಗತಿಯನ್ನು ಡಂಗುರ ಹೊಡೆಸಿದರೆ ಒಳ್ಳೆಯದೆಂದು ಸಲಹೆ ಕೊಡುತ್ತಿದ್ದರು. ಆ ಸಮಯದಲ್ಲಿ ಒಂದು ಬಾಣವು ಕೋಟೆಯ





ಗೋಡೆಯ ಮೇಲಿನಿಂದ ಹಾರಿ ಬಂದು ಆ ಜನರ ಗುಂಪಿನ ನಡುವೆ ಬಿದ್ದಿತು.

ಎಲ್ಲರೂ ಹೋಹಾ ಎಂದು ಕಿರಿಚಿ ಆಚೀಚೆ ಓಡಿದರು. ಆಮೇಲೆ ಕೆಲವರು ಆ ಬಾಣವನ್ನು ಎತ್ತಿ ಕೊಳ್ಳಲು ನೋಡಿದರು. ಆಗ ಮಾಯಾಮರ್ಕಟನು "ನಿಲ್ಲಿರಿ" ಎನ್ನುತ್ತಾ ಓಡಿ ಬಂದು ಆ ಬಾಣವನ್ನು ಎತ್ತಿ ಪರೀಕ್ಷಿಸಿ ನೋಡಿ, ಹಲ್ಲು ಕಡಿಯುತ್ತ ಅದನ್ನು ಮುರಿದು ನಾಲ್ಕಾರು ತುಂಡು ಮಾಡಿ ದೂರ ಬಿಸುಡುತ್ತ, "ಈಗ ಈ ಬಾಣವನ್ನು ಮಾಡಿದ ಹಾಗೆಯೇ ಇದನ್ನು ಪ್ರಯೋಗಿಸಿದ ಶತ್ರುಗಳನ್ನೂ ಮಾಡಿ ಬಿಸುಡುತ್ತೇನೆ. ಹುಂ, ನನ್ನ ಮಂತ್ರದಂಡ ಎಲ್ಲಿ? ಅದಿಲ್ಲದೆ ಏನೂ ಸಾಧ್ಯವಿಲ್ಲವೆಂದು ಹೇಳಿದೆ ನಲ್ಲಾ?" ಎಂದು ಕೂಗಿ ಅತ್ತಿತ್ತ ಹಾರಿದನು.

ಅಷ್ಟರಲ್ಲಿ ದೊಡ್ಡದೊಂದು ಬಂಡೇಕಲ್ಲು ಕೋಟೆಯ ಮೇಲಿನಿಂದಾಗಿ ಜೊಯ್ಯನೆ ಬಂದು ರಾಜಭವನದ ಗೋಡೆಗೆ ಬಡೆದು ಧಡಾರನೆ ಕೆಳಗೆ ಬಿತ್ತು. ಆ ಬಂಡೆಗಲ್ಲಿನ ಏಟಿನಿಂದ ರಾಜಭವನದ ಗೋಡೆಯಲ್ಲಿ ಒಡಕುಬಿಟ್ಟಿತು. ಮನುಷ್ಯರು ದೂರ ಓಡಿದ್ದರಿಂದ ಬದುಕಿದರು.

ಇದನ್ನು ನೋಡಿ ಜಿತಕೇತುರಾಜನು ತಲೆಯಿಂದ ಕಾಲಿನವರೆಗೆ ನಡುಗುತ್ತ, "ಇಷ್ಟು ದೊಡ್ಡ ಬಂಡೆ ಗಲ್ಲನ್ನು ಕೋಟೆಯ ಹೊರಗಿನಿಂದ ಬಿಸುಟವನು ಸಾಮಾನ್ಯ ಮನುಷ್ಯನೇ ಅಲ್ಲ. ರಾಕ್ಷಸನೇ! ಅಯ್ಯೊ! ಮರ್ಕಟಾಮಾತ್ಯಾ! ಮಾನವರಾದ ನಾವು ಇಂತಹ ರಾಕ್ಷಸರೊಂದಿಗೆ ಹೋರಾಡುವುದುಂಟೆ? ಬದುಕ ಬಲ್ಲೆವಾ? ನಮ್ಮ ಶವಗಳೂ ಉಳಿಯಲಾರವಲ್ಲಾ! ಈ ಸಾಕ್ಷಾತ್ ಮೃತ್ಯುವಿನಿಂದ ನಮ್ಮನ್ನು ಕಾಯುವವ ರಾರೋ!" ಎಂದನು ಪ್ರಲಾಪ ಧ್ವನಿಯಿಂದ.

ಅಷ್ಟು ದೊಡ್ಡ ಬಂಡೆ ಬಿದ್ದುದನ್ನು ನೋಡಿದ ಕೂಡಲೇ ಪುರಪ್ರಮುಖರೂ ಮಾಮೂಲು ಜನರೂ, ಮೇಲೆ ಮೇಲೆ ಅಂತಹ ಹೆಬ್ಬಂಡೆಗಳು ಬೀಸಿ ಬರುವುದೆಂದು ಭ್ರಮಿಸಿ ಹೆದರಿ ಅಲ್ಲಿಂದ ಓಡ ತೊಡಗಿದರು. ಮಾಯಾಮರ್ಕಟನು ರಾಜನಿಗೆ ಧೈರ್ಯ ಹೇಳುತ್ತ, "ಎಲೋ ರಾಜಾ! ಹೆದರ ಬೇಡ ಇದಕ್ಕೆಲ್ಲಾ! ಬ್ರಹ್ಮಪುತ್ರಾ ನದಿಯ ಕಣಿವೇ ಪ್ರಾಂತದಲ್ಲಿ ಇಂತಹ ಮಹಾಬಲಶಾಲಿಗಳಾದ ಎಷ್ಟೋಮಂದಿ ರಾಕ್ಷಸರನ್ನು ನನ್ನ ಗುರುವಾದ ಮಿಥ್ಯಾಮಿಶ್ರರು ಹಿಡಿದು ಬಂಧಿಸಿ ತಮ್ಮ ಅಡಿ ಯಾಳುಗಳನ್ನಾಗಿ ಮಾಡಿಕೊಂಡಿದ್ದಾರೆ ಗೊತ್ತಾ? ಇವ ನೊಬ್ಬ ಯಃಕಶ್ಚಿತ್ ರಾಕ್ಷಸ ನನಗೊಂದು ಲೆಕ್ಕವೇ? ಅವನನ್ನು ಧೂಳು ಹಾರಿಸಿಬಿಡುತ್ತೇನೆ!" ಎಂದನು.

ರಾಜನು ನಾಲಗೆಯಿಂದ ತುಟಿಗಳನ್ನು ತಡವಿ ಕೊಳ್ಳುತ್ತ, "ಅಮಾತ್ಯಾ! ಈಗ ನೀನೇ ನಮಗೆ ಗತಿ! ನಿನ್ನ ಆ ಗುರುವನ್ನು ನಿನ್ನ ಮಂತ್ರಶಕ್ತಿಯಿಂದ ಈಗಲೇ ಕರೆಸಿ ಈ ಮಹಾಪಾಯದಿಂದ ನನ್ನನ್ನೂ ನನ್ನ ರಾಜ್ಯವನ್ನೂ ಕಾಪಾಡಲಾರೆಯಾ?" ಎಂದು ಅಂಗಲಾಚಿದನು.

ಮಾಯಾಮರ್ಕಟನು ಎರಡು ಮೂರು ಕಿಚಕಿಚಿ ನಗುವನ್ನು ಉದುರಿಸಿ, "ಓ ರಾಜಾ! ನೀನು ಏನೂ ತಿಳಿಯದ ಮಗುವಿನಂಥ ಮೂಢ ಮುಗ್ಧನು! ನನ್ನ ಗುರುಗಳು ಯಾರೆಂದುಕೊಂಡೆ? ನಿನ್ನಂಥಾ ಸಣ್ಣ ಪುಟ್ಟ ರಾಜರನ್ನು ರಕ್ಷಿಸಲಿಕ್ಕಾಗಿ ಆ ಕಣಿವೆಯಿಂದ ಇಲ್ಲಿಗೆ ಬರುವರೆಂದುಕೊಂಡೆಯಾ? ಅವರು ತನ್ನ ಮಂತ್ರ ತಂತ್ರ ಶಕ್ತಿಗಳಿಂದ ಈ ಲೋಕವನ್ನೂ, ಆ ಮೇಲೆ ಮೇಲಿನ ಲೋಕಗಳನ್ನೂ ಜಯಿಸಬೇಕೆಂಬ ಉದ್ದೇಶದಲ್ಲಿದ್ದಾರೆ. ಈ ಕಾರ್ಯಕ್ಕೆ ಅವರಿಗೆ ಭಲ್ಲೂಕ ಪಾದನೆಂಬ ತುಚ್ಛ ಮಾಂತ್ರಿಕನೊಬ್ಬ ಅಡ್ಡ ತಗಲುತ್ತಿದ್ದಾನೆ. ಅವನ ಶಿಷ್ಯನೇ ಈಗ ಇಲ್ಲಿ ಕೋಟೆಯ ಹೊರಗೆ ಬಂದಿರುವ ಕರಡಿಕೆಂಗಣ್ಣ ಎಂಬ ಮಾಂತ್ರಿಕ! ಅವನ ಮಂತ್ರದಂಡ ನನ್ನ ಕೈಗೆ ಸಿಕ್ಕಿ ಈಗ ಹಲ್ಲು ಮುರಿದವನ ಹಾಗೆ ಆಗಿದ್ದಾನೆ. ಎಲ್ಲಿ ಆ ಮಂತ್ರದಂಡ?" ಎಂದನು.

ಮರ್ಕಟನ ಮಾತುಗಳನ್ನು ಕೇಳುವಾಗ ಜಿತಕೇತು ರಾಜನಿಗೆ ಒಂದು ಅನುಮಾನ ಉಂಟಾಯಿತು. ಯಾರೋ ಇಬ್ಬರು ಮಾಂತ್ರಿಕರು, ಏನೋ ಅಪೂರ್ವ ಕಾರ್ಯಗಳನ್ನು ಸಾಧಿಸಲಿಕ್ಕಾಗಿ ತನ್ನಂಥವರನ್ನು ಜೂಜಿನ ದಾಳಗಳಂತೆ ಉಪಯೋಗಿಸುತ್ತಿದ್ದಾರೇನೋ? ಈ ಮರ್ಕಟನಿಗೆ ತನ್ನ ಶತ್ರುವಾದ ಕರಡಿಕೆಂಗಣ್ಣ ಮಾಂತ್ರಿಕನನ್ನು ಹತಮಾಡಬೇಕಾದುದೇ ಮುಖ್ಯಕಾರ್ಯವಲ್ಲದೆ, ತನ್ನಂತಹ ರಾಜನ ಗೊಡವೆ ಇವನಿಗಿಲ್ಲವೇನೋ? ಯಾವುದಕ್ಕೂ ಕೋಟೆಯ ರಕ್ಷಣೆಯನ್ನು ತಾನೇ ನೋಡಿಕೊಳ್ಳಬೇಕಾದುದು ಎಲ್ಲಾ ವಿಧದಲ್ಲಿ ಕ್ಷೇಮವಾದೀತು.

ರಾಜನು ಹೀಗೆ ಆಲೋಚಿಸಿ ಮಾಯಾಮರ್ಕಟನೊಂದಿಗೆ, "ಮರ್ಕಟಾಮಾತ್ಯಾ! ನಾವು ಕೋಟೆ ಗೋಡೆಯ ಮೇಲಕ್ಕೆ ಹೋಗಿ ಶತ್ರುಗಳು ಎಷ್ಟು ದೂರದಲ್ಲಿದ್ದಾರೆಂದು ನೋಡಬೇಕು. ಸೈನಿಕರನ್ನು ಕೂಡಾ ತಕ್ಕ ಜಾಗರೂಕತೆಯಿಂದ ಇರಲು ಎಚ್ಚರಿಸಬೇಕು. ಆ ಸೂರ್ಯಭೂಪತಿ ಏನುಮಾಡಿದನೋ ಗಮನಿಸಬೇಕು. ಅಷ್ಟರೊಳಗೆ ನಿನ್ನ ಮಂತ್ರದಂಡವೂ ಬಂದೀತು ಹೋಗೋಣ." ಎಂದು ಹೇಳಿ, ಮರ್ಕಟನ



ಪ್ರತ್ಯುತ್ತರಕ್ಕೆ ಕಾಯದೆ ಕೋಟೆ ಬುರುಜಿನ ಕಡೆಗೆ ಬೇಗಬೇಗನೆ ನಡೆಯ ತೊಡಗಿದನು.

"ಅದು ಏನಾದರೂ ಈಗ ನನ್ನ ಮಂತ್ರದಂಡವು ಎಲ್ಲಿದೇ? ಹೇಗೆ ಬರುತ್ತೆ? ಯಾರು ತರುತ್ತಾರೆ? ಯಾವನು ಕದ್ದವನು?" ಎಂದು ಕೂಗಿ ಮಾಯಾ ಮರ್ಕಟನು ರಾಜನನ್ನು ಅನುಸರಿಸಿದನು.

ಜಿತಕೇತು ರಾಜನೂ ಮಾಯಾಮರ್ಕಟನೂ ಕೋಟೆಯ ಗೋಡೆಯ ಮೇಲಿನಿಂದ, ಮುಂದಿನ ಮೈದಾನದ ಕಡೆಗೆ ನೋಡಿದರು. ಅಲ್ಲಿ ಕುದುರೆಯ ಮೇಲೆ ಕಾಳೀವರ್ಮನೂ, ಕೋಣದ ಮೇಲೆ ಕರಡಿ ಕೆಂಗಣ್ಣ ಮಾಂತ್ರಿಕನೂ, ಆನೆಯ ಮೇಲೆ ಕಟುಕ ಕರಡಿಯುವನೂ, ಉಗ್ರದಂಡ ರಾಕ್ಷಸನೂ, ಇನ್ನೂ ಕೆಲಮಂದಿ ಸೈನಿಕರೂ ಇದ್ದರು.

ರಾಜನು ಅವರನ್ನು ನೋಡಿ ನಡುಗುತ್ತ, "ಮರ್ಕಟಾಮಾತ್ಯಾ, ಅಲ್ಲಿ ನೋಡುವಾಗ, ಉಳಿದವರಿಗಿಂತಲೂ, ಆ ರಾಕ್ಷಸನನ್ನು ನೋಡಿದರೇನೇ ನನ್ನ ಎದೆ ನೀರಾಗಿ ಹೋಗುತ್ತದೆ. ಅವನನ್ನು ಜಯಿಸುವುದು ಮಾನವರಿಂದ ಸಾಧ್ಯವೇ? ಅಬ್ಬಬ್ಬಾ! ಏನು ಘೋರ!" ಎಂದನು.

"ಮಾನವ ಸಾಧ್ಯವಲ್ಲದ್ದೆಲಾ ಮಂತ್ರಸಾಧ್ಯವೆಂದು ಹಿರಿಯರು ಹೇಳಿದ್ದಾರೆ. ಹಾಗೆ ಮಂತ್ರದಿಂದಲೂ ಸಾಧ್ಯವಲ್ಲದ್ದು ತಂತ್ರಸಾಧ್ಯವೆಂದು ಪಂಡಿತರು ಹೇಳುತ್ತಾರೆ. ಅಯ್ಯಯ್ಯೋ! ಈಗ ನನ್ನ ಆ ಮಂತ್ರದಂಡವೆಲ್ಲೀ? ಎಲ್ಲಿ?" ಎಂದು ಕೂಗುತ್ತ, ಮಾಯಾ ಮರ್ಕಟನು ಎಗರಾಡ ತೊಡಗಿದನು.

ಮರ್ಕಟನ ಕೂಗು ಕೇಳಿ, ಮೈದಾನದಲ್ಲಿದ್ದ ಆಟವಿಕನು ಆನೆಯ ಮೇಲೆ ಎದ್ದು ನಿಂತು ಬಾಣವನ್ನು ಮರ್ಕಟನ ಎದೆಗೆ ಗುರಿ ಹಿಡಿದು, "ಎಲೋ ಕೋತಿ ಮುಖದವನೇ! ಮಹಾದ್ರೋಹಿಯೇ! ಇಕೋ ನಿನ್ನ ಮಂತ್ರದಂಡವು ಬಾಣದ ರೂಪದಲ್ಲಿ ಬರುತ್ತಿದೆ! ಇದರೊಂದಿಗೆ ನಿನ್ನ ಪ್ರಾಣವೂ ಹಾರಿ ಹೋಗುತ್ತದೆ." ಎಂದು ಕೂಗಿ ಬಾಣವನ್ನು ಬಿಟ್ಟನು. ಅದು ರೊಯ್ಯನೆ ಬಂದು ಮರ್ಕಟನ ಮೊಣ ಕಾಲಿಗೆ ತಗಲಿತು, ಅವನು ಹಾರಿದುದರಿಂದ.

ಬಾಣದೇಟನ್ನು ತಿಂದ ಮಾಯಾಮರ್ಕಟನು, "ಹೋ! ತಾಂತ್ರಿಕ ಗುರೋ! ರಕ್ಷ! ರಕ್ಷ!" ಎಂದು ಕೂಗಿ ಅಂಗಾತ ಬಿದ್ದನು.

ಕೂಡಲೇ ತಟ್ಟನೆ ಎದ್ದು ನಿಂತು, ಬಾಣವನ್ನು ಎರಡು ಕೈಗಳಿಂದಲೂ ಹಿಡಿದು ಹಲ್ಲು ಕಚ್ಚಿ ಹೊರಗೆಳೆದು, "ಹುಲು ಮನುಷ್ಯರೇ! ನಿಮ್ಮ ಮುರುಕು ಬಾಣಗಳಿಂದ ಈ ಭ್ರಾಂತಿಮತಿಯನ್ನು ಏನು ಮಾಡಬಲ್ಲಿರಿ?" ಎನ್ನುತ್ತ ಆ ಬಾಣವನ್ನು ಕಾಳೀವರ್ಮ, ಕರಡಿಕೆಂಗಣ್ಣರ ಕಡೆಗೇ ತನ್ನೆಲ್ಲ ಶಕ್ತಿಯಿಂದ ಎಸೆದುಬಿಟ್ಟನು. —(ಇನ್ನೂ ಇದೆ)





# ಕರಡಿಕೆಂಗಣ್ಣ

## ೧೯

[ ಮರ್ಕಟನ ಮಂತ್ರದಂಡವನ್ನು ತಂದವನಿಗೆ, ತಾನು ದತ್ತಕ್ಕೆ ಮಾಡಿಕೊಳ್ಳಲಿರುವ ಮಗಳನ್ನು ಕೊಟ್ಟು ಅರ್ಧ ರಾಜ್ಯವನ್ನೂ ಕೊಡುವೆನೆಂದು ಜಿತಕೇತು ರಾಜನು ಪ್ರಕಟಿಸಿದನು, ಮಾಯಾಮರ್ಕಟನು ಕೋಟೆಯ ಗೋಡೆಯ ಮೇಲೆ ಬರುವುದನ್ನು ನೋಡಿ, ಆನೆಯ ಮೇಲಿದ್ದ ಆಟವಿಕನು ಮರ್ಕಟನ ಮೇಲೆ ಬಾಣ ಪ್ರಯೋಗ ಮಾಡಿದನು. ಮರ್ಕಟನು ಕಾಲಿಗೆ ತಾಗಿದ ಆ ಬಾಣವನ್ನು ಕಿತ್ತು, ಕಾಳೀವರ್ಮ, ಕರಡಿಕೆಂಗಣ್ಣರ ಕಡೆಗೇ ಎಸೆದನು.]

**ಕಾ**ಲಿಗೆ ಬಾಣದ ಪೆಟ್ಟು ಬೀಳುವುದಕ್ಕೆ ಮೊದಲು ಮಾಯಾಮರ್ಕಟನು "ನನ್ನ ಮಂತ್ರದಂಡ, ಮಂತ್ರ ದಂಡ" ಎಂದು ಗಟ್ಟಿಯಾಗಿ ಕೂಗಿದುದನ್ನು ಕರಡಿ ಕೆಂಗಣ್ಣನೂ, ಕಾಳೀವರ್ಮ ಮೊದಲಾದವರೂ ಕೇಳಿದರು. ಅದನ್ನು ಕೇಳಿ ಕರಡಿಕೆಂಗಣ್ಣನಿಗಾದ ಆಶ್ಚರ್ಯ ಅಷ್ಟಿಷ್ಟಲ್ಲ.

"ಕೇಳಿದೆಯಾ ಶಿಷ್ಯಾ, ಕಾಳೀವರ್ಮಾ! ಆ ಮರ್ಕಟ ಮುಖದವನ ಕೂಗು ಅರ್ಥವಾಯಿತೆ? ನಿನಗೇನು ತೋರುತ್ತದೆ? ನನ್ನಿಂದ ಅವನು ಕದ್ದುಕೊಂಡ ಮಂತ್ರದಂಡವನ್ನು ಎಲ್ಲಿಯೋ ಕಳೆದುಕೊಂಡಿದ್ದಾನೆ. ಅಂದರೆ ಬೇರೆ ಯಾರೋ ಅವನ ಕೈಯಿಂದ ಅದನ್ನು ಕದ್ದಿರಬೇಕು. ಅದು ಯಾರಾಗಿರಬಹುದು? ಇಷ್ಟರ ವರೆಗೆ ಆ ಮಂತ್ರದಂಡ ಅವನ ಹತ್ತಿರ ಇದೆಯೆಂದು ನಾವು ನಂಬಿದ್ದೆವು. ಅದೀಗ ಅವನ ಹತ್ತಿರ ಇಲ್ಲ. ನಮ್ಮ ಸಮಸ್ಯೆ ಇನ್ನಿಷ್ಟು ಸಿಕ್ಕಿಗೆ ಬಿತ್ತಲ್ಲ? ನಾವೇನು ಮಾಡೋಣ" ಎಂದನು ಕೆಂಗಣ್ಣ ಮಾಂತ್ರಿಕ.

ಕಾಳೀವರ್ಮನೂ ಬೆರಗುಬಡೆದವನಾಗಿ ತಲೆ ಯಾಡಿಸುತ್ತ, "ಹೌದು ಗುರುವೇ. ಆ ಕೋತಿ ಕೊರಮನ ಕೈಯಿಂದ ಆ ಮಂತ್ರದಂಡವನ್ನು ಮತ್ತಾರೋ ತಸ್ಕರ ಮಾಡಿರಬೇಕು. ಅದು ಯಾರೆಂದು



ಹೇಗೆ ತಿಳಿದುಕೊಳ್ಳುವುದೋ ? ಅದೂ ಅಲ್ಲದೆ ನಾವು ಈ ನಗರದೊಳಗೆ ಪ್ರವೇಶಿಸಬೇಕೆಂದರೂ ಸುಲಭಸಾಧ್ಯವಾಗಿ ಕಾಣುವುದಿಲ್ಲ. ಈ ರಾಜನು ಕೋಟೆಯ ದ್ವಾರವನ್ನು ಕಬ್ಬಿಣದಿಂದ ಮಾಡಿಸಿದ್ದಾನೆ. ದುರ್ಮುಖರಾಜನ ಕೋಟೆಯ ಬಾಗಿಲು ಮರದಿಂದಾದುದರಿಂದ ನಾವು ಬೆಂಕಿ ಹಚ್ಚಿ ಕೋಟೆಯೊಳಗೆ ಪ್ರವೇಶಿಸಲು ಸಾಧ್ಯವಾಯಿತು. ಇಲ್ಲಿ ಆ ಉಪಾಯ ನಡೆಯದು " ಎಂದನು.

ಕರಡಿಕೆಂಗಣ್ಣ ಮಾಂತ್ರಿಕನು ತನ್ನ ಒರೆಯೊಳಗಿನಿಂದ ದೀರ್ಘವಾದ ಖಡ್ಗವನ್ನು ಸೆಳೆದುಕೊಂಡು, " ನಾವು ಈ ರಾತ್ರಿಯಲ್ಲಿ ಕೋಟೆಯ ಹೊರಗೇ ಜಾಗ ಹುಡುಕಿ ಡೇರೆ ಹಾಕಿಕೊಂಡು, ಇರೋಣ. ಕೋಟೆಯ ಬಾಗಿಲನ್ನು ಹೇಗೆ ಭೇದಿಸುವುದೆಂದು ಸಾವಧಾನವಾಗಿ ಆಲೋಚನೆಮಾಡಿ ನಿರ್ಧರಿಸೋಣ." ಎಂದನು.

ಆ ಮಾತು ಕೇಳಿ ಉಗ್ರದಂಡ ರಾಕ್ಷಸನು ಕೋಪದಿಂದ ಕಟಕಟನೆ ಹಲ್ಲು ಕಡಿಯುತ್ತ, " ಹುಂ. ನನ್ನ ಈ ಕಲ್ಲಿನ ಗದೆ ಕೋಟೆಯ ದ್ವಾರವನ್ನು ಒಡೆಯಲಾರದೆ ಹೋಯಿತು. ಗೋಡೆಯನ್ನಾದರೂ ಒಡೆಯಲು ಸಾಧ್ಯವೋ ನೋಡಿಬಿಡುತ್ತೇನೆ " ಎಂದು ಹೇಳುತ್ತ, ವೇಗವಾಗಿ ಹೋಗಿ ಗದೆಯನ್ನೆತ್ತಿ ಕೋಟೆಯ ಗೋಡೆಯ ಮೇಲೆ ಹೊಡೆದನು. ಆ ಹೊಡೆತಕ್ಕೆ ಎರಡು ಮೂರು ಕಲ್ಲುಗಳು ಕೆಳಗೆ ಬಿದ್ದುವು. ಅದನ್ನು ನೋಡಿದ ಗೋಡೆಯ ಮೇಲಿದ್ದ ಸೈನಿಕರು ಉಗ್ರದಂಡ ರಾಕ್ಷಸನ ಮೇಲೆ ಬಾಣಗಳನ್ನು ಪ್ರಯೋಗಿಸಿದರು. ಉಗ್ರದಂಡನು ಮೈ ಕೊಡರಿಕೊಂಡು ಆ ಬಾಣಗಳನ್ನು ಉದುರಿಸಿಕೊಳ್ಳುತ್ತ, ಇನ್ನೊಮ್ಮೆ ಹೊಡೆಯಲು ಗದೆಯನ್ನೆತ್ತಿದನು.

ಕರಡಿಕೆಂಗಣ್ಣನು ಉಗ್ರದಂಡನನ್ನು ಈಚೆಗೆ ಬರುವಂತೆ ಹೇಳಿ, ಕಾಳೀವರ್ಮನೊಂದಿಗೆ, " ಹೀಗೆಲ್ಲಾ ಕೋಟೆಯೊಳಗೆ ನುಗ್ಗುವುದರಿಂದ, ಮತ್ತಾರೋ ಅಪಹರಿಸಿದ ನನ್ನ ಮಂತ್ರದಂಡವು ಇನ್ನಷ್ಟು ರಹಸ್ಯದೊಳಗೆ ಹೋದೀತು. ಬಲವಿದೆಯೆಂದು ದುಡುಕುವುದರಿಂದ ನಮ್ಮ ಕೆಲಸವಾಗದು. ಯಾವುದಕ್ಕೂ ಯೋಚನೆಮಾಡಿ ಕೆಲಸ ಮುಂದುವರಿಸಬೇಕು. ಈಗ ಹಿಂಜರಿಯುವುದೇ ಒಳ್ಳೇದು " ಎಂದನು.

ಕರಡಿಕೆಂಗಣ್ಣನು ಇಲ್ಲಿ ಹೀಗೆ ಯೋಚನೆಗೆ ಬಿದ್ದ ಸಮಯದಲ್ಲಿ, ಈ ಮೊದಲು ರಾಜಭವನದ ಮುಂದೆ ಮಾಯಾಮರ್ಕಟನ ಕೈಯಿಂದ ಜಾರಿಬಿದ್ದ ಮಂತ್ರದಂಡವನ್ನು ಎತ್ತಿಕೊಂಡು ತಮ್ಮ ಜೋಳಿಗೆಯೊಳಗೆ ಹಾಕಿಕೊಂಡ ಬೈರಾಗಿ ಯುವಕರಿಬ್ಬರು, ತಮ್ಮ ಗುರುವಿನ ಬಳಿಗೆ ಹೊರಟಿದ್ದರಷ್ಟೆ? ಅವರ ಗುರು ಊರ ಹೊರಗಿನ ಒಂದು ಆಲದ ಮರದ ಬುಡದಲ್ಲಿ ಕುಳಿತುಕೊಂಡು ಜಪಮಾಡುತ್ತಿದ್ದನು.

ಆ ಯುವಕ ಬೈರಾಗಿಗಳಲ್ಲಿ ಚಿಕ್ಕವನ ಜೋಳಿಗೆಯಲ್ಲಿ ಆ ಮಂತ್ರದಂಡವು ಅಡಗಿತ್ತು. ಗುರುವಿನ ಬಳಿಗೆ ಹೋಗುವ ಮೊದಲು ದೊಡ್ಡವನು ಚಿಕ್ಕವನ ಜೋಳಿಗೆಯಿಂದ ಆ ಮಂತ್ರದಂಡವ[illegible] ತನ್ನ ಕೈಗೆ

ಎತ್ತಿಕೊಂಡು, "ತಮ್ಮಾ, ಗುರುಗಳು ಕಣ್ಣು ಮುಚ್ಚಿ ಧ್ಯಾನದಲ್ಲಿದ್ದಾರೆ. ಈಗ ಎಬ್ಬಿಸುವುಬೇಡ. ಅವರಿಗೆ ಈ ಮಂತ್ರದಂಡವನ್ನು ತೋರಿಸುವುದಕ್ಕೆ ಮೊದಲು ಇದರ ಮಹಿಮೆ ಎಂತಹುದೆಂದು ನಾವೇ ಒಂದಿಷ್ಟು ನಮ್ಮ ಮಂತ್ರ ಉಚ್ಚರಿಸಿ ಸ್ವಲ್ಪ ಪರೀಕ್ಷಿಸಿ ನೋಡೋಣವೇ ?" ಎಂದನು.

"ನೋಡಿದರಾಯಿತು" ಎಂದು ಚಿಕ್ಕ ಬೈರಾಗಿ ತಲೆಯಾಡಿಸಿದನು. ದೊಡ್ಡವನು ಮಂತ್ರದಂಡವನ್ನು ಮೇಲೆತ್ತಿ ಹಿಡಿದು, "ಈ ಮಂತ್ರದಂಡದ ಒಡೆಯ ನಾಣೆ! ಹ್ರೂಂ ಹ್ರಾಂ ಹ್ರೀಂ!ಆಗಮಾಗಮ! ಮಂತ್ರ ದಂಡಾಧಿದೇವತಾ! ಈ ಸ್ಥಳದಲ್ಲಿ ನಿಧಿಯ ಬಾಗಿಲು ತೆರೆ!" ಎನ್ನುತ್ತ ಅದರಿಂದ ನೆಲದ ಮೇಲೆ ಒಂದೇಟು ಕೊಟ್ಟನು.

ಆಗ ಉಂಟಾದ ದೊಡ್ಡ ಶಬ್ದಕ್ಕೆ ಜಪಮಾಡು ತ್ತಿದ್ದ ಗುರು ಕಣ್ಣು ಮುಚ್ಚಿಕೊಂಡೇ "ಎಲೋ! ಯಾರೋದೂ? ಈ ಗುರು ಭೈರವ ಬೈರಾಗಿಯ ಇದಿರಿನಲ್ಲಿಯೇ ತಪ್ಪು ತಪ್ಪಾಗಿ ಮಂತ್ರವನ್ನು ಉಚ್ಚರಿಸುವ ಪಾಪಿ ಯಾರೋ ನೀನು? ಈಗಲೇ ನಿನ್ನನ್ನು ಭಸ್ಮಮಾಡಿ ಬಿಡುತ್ತೇನೆ!" ಎನ್ನುತ್ತ, ಬೆಳ್ಳಿ ಮತ್ತು ಹಿತ್ತಾಳಿಯ ಹೂವುಗಳನ್ನು ಹೊದಿಸಿದ ತನ್ನ ಗಿಡ್ಡಾದ ಮಂತ್ರದಂಡವನ್ನು ಮೇಲೆತ್ತಿದನು.

ತಮ್ಮ ಗುರು ಹೇಳಿದ ಮಾತುಗಳಿಂದ ಹೆದರಿದ ಶಿಷ್ಯ ಬೈರಾಗಿಗಳಿಬ್ಬರೂ, ನೆಲದಲ್ಲಿ ತಮ್ಮ ಮಂತ್ರ ದಂಡದ ಹೊಡೆತದಿಂದಾದ ಘಾತದಿಂದ ನೆಲವು ಸೀಳಿದುದನ್ನು ನೋಡಿ ಇನ್ನಿಷ್ಟು ಹೆದರಿದರು. ಮರುಕ್ಷಣದಲ್ಲಿ ಆ ಸೀಳಿನಿಂದ ಚಿಳ್ಳನೆ ನೀರು ಹಾರುವು ದನ್ನು ನೋಡಿ ಭಯದೊಂದಿಗೆ ಆಶ್ಚರ್ಯವೂ ಕೂಡಿತು. ಆಗಲೇ ಗುರು ಬೈರಾಗಿಯೂ ಕೋಪದಿಂದ ಕಣ್ಣು ತೆರೆಯಲು, ಅವನ ಮೇಲೆಯೂ ನೀರು ಚಿಮ್ಮಿ ಜಡಿಮಳೆಯಂತೆ ಜಿರಿಜಿರಿ ಸುರಿಯಿತು!

ಭೈರವ ಬೈರಾಗಿ "ಹೋ! ಗುರುಪ್ರಭೋ!" ಎಂದು ಹಾರಿ ನಿಂತು, "ಇದೇನಿದೇನು! ಮಿಂಚಿಲ್ಲ! ಗುಡುಗಿಲ್ಲ! ಮೋಡವೂ ಇಲ್ಲ! ಮಳೆಸುರಿಯುವು ದೆಂದರೇನಿದು?" ಎನ್ನುತ್ತ ತುಸು ದೂರದಲ್ಲಿ





ನಿಂತಿರುವ ತನ್ನ ಶಿಷ್ಯರನ್ನು ನೋಡಿ, "ಎಲೋ! ಭೂಮಿಯಿಂದ ಆಕಾಶಕ್ಕೆ ನೀರಿನ ಧಾರೆ ಹಾರುತ್ತಿದೆಯಲ್ಲಾ? ಏನು ಈ ವಿಚಿತ್ರ! ಯಾರೋ ಏನೋ ಮಂತ್ರೋಚ್ಚಾರ ಮಾಡಿದರಲ್ಲಾ? ಯಾರದು? ಎಲ್ಲಿದ್ದಾರೆ?" ಎಂದನು.

ಆ ಮಾತು ಕೇಳಿ ಬೈರಾಗಿ ಶಿಷ್ಯರಿಬ್ಬರಿಗೂ ಸ್ವಲ್ಪ ಧೈರ್ಯ ಬಂತು. "ಭೈರವ ಗುರೋ! ಅದು ನಾವೇ! ನಾವೇ! ನಮ್ಮ ಮಂತ್ರಶಕ್ತಿಯಿಂದ ಈ ನೀರಿನ ಬುಗ್ಗೆಯನ್ನು ಬರಮಾಡಿದ್ದೇವೆ. ಇದರಿಂದ ನಮ್ಮ ವಿದ್ಯೆ ಪೂರ್ತಿಯಾದಂತಾಯಿತಷ್ಟೆ?" ಎಂದು ಕೇಳಿದರು.

ಏನು ನಡೆಯಿತೆಂಬುದು ಅರ್ಥವಾಗದೆ ಭೈರವ ಬೈರಾಗಿ ಆಶ್ಚರ್ಯಪಡುತ್ತ, ಶಿಷ್ಯರ ಬಳಿಗೆ ಬಂದು, ದೊಡ್ಡ ಶಿಷ್ಯನ ಕೈಯಲ್ಲಿದ್ದ ಮಂತ್ರದಂಡವನ್ನು ನೋಡಿ, ಇನ್ನಷ್ಟು ಆಶ್ಚರ್ಯದಿಂದ, "ಏನಿದು? ಮಂತ್ರದಂಡದ ಹಾಗಿದೆಯಲ್ಲ? ಎಲ್ಲಿಂದ? ಹೇಗೆ ಸಂಪಾದಿಸಿದಿರಿ?" ಎಂದನು.

"ಗುರುವೇ, ಇದು ಮಂತ್ರದಂಡದ ಹಾಗಿರುವುದೇನೂ ಅಲ್ಲ. ನಿಜವಾಗಿಯೂ ಅದ್ಭುತ ಮಹಿಮೆಯ ಮಂತ್ರದಂಡವೇ! ನನಗೆ ತಿಳಿದ ಮಂತ್ರದ ಮೂರೇ ಮೂರು ಚೂರುಗಳನ್ನು ಉಚ್ಚರಿಸಿ ನಿಧಿಯ ಬಾಗಿಲು ತೆರೆಯಲು ಹೇಳಿದರೆ, ಪಾತಾಳ ಗಂಗೆಯನ್ನೇ ಮೇಲಕ್ಕೇ ತಂದಿತು ಈ ಮಂತ್ರದಂಡ" ಎಂದ ದೊಡ್ಡ ಶಿಷ್ಯ.

ಭೈರವ ಬೈರಾಗಿ ಶಿಷ್ಯನ ಕೈಯಲ್ಲಿದ್ದ ಆ ಮಂತ್ರದಂಡವನ್ನು ತೆಗೆದುಕೊಂಡು, ಅದನ್ನು ಹಾಗೆ ಹೀಗೆ ತಿರುಗಿಸಿ ನೋಡಿ, "ಇದು ಯಾವ ಮಾಂತ್ರಿಕನ ಕೈಯಲ್ಲೋ ಬಹಳ ಕಾಲದಿಂದ ನಲುಗಿ ತುಂಬಾ ನಯವಾಗಿದೆ. ಇದು ನಿಮ್ಮ ಕೈಗೆ ಹೇಗೆ ಬಂತು? ಕದ್ದುಕೊಂಡಿರೇನು? ಇದರ ಯಜಮಾನ ಏನಾದ?" ಎಂದು ಕೇಳಿದನು.

ದೊಡ್ಡ ಶಿಷ್ಯನು ಚಿಕ್ಕ ಶಿಷ್ಯನಿಗೆ ಮಾತಾಡಬೇಡವೆಂದು ಸನ್ನೆ ದೋರಿ, ಗುರುವಿನ ಕೈಯಲ್ಲಿದ್ದ ಮಂತ್ರದಂಡವನ್ನು ತಟ್ಟನೆ ಎಳೆದುಕೊಂಡು, "ಗುರುವೇ, ಮೊದಲು ಈ ಜಲಧಾರೆಯನ್ನು ನಿಲ್ಲಿಸಬೇಕು. ಇಲ್ಲದಿದ್ದರೆ ಕೆಲವು ಗಂಟೆಗಳಲ್ಲಿ ನಗರವೇ ಮುಳುಗಿ ಹೋಗಬಹುದು." ಎಂದು ಮಂತ್ರದಂಡವನ್ನು ಮೇಲೆತ್ತಿ, "ನಿಧಿ ಧ್ವಾರವನ್ನು ಮುಚ್ಚು! ನಿಧಿ ದ್ವಾರವನ್ನು ಮುಚ್ಚು!" ಎನ್ನುತ್ತ ನೀರಿನ ಧಾರೆ ಬರುವ ಪ್ರದೇಶದಲ್ಲಿ ಬಲವಾಗಿ ಹೊಡೆದನು.

ಈ ಸಾರಿ ಮಂತ್ರದಂಡದ ಏಟಿಗೆ ಭೂಮಿ ಛಳ್ಳನೆ ಒಡೆದು ಹೋಗಿ, ಮನುಷ್ಯನನ್ನು ಹಿಡಿಸುವಂತಹ ಕನ್ನವೇ ಉಂಟಾಯಿತು. ಇದನ್ನು ನೋಡಿ ಭೈರವ ಬೈರಾಗಿ ಹಾರಿ ಕುಣಿದು, "ಎಲವೋ ಶಿಷ್ಯೋಪ ಶಿಷ್ಯರೆ! ಇದು ನಿಮಗೆ ಹೇಗೆ ಬೇಕಾದರೂ ಸಿಕ್ಕಿರಲಿ! ಅದ್ಭುತ ಶಕ್ತಿಯ ಈ ಮಂತ್ರದಂಡವನ್ನು ನನಗೆ ಕಾಣಿಕೆಯಾಗಿ ತಂದಿದ್ದೀರಿ! ನಿಮ್ಮ ಗುರುಭಕ್ತಿಗೆ ಮೆಚ್ಚಿದೆ! ಜಲಧಾರೆ ನಿಂತು ಹೋಗಿ ನಿಧಿಯ

ದ್ವಾರಗಳು ತೆರೆದ ಹಾಗಿದೆ. ಇನ್ನು ನೀವು ಇದರೊಳಗೆ ಇಳಿದು ಅಲ್ಲಿರುವ ನಿಧಿ ಏನೆಂಬುದನ್ನು ನೋಡಿ ಬನ್ನಿ " ಎಂದನು.

ಚಿಕ್ಕ ಶಿಷ್ಯನು ಮಂತ್ರದಂಡದ ಕಡೆಗೆ ಅನುಮಾನ ಪಡುವವನ ಹಾಗೆ ನೋಡುತ್ತ, "ಭೈರವ ಗುರುವೇ! ಎಂತಹುದೋ ಈ ಮಂತ್ರದಂಡದ ಶಕ್ತಿಗಳನ್ನು ನಂಬಿ, ನಾವು ಯಾವುದಾದರೂ ಇರುಕಾಟದಲ್ಲಿ ಸಿಕ್ಕಿ ಕೊಳ್ಳುತ್ತೇವೋ ಏನೋ! ನನಗೆ ಯಾಕೋ ಭಯ ವಾಗಿದೆ. ನಿಧಿಯ ಬಾಗಿಲು ತೆರೆಯಬೇಕೆಂದರೆ, ಭೂಮಿಯೊಳಗಿನ ನೀರಿನ ಬುಗ್ಗೆಯನ್ನು ಆಕಾಶಕ್ಕೆ ಹಾರಿಸುತ್ತದೆ. ನಾವು ಕೇಳಿದ್ದೊಂದು, ಇದು ಮಾಡಿ ದ್ದೊಂದು. ಈ ಸಂಗತಿ ಗಮನಿಸಿದಿರಾ? ಇದರಿಂದ ನಿಧಿ ದೊರಕುವುದೆಂದು ನನಗೆ ನಂಬಲಾಗುವುದಿಲ್ಲ. ಇದು ನಿಧಿಯ ಬಾಗಿಲೋ, ಪಾತಾಳದ ಬಾಗಿಲೋ ಹೇಗೆ ನಂಬುವುದು ? " ಎಂದನು.

ಶಿಷ್ಯನ ಮಾತು ಕೇಳಿದ ಮೇಲೆ ಭೈರವ ಬೈರಾಗಿಗೂ ಆ ಮಂತ್ರದಂಡವನ್ನು ಕುರಿತು ಶಂಕೆಯುಂಟಾಯಿತು. ಅದು ಕೋರಿದುದಕ್ಕೆ ಬದಲಾಗಿ ಬೇರೊಂದನ್ನು ಕೊಡಲು ಪ್ರಾರಂಭಿಸಿಬಿಟ್ಟರೆ ಅದರಿಂದ ಎಂತಹ ಅಪಾಯಕ್ಕಾದರೂ ದಾರಿಯಾದೀತಲ್ಲ! ಪುಣ್ಯಕಾಲ, ನೀರು ಚಿಮ್ಮುವುದು ನಿಂತು ಸುರಂಗದ ಬಾಯಿ ಅಗಲವಾಗಿ ಸುಮ್ಮನಾಗಿದೆ. ಸದ್ಯ ಜಲ ಪ್ರಳಯದ ಅಪಾಯ ತಪ್ಪಿತು.

ಬೈರಾಗಿ ಹೀಗೆ ಆಲೋಚಿಸುವಾಗ, ದೊಡ್ಡ ಶಿಷ್ಯನ ಕೈಯಿಂದ ಆ ಮಂತ್ರದಂಡವನ್ನು ತೆಗೆದು ಕೊಂಡು ಅದನ್ನು ಪರೀಕ್ಷಿಸಿ ನೋಡ ತೊಡಗಿದನು. ಆಗ ದೊಡ್ಡ ಶಿಷ್ಯನು ದೊಡ್ಡದಾಗಿ ನಕ್ಕು, "ಗುರುವೇ, ಇದರ ಶಕ್ತಿಯ ಪರೀಕ್ಷೆಮಾಡಿಕೊಂಡು ಹೊತ್ತು ಕಳೆಯುವುದಕ್ಕೆ ಬದಲಾಗಿ, ಒಂದು ಕೆಲಸ ಮಾಡೋಣವೇ? ಇದು ಮಂತ್ರಗಾರನಾದ ಒಬ್ಬ ಮರ್ಕಟ ಮುಖದವನಿಂದ ನಮಗೆ ಸಿಕ್ಕಿತು. ಅವನೀಗ



ಜಿತಕೇತು ರಾಜನ ಪ್ರಧಾನಮಂತ್ರಿ! ಕಳೆದು ಹೋದ ಈ ಮಂತ್ರದಂಡಕ್ಕಾಗಿ ಆಕಾಶ ಪಾತಾಳಗಳನ್ನು ಒಂದು ಮಾಡುವವನ ಹಾಗೆ ಕಾಣುತ್ತಾನೆ. ಇದನ್ನು ತಿರುಗಿ ತಂದುಕೊಟ್ಟವರಿಗೆ ಅರ್ಧರಾಜ್ಯದೊಂದಿಗೆ ತನ್ನ ಮಗಳನ್ನು ಕೂಡಾ ಕೊಟ್ಟು ಮದುವೆಮಾಡುವೆ ನೆಂದು ಆ ರಾಜನೂ ಹೇಳಿದ್ದಾನೆ." ಎಂದನು.

ಅರ್ಧರಾಜ್ಯದೊಂದಿಗೆ ರಾಜಕುಮಾರಿ ಎಂಬ ಮಾತನ್ನು ಕೇಳಿದ ಕೂಡಲೇ ಭೈರವ ಬೈರಾಗಿ, "ಗುರುಪ್ರಭೋ!" ಎಂದು ಕೂಗಿ, "ಎಲೋ ಶಿಷ್ಯ ಶಿಖಾಮಣಿಗಳೇ, ಇಷ್ಟೊಂದು ಮುಖ್ಯ ವಿಷಯ ವನ್ನು ಮೊದಲೇ ನನಗೆ ಹೇಳದೆ, ಇಷ್ಟು ಹೊತ್ತು ಮುಚ್ಚಿಟ್ಟು ಆಟ ತೋರಿಸಿದಿರೇನು ? ನಾನು ಅರ್ಧ ರಾಜ್ಯಕ್ಕೆ ಒಡೆಯನಾಗುವುದೂ, ನಿಮ್ಮಲ್ಲೊಬ್ಬನು ರಾಜಕುಮಾರಿಯ ಗಂಡನಾಗುವುದೂ ಚೆನ್ನಾಗಿಯೇ ಇರುತ್ತೆ. ಆದರೆ ಒಂದು, ಈ ರಾಜರ ಮಾತುಗಳನ್ನು ಅಷ್ಟಾಗಿ ನಂಬಲೇ ಬಾರದು. ಜಿತಕೇತು ರಾಜನು




ನಮ್ಮಿಂದ ಮಂತ್ರದಂಡವನ್ನು ಪಡೆದುಕೊಂಡು, ತಲೆ ಕಡಿಸಿಬಿಟ್ಟರೆ ನಾವೇನು ಮಾಡಲು ಸಾಧ್ಯವಿದೆ? ಅವನನ್ನು ಕೇಳುವವರು ಯಾರು? ಇದನ್ನೂ ಯೋಚಿಸಬೇಕು!" ಎಂದು ಹೇಳಿ ಆಲದಮರದ ಬುಡಕ್ಕೆಹೋಗಿ ಚಕ್ಕನೆಕುಳಿತು ತಲೆ ಹಿಡಿದುಕೊಂಡನು.

"ಅದಕ್ಕೇ ನಿಮ್ಮ ಯೋಚನೆ ಕೇಳಿದೆವು" ಎನ್ನುತ್ತ ಶಿಷ್ಯರೂ ಅಪ್ರತಿಭರಾದರು. ರಾಜನ ಮಾತನ್ನು ನಂಬುವ ವಿಷಯದಲ್ಲಿ ಅವರಿಗೂ ಅನುಮಾನವಾಯಿತು. ಚಿಕ್ಕ ಶಿಷ್ಯನು ಭೂಮಿಯಲ್ಲಿ ಏರ್ಪಟ್ಟ ಬಾಯಿಯ ಬದಿಗೆ ಹೋಗಿ, ಕೆಳಕ್ಕೆ ಕಾಲು ಹಾಕಲು ನೋಡುವಾಗ ಅವನು ಬೀಳದಂತೆ ದೊಡ್ಡ ಶಿಷ್ಯ ಅವನ ಕೈ ಹಿಡಿದನು.

"ಭೈರವ ಗುರೋ! ಇಲ್ಲಿ ಏನೋ ಮೆಟ್ಟಲು ಗಳಿವೆ. ಇದೀಗ ನಿಜವಾದ ಭೂಸುರಂಗವೇ! ಮಂತ್ರ ದಂಡವು ನಮಗೆ ನಿಧಿಯ ದ್ವಾರವನ್ನೇ ತೆರೆದ ಹಾಗಿದೆ! ಸಾಧಾರಣವಾಗಿ ದೊಡ್ಡ ದೊಡ್ಡ ನಿಧಿಗಳು ಸುರಂಗದೊಳಗೇ ಇರುತ್ತವೆ. ನಮ್ಮ ಅದೃಷ್ಟ ಚೆನ್ನಾಗೇ ಇದೆ." ಎಂದು ಕೂಗಿ ಹೇಳಿದನು ಚಿಕ್ಕ ಶಿಷ್ಯ.

ಭೈರವ ಬೈರಾಗಿ ಉತ್ಸಾಹದಿಂದ ಎದ್ದು ಅಲ್ಲಿಗೆ ಬಂದು, "ಎಲೈ, ಶಿಷ್ಯೋಪಶಿಷ್ಯರೇ! ಅದೃಷ್ಟ ವಶಾತ್ ನಮಗೆ ನಿಧಿ ದೊರಕಿದರೆ ಪ್ರಸ್ತುತ ನಾವು ಅಷ್ಟರಿಂದಲೇ ತೃಪ್ತಿಪಡೋಣ. ಈ ಮಂತ್ರದಂಡ ವನ್ನು ರಾಜನಿಗೆ ಕೊಡಬೇಕೋ ಬೇಡವೋ ಆ ಮೇಲೆ ಸಾವಧಾನವಾಗಿ ಆಲೋಚಿಸಿದರಾಯಿತು. ಅಷ್ಟ ರೊಳಗೆ ಈ ಮಂತ್ರದಂಡದ ಪೂರ್ತಿ ಮಹತ್ವ ತಿಳಿದರೂ ತಿಳಿದೀತು." ಎಂದು ಹೇಳಿ ಶಿಷ್ಯನ ಹಿಂದೆಯೇ ಸುರಂಗದೊಳಗೆ ಇಳಿಯುತ್ತ, ಮೇಲಿರುವ ಶಿಷ್ಯನನ್ನು ಕೂಡಾ ಇಳಿಯುವಂತೆ ಹೇಳಿದನು.

ಗುರು ಶಿಷ್ಯರು ಕೆಳಗಿರುವ ಮೆಟ್ಟಿಲುಗಳಲ್ಲಿ ತಡವಿ ತಡವಿ ಇಳಿಯುತ್ತ ಹೋಗಲು, ಆ ಪ್ರದೇಶವೆಲ್ಲ ಜಲಮಯವಾಗಿರುವುದೆಂದು ತಿಳಿಯಿತು. ನೀರಿನ ಆಳ ಎಷ್ಟಿರಬಹುದೆಂದು ಕಾಲು ಇಳಿಬಿಟ್ಟು ನೋಡಿದರು. ಮೊಣಕಾಲಿನಷ್ಟೇ ಇದ್ದುದರಿಂದ ಮೆಲ್ಲಗೆ ಕಾಲೆಳೆಯುತ್ತ ಮೂವರೂ ಮುಂದೆ ನಡೆದರು. ಆಗ ಆ ಸುರಂಗ ಮಾರ್ಗದಲ್ಲಿ ತುಸು ದೂರ ಬೆಳಕು ಕಾಣಿಸ ತೊಡಗಿತು.

ಅದನ್ನು ನೋಡಿ ಭೈರವ ಬೈರಾಗಿ ಆತ್ಮಾನಂದದ ಧ್ವನಿ ಯೆಬ್ಬಿಸಿ, ತನ್ನ ಶಿಷ್ಯರೊಂದಿಗೆ "ಅದೋದೋ, ಆ ಬೆಳಕು ಬೇರೇನೂ ಅಲ್ಲ. ನಿಧಿ ನಿಕ್ಷೇಪಗಳಲ್ಲಿರುವ ಮಣಿ ಮಾಣಿಕ್ಯಗಳು ಹಾಗೆ ಧಗಧಗ ಕಾಂತಿ ಬೀರು ತ್ತಿವೆ. ಆದರೆ ಎಚ್ಚರ ಬೇಕಪ್ಪಾ! ಅಲ್ಲಿ ಒಂದು ವೇಳೆ ನಿಧಿಯನ್ನು ಕಾಪಾಡುತ್ತ ಯಾವ ಯಕ್ಷ ನಾದರೂ ಇರಬಹುದು. ಅವನು ನಮ್ಮನ್ನು ತಡೆದರೆ ನಾವೇನು ಮಾಡಬೇಕು? ನಿಮ್ಮ ಉಪಾಯ ವೇನು?" ಎಂದು ಕೇಳಿದನು.

"ಆ ಸಂಗತಿ ಗುರುವಾದ ನೀವೇ ನಮಗೆ ಹೇಳ ಬೇಕು. ನಮಗೇನು ಗೊತ್ತಿದೆ?" ಎಂದನು ದೊಡ್ಡ ಶಿಷ್ಯ.



ಚಿಕ್ಕ ಶಿಷ್ಯನು ಅವಹೇಳನೆ ಮಾಡುವವನಂತೆ ನೇಗಾಡುತ್ತ, "ಎಲೋ ಅಣ್ಣ ಶಿಷ್ಯಾ, ನಿನಗೆ ಗುರುಗಳು ಕಲಿಸಿಕೊಟ್ಟ ಮಂತ್ರಗಳೇನೋ ಬಾಯಿಗೆ ಬಂದರೂ ಲೋಕಜ್ಞಾನ ಸಾಸಿವೆ ಕಾಳಿನಷ್ಟೂ ಇಲ್ಲ. ನಮಗೆ ನಿಧಿಯನ್ನು ತೋರಿಸಿದ ಈ ಮಂತ್ರದಂಡವು, ಎಂತಹ ಅದ್ಭುತ ಶಕ್ತಿಯುಳ್ಳದ್ದೆಂದು ಸ್ವಲ್ಪ ಆಲೋಚನೆ ಮಾಡಿ ನೋಡು. ಆ ನಿಧಿಯನ್ನು ಕಾಯುವ ಯಕ್ಷನ ತೊಡೆಗೆ ಈ ಮಂತ್ರದಂಡವನ್ನು ತಾಗಿಸಿದೆವೆಂದರೆ, ಅವನು ಪಟಾಕಿಯ ಹಾಗೆ ಸಿಡಿದು ಹೋಗುತ್ತಾನೆ!" ಎಂದು ಇನ್ನಿಷ್ಟು ನಕ್ಕನು.

"ಚೆನ್ನಾಗಿ ಹೇಳಿದೆ ಉಪಶಿಷ್ಯಾ! ಧೈರ್ಯವೆಂದರೆ ನಿನ್ನದೇ. ನನ್ನ ಮಂತ್ರಗಳ ಬೋಧನೆ ನಿನ್ನ ಮೈಗೆ ಚೆನ್ನಾಗಿ ಹತ್ತಿಕೊಂಡಿದೆ. ಸರಿ. ಇನ್ನು ಮಾತಾಡದೆ ನಿಃಶಬ್ದವಾಗಿ ಮುಂದಕ್ಕೆ ನಡೆಯಿರಿ!" ಎಂದನು ಭೈರವ ಬೈರಾಗಿ. ನಡೆಯುವಾಗ ಯಾವ ಸ್ಪರ್ಶವಾದರೂ ಮೊದಲು ಮಂತ್ರದಂಡಕ್ಕೇ ಆಗುವಂತೆ ಭೈರವ ಬೈರಾಗಿ ಆ ದಂಡವನ್ನು ಚಾಚಿ ಹಿಡಿದಿದ್ದನು.

ಅಷ್ಟರಲ್ಲಿ ಅವರಿಗೆ ಮೇಲಿನಿಂದ ಭೂಕಂಪವಾಗುವಂತಹ ಧ್ವನಿಯೂ, ಆನೆಯ ಘೀಂಕಾರವೂ ಕೇಳಿಸಿತು. ಮೂವರೂ ಕೆಲವು ಕ್ಷಣಗಳವರೆಗೆ ಹೆದರಿ ಸುಮ್ಮನೆ ನಿಂತರು. ಆ ಮೇಲೆ ಭೈರವ ಬೈರಾಗಿ ಧೈರ್ಯ ತಂದುಕೊಂಡು, "ಎಲೋ ಶಿಷ್ಯರೇ, ನಮ್ಮ ಆಲದ ಮರದ ಕೆಳಕ್ಕೆ ಕಾಡಾನೆಗಳೋ, ಗಜ ಸೈನಿಕರೋ, ಬಂದಹಾಗಿದೆ. ಅವರು ನಮ್ಮ ರಹಸ್ಯ ಸುರಂಗ ಮಾರ್ಗವನ್ನು ಗುರುತಿಸಿ, ಒಳಗೆ ಇಳಿದು ಗಿಳಿದು ಬಂದರೆ ನಾವೇನು ಮಾಡುವುದು?" ಎಂದನು.

"ಏನು ಮಾಡಬೇಕೆಂದು ಗುರುಗಳಾದ ನೀವೇ ಹೇಳಬೇಕು. ನಮಗೇನು ಗೊತ್ತಿದೆ ಮಣ್ಣು?" ಎಂದನು ದೊಡ್ಡ ಶಿಷ್ಯ.

ಚಿಕ್ಕ ಶಿಷ್ಯನು ಕಿಸಕ್ಕನೆ ನಗುತ್ತ, "ಕಾಡು ಮೃಗಗಳಿಗೂ, ಗಜ ಸೈನಿಕರಿಗೂ ನೆಲವನ್ನು ಪರೀಕ್ಷೆ ಮಾಡುತ್ತ ತಿರುಗುವುದೇ ಕೆಲಸವೋ? ಅವರಿಗೆ ಬೇರೆ ಕೆಲಸವಿಲ್ಲವೆಂದುಕೊಂಡಿರೇನು? ನಾವೀಗ ಅಲ್ಲಿ ಕಾಣುವ ರತ್ನ ರಾಶಿಗಳ ಹೊರತು ಬೇರೆ ಯಾವುದನ್ನೂ ಆಲೋಚಿಸಬಾರದು. ಇದಕ್ಕಲ್ಲವೇ ದೃಢ ದೀಕ್ಷೆ ಅನ್ನುವುದು? ಇಂಥಾದ್ದೆಲ್ಲಾ ಸಿದ್ಧಿಯಾಗಲಿಕ್ಕೆ ದೀಕ್ಷೆಯೇ ಮುಖ್ಯ!" ಎಂದನು.

ಭೈರವಗುರು "ನಿಜ ನಿಜ" ಎನ್ನುವಾಗಲೇ, ಮೇಲು ಭಾಗದಿಂದ ದೊಡ್ಡದೊಂದು ಮಣ್ಣಿನ ಹೆಂಟೆ ದಭೀಲನೆ ಅವರ ಮುಂದೆ ಬಿದ್ದಿತು. ಮತ್ತೆ ಗುರು ಶಿಷ್ಯರು ಭಯಕಂಪಿತರಾಗಿ, ಸಣ್ಣದನಿಯಿಂದ ಅರಚುತ್ತ ಸುರಂಗಮಾರ್ಗದಲ್ಲಿ ಮುಂದಕ್ಕೆ ಓಡ ತೊಡಗಿದರು. ಅಲ್ಲಿ ನೀರು ಕ್ರಮೇಣ ಕಡಿಮೆ ಯಾಯಿತು.

ಆ ಸುರಂಗದ ಮೇಲಿನ ನೆಲದಲ್ಲಿ ಕೆರೆಕಟ್ಟೆಯ ಹತ್ತಿರ ಗುಡಾರಗಳನ್ನು ನಿರ್ಮಿಸಲು, ಕಟುಕಕರಡಿಯವನೂ, ಆಟವಿಕನೂ ಒಳ್ಳೆಯ ಸ್ಥಳವನ್ನು

ಹುಡುಕುತ್ತ ಆನೆಯ ಮೇಲೆ ಬರುತ್ತಿದ್ದರು. ಆಗ ತಾವು ಏರಿಕೊಂಡಿದ್ದ ಆನೆಯ ಕಾಲೊಂದು ಭೂಮಿಯಲ್ಲಿ ಸ್ವಲ್ಪ ಇಳಿದುಹೋಗಿ, ಅದು ಹೆದರಿ ಘೀಂಕರಿಸುತ್ತ ಮುಗ್ಗುರಿಸಿ ಬೀಳುವುದನ್ನು ನೋಡಿ ಅದರ ಮೇಲೆ ಕುಳಿತಿದ್ದವರು ಕೆಳಗೆ ಹಾರಿಕೊಂಡರು. ಬಿದ್ದ ಆನೆ ಸೊಂಡಿಲಿನಿಂದ ನೆಲಕ್ಕೆ ಗಟ್ಟಿಯಾಗಿ ಹೊಡೆಯುತ್ತಾ ಮೇಲೆದ್ದು ನಿಂತಿತು.

ಕಟುಕಕರಡಿಯವನು ಸುತ್ತಲೂ ತಲೆ ತಿರುಗಿಸಿ ನೋಡಿ, ಆಟವಿಕನೊಂದಿಗೆ, "ನಮ್ಮ ಕಾಳೀವರ್ಮದೊರೆಯೂ, ಕೆಂಗಣ್ಣಮಾಂತ್ರಿಕರೂ ಬಂದು ಈ ಪ್ರದೇಶವನ್ನು ನೋಡಿದರೆ ಚೆನ್ನಾಗಿತ್ತು, ಪಕ್ಕದಲ್ಲೇ ಕೆರೆಯಿದೆ. ಇಲ್ಲಿ ನೀರಿಗೇನೂ ಕೊರತೆಯಿಲ್ಲ. ನಾವು ಹಿಡಿಯಬೇಕಾದ ಜಿತಕೇತು ರಾಜನ ಕೋಟೆ ಕೂಡಾ ಹತ್ತಿರದಲ್ಲೇ ಇದೆ. ಎಷ್ಟೇ ಮಂತ್ರ ತಂತ್ರ ಬಲ್ಲವನಾದರೂ ಆ ಮಾಯಾಮರ್ಕಟನು ತನ್ನ ಕೋತಿಯ ಸ್ವಭಾವದಿಂದ ಈ ಆಲದ ಮರದ ಕಡೆಗೆ ಬಂದನಾದರೆ, ಅವನನ್ನು ಸುಲಭವಾಗಿ ಹಿಡಿದು, ನಮ್ಮ ಮಹಾ ಮಾಂತ್ರಿಕ ಗುರುಗಳ ಮಂತ್ರದಂಡದ ವಿಷಯ ತಿಳಿದುಕೊಳ್ಳಬಹುದಿತ್ತು" ಎಂದನು.

ಆದರೆ ಆಟವಿಕನು ಕರಡಿಕಟುಕನು ಹೇಳಿದ ಮಾತಿಗೆ ಲಕ್ಷ್ಯವನ್ನೇ ಕೊಡಲಿಲ್ಲ. ಅವನು ಆನೆಯ ಕಾಲು ಮುರಿದು ಗಿರಿದು ಹೋಯಿತೇನೋ ಎಂದು ಪರೀಕ್ಷಿಸುವುದರಲ್ಲಿ ಮಗ್ನನಾದನು. ನೋವು ಗೀವು ಆಗಿ ಅದು ಸರಿಯಾಗಿ ನಡೆಯುವುದೋ ಇಲ್ಲವೋ ಎಂಬ ಸಂದೇಹದಿಂದ, ಅದನ್ನು ಆಚೆಗೂ ಈಚೆಗೂ ನಡೆಯಿಸಿದನು. ಅದು ಸ್ವಲ್ಪವೂ ಕುಂಟದೆ ನಡೆಯುವುದನ್ನು ನೋಡಿ, ತೃಪ್ತಿಯಿಂದ ಕಟುಕಕರಡಿಯುವನೊಂದಿಗೆ, "ಓಯ್, ಭಲ್ಲೂಕ ದೊರೆಗಳೇ. ನಮ್ಮ ವಾಹನದ ಕಾಲಿಗೆ ಏನೂ ಊನವಾಗಲಿಲ್ಲ. ನಮ್ಮ ಅದೃಷ್ಟ!" ಎಂದನು.

ಆ ಸಮಯದಲ್ಲಿ ಆಲದ ಮರದ ಕೊಂಬೆಯಿಂದ ಒಬ್ಬ ಬೇಡನು ಕೆಳಕ್ಕೆ ಹಾರುತ್ತ, "ನಿಮ್ಮ ಪುಣ್ಯಾನ್ನಿ! ಕಳ್ಳ ಬೈರಾಗಿಗಳನ್ನು ನುಂಗಿದ ಭೂಸುರಂಗದ ಬಾಯಿಯ ಕಡೆಗೆ ನಿಮ್ಮ ಆನೆ ಹೋಗದಿದ್ದುದು ನಿಮ್ಮ ದೊಡ್ಡ ಪುಣ್ಯ! ಅದು ಅಲ್ಲಿ ಕಾಲಿಟ್ಟಿದ್ದರೆ ಆ ಸುರಂಗವು ನಿಮ್ಮನ್ನೂ ನಿಮ್ಮ ಆನೆಯನ್ನೂ ಬೈರಾಗಿಗಳನ್ನು ನುಂಗಿದ ಹಾಗೇ ನುಂಗಿ ಮಾಯ ಮಾಡಿಬಿಡುತ್ತಿತ್ತು, ಗೊತ್ತಾ!" ಎಂದನು.

ಆಕಸ್ಮಾತ್ತಾಗಿ ಅವನನ್ನು ನೋಡಿ ಕಟುಕಕರಡಿಯವನು "ಹೇ! ಶಿರೀಷವನ ಭೈರವಾ! ಯಾರೋ ನೀನು! ಕಳ್ಳ ಮಾಯಾಮರ್ಕಟನ ಶಿಷ್ಯನೇನೋ! ನಿಜ ಹೇಳು!" ಎಂದು ಕೂಗುತ್ತ ಚಪಗೊಡಲಿಯನ್ನೆತ್ತಿ ಆ ಬೇಡನ ಕಡೆಗೆ ಹೋದನು.

—(ಇನ್ನೂ ಇದೆ)





# ಕರಡಿಕೆಂಗಣ್ಣ

## ೨೦

[ಮಂತ್ರದಂಡವನ್ನು ತೆಗೆದುಕೊಂಡು ಹೋದ ಬೈರಾಗಿಯ ಶಿಷ್ಯರಿಬ್ಬರು ಅದರ ಪ್ರಭಾವವನ್ನು ತಿಳಿಯಲು ಅದನ್ನು ನೆಲಕ್ಕೆ ಹೊಡೆದಾಗ, ಅಲ್ಲೊಂದು ಸುರಂಗ ಕಂಡುಬಂತು. ಒಳಗೆ ನಿಧಿಯಿರುವುದೆಂಬ ಆಶೆಯಿಂದ ಅವರು ತಮ್ಮ ಗುರುವಿನೊಂದಿಗೆ ಅದರೊಳಗೆ ಇಳಿದರು. ಆಗ ಸಮೀಪದ ಕೆರೆಯಬಳಿಗೆ ಬಂದ ಕಟುಕಕರಡಿಯವನು ಒಬ್ಬ ಬೇಡನನ್ನು ನೋಡಿ ಮಾಯಾಮರ್ಕಟನ ಕಡೆಯವನೆಂದು ಅವನನ್ನು ಹಿಡಿಯಲು ಹೋದನು.]

ಕರಡಿ ಮೂತಿಯ ಮನುಷ್ಯಾಕಾರದಲ್ಲಿ ಭಯಂಕರನಾಗಿ ಕಾಣುವ ಕಟುಕಕರಡಿಯವನನ್ನು ನೋಡಿ, ಅವನ ಕೈಯಲ್ಲಿ ತಳತಳಿಸುವ ಹರಿತವಾದ ಕೊಡಲಿ ಎಲ್ಲಿ ತನ್ನ ಮೇಲೆ ಬೀಳುವುದೋ ಎಂದು ಹೆದರಿ ಬಾಯಿಮುಚ್ಚಿಕೊಂಡು, ಓಡಿಹೋದರೂ ಕೊಡಲಿ ಹಾರಿ ಬಂದು ಹೊಡೇದೀತೆಂಬ ಅನುಮಾನದಿಂದ ಆ ಬೇಡನು ನಿಂತಲ್ಲೇ ಮರಗಟ್ಟಿದನು. ಬಹು ಕಷ್ಟದಿಂದ ಕೈಗಳನ್ನು ಜೋಡಿಸಿ, "ಸತ್ಯಕ್ಕೂ ಮಾಯಾಮರ್ಕಟನ್ನ ನಾಕಾಣೆ. ಹೋದವಾರ ಕಾಡಿನಲ್ಲಿ ವಿಚಿತ್ರ ಮನುಷ್ಯರನ್ನೂ, ಭಯಂಕರನಾದ ರಾಕ್ಷಸನನ್ನೂ ದೂರದಿಂದ ನೋಡಿದೆನೇ ಹೊರತು ಮಾತಾಡಲಿಲ್ಲ. ನೀವು ಹೇಳುವ ಮಾಯಾಮರ್ಕಟ ಯಾರೋ ನಾನರಿಯೆ. ಕೆಂಪು ಬಟ್ಟೆಯುಟ್ಟುಕೊಂಡು, ನೆತ್ತೀಮೇಲೆ ಜುಟ್ಟು ಕಟ್ಟಿಕೊಂಡಿದ್ದವನೊಬ್ಬ ಶಂಖ ಊದುತ್ತಾ ಓ ಮಾಯಾಮರ್ಕಟಾ ಎಲ್ಲಿದ್ದೀಯಾ ಅಂತ ಕೂಗುತ್ತಾ ಇರುವುದು ಮಾತ್ರ ಕಿವಿಗೆ ಬಿದ್ದಿತ್ತು! ಇಷ್ಟೇ ಹೊರತು ಇನ್ನೇನೂ ನಾನರಿಯೆ! ಮಾದೇವನಾಣೆಗೂ ಇದು ಸತ್ಯ" ಎಂದನು.

ಬೇಡನ ಬಾಯಿಯಿಂದ ಹೊರಡುವ ಮಾತುಗಳನ್ನು ಕೇಳ ಕೇಳುತ್ತಿದ್ದಂತೆ ಕಟುಕ ಕರಡಿಯವನಿಗೆ



"ಅದೇ ನನಗೂ ಗೊತ್ತಾಗುವುದಿಲ್ಲ. ನಮ್ಮ ಮಹಾ ಕೆಂಗಣ್ಣ ಮಾಂತ್ರಿಕರಿಗೆ ಸ್ಪರ್ಧಾಳುವಾಗಿ ಇನ್ನೊಬ್ಬ ಮಾಂತ್ರಿಕನಾರಾದರೂ ಹೊರಟಿರುವನೋ ಏನೋ? ಅದಿರಲಿ, ಎಲೋ ಬೇಡಾ, ನೀನು ಹೇಳಿದ ಕಳ್ಳ ಬೈರಾಗಿಗಳು ಯಾರು? ಯಾವುದೋ ಸುರಂಗ ಗಿರಂಗ ಅಂದೆಯಲ್ಲಾ! ಅದೆಲ್ಲಾ ಏನು ಕತೆ? ಎಲ್ಲಿ? ಯಾವಾಗ ಏನು ಕದ್ದರು?" ಎಂದು ಕಟುಕ ಕರಡಿ ಯವನು ಕೇಳಿದನು.

"ಹೀಗೆ ಬನ್ನಿ" ಎಂದು ಬೇಡನು ಅವನನ್ನು, ಗುರು ಬೈರಾಗಿ ಶಿಷ್ಯರೊಂದಿಗೆ ಇಳಿದು ಹೋದ ಸುರಂಗದ ಬಾಯಿಯ ಬಳಿಗೆ ಕರೆದೊಯ್ದು, ಒಂದು ಮಂತ್ರದಂಡದಿಂದ ಅವರು ಮಾಡಿದ ಅದ್ಭುತಗಳನ್ನು ಕುರಿತು ಹೇಳಿದನು.

ಆ ಮಂತ್ರದಂಡವು ಕರಡಿಕೆಂಗಣ್ಣ ಮಾಂತ್ರಿಕನಿಂದ ಮಾಯಾಮರ್ಕಟನು ಅಪಹರಿಸಿಕೊಂಡು ಹೋದುದೇ ಎಂದು ಕಟುಕಕರಡಿಯವನಿಗೆ ಅರ್ಥವಾಯಿತು. ಈಗ ಆ ಮಂತ್ರದಂಡವು ಮತ್ತಾರೋ ಬೈರಾಗಿಗಳ ಕೈಯಲ್ಲಿದೆಯೆಂದಾಯಿತು!

ಈ ಸಂಗತಿಯನ್ನು ತನ್ನ ಒಡೆಯರಿಗೆ ತಿಳಿಸ ಬೇಕೆಂದು ಕಟುಕಕರಡಿಯವನು ತಿರುಗುವಷ್ಟರಲ್ಲಿ, ಕಾಳೀವರ್ಮನು ಕುದುರೆಯ ಮೇಲೆ ಅಲ್ಲಿಗೇ ಬಂದು, "ನರಭಲ್ಲೂಕಾ, ನಾವು ಗುಡಾರ ಹಾಕಿ ಕೊಳ್ಳಲಿಕ್ಕೆ ಈ ಸ್ಥಳವು ಅನುಕೂಲವಾಗಿದೆ, ಅಲ್ಲವೇ? ಸಮೀಪದಲ್ಲೇ ಒಳ್ಳೆಯ ಕೆರೆಯೂ ಇದೆ. ಇನ್ನೇನಾಗ ಬೇಕು ನಮಗೆ?" ಎಂದನು.

"ಈಗ ಅದಕ್ಕಿಂತ ಮುಖ್ಯ ವಿಷಯವೊಂದು ಗೊತ್ತಾಗಿದೆ ದೊರೆಗಳೇ! ಗುಡಾರ ನಿರ್ಮಾಣದ ಮಾತು ಆ ಮೇಲೆ ನೋಡುವಾ. ಮೊದಲು ಈ ಬೇಡರವನು ಹೇಳುವ ಮಾತುಗಳನ್ನು ಕೇಳಿರಿ. ಇವನು ಆಶ್ಚರ್ಯಕರವಾದ ಎರಡು ವಿಷಯ ಹೇಳು ತ್ತಾನೆ!" ಎಂದನು ಕರಡೀ ಮನುಷ್ಯ.

ಆಶ್ಚರ್ಯದಲ್ಲಿ ಏನೇನೋ ತೋರಿ ಗಜಿಬಿಜಿಯಾಗಿ, ತನ್ನ ಕೊಡಲಿಯನ್ನು ಕೆಳಗಿಳಿಸಿ, "ಎಲೋ ಬೇಡಾ! ನೀನೇನೋ ಮುಖ್ಯವಾದ ಸಮಾಚಾರವನ್ನೇ ಹೇಳುವ ಹಾಗೆ ನನಗೆ ಅನುಮಾನವಾಗುತ್ತದೆ. ನಿನ್ನ ಮಾತಿನಲ್ಲಿ ಅಡಗಿರುವ ರಹಸ್ಯವೇನೆಂಬುದೆಲ್ಲಾ ನನ್ನ ಯಜಮಾನ ಕಾಳೀವರ್ಮ ಪ್ರಭುಗಳಿಗೇ ತಿಳಿಯಬೇಕು. ಓಡಿಬಿಡ ಬೇಡ, ನಿಲ್ಲು. ನಿನಗೆ ನಾನೇನೂ ಮಾಡಲಾರೆ. ಹೆದರಬೇಡ. ಯಾವ ಭಯವೂ ಇಲ್ಲ." ಎಂದು ಸಮಾಧಾನವಾಗಿ ಹೇಳಿದನು.

ಕಟುಕಕರಡಿಯವನೊಂದಿಗಿದ್ದ ಆಟವಿಕನು ಕೂಡಾ ಆಶ್ಚರ್ಯಪಡುತ್ತ, "ಭಲ್ಲೂಕಯ್ಯಾ, ಈ ಬೇಡನು ಹೇಳುವ ಮಾತು ನಂಬುವಂಥಾದ್ದೇನಾ? ಒಬ್ಬ ಮಾಂತ್ರಿಕರೂ, ಉಗ್ರದಂಡ ರಾಕ್ಷಸನೂ ನಮ್ಮೊಂದಿಗೇ ಇರುವಾಗ, ಮತ್ತೊಬ್ಬ ಶಂಖದ ಮಾಂತ್ರಿಕನೂ ರಾಕ್ಷಸನೂ ಕಾಡಿನಲ್ಲಿ ತಿರುಗುತ್ತಿರುವರೆಂದರೆ ಏನು ಅರ್ಥ?" ಎಂದನು.

ಕಾಳೀವರ್ಮನು ಆ ಬೇಡನನ್ನು ನೋಡಿ ಏನು ಸಂಗತಿ ಎಂದು ಕೇಳಿದನು. ಬೇಡನು ತಾನು ಕಾಡಿನಲ್ಲಿ ನೋಡಿದ ಶಂಖ ಮಾಂತ್ರಿಕನನ್ನು ಕುರಿತು, ರಾಕ್ಷಸ ನನ್ನು ಕುರಿತು, ಸುರಂಗದೊಳಗೆ ಹೋದ ಬೈರಾಗಿ ಗಳನ್ನು ಕುರಿತು ಇನ್ನೊಮ್ಮೆ ಹೇಳಿದನು.

ಅದನ್ನು ಕೇಳಿ ಕಾಳೀವರ್ಮನು ಕುತೂಹಲದಿಂದ, ಭೂಸುರಂಗದ ಮುಖದ್ವಾರದ ಬಳಿಗೆ ಹೋಗಿ, ಒಂದುಸಾರಿ ಅದರೊಳಗೆ ಬಗ್ಗಿ ನೋಡಿ, ಜಾಗರೂಕತೆ ಯಿಂದ ಕೆಳಗಿಳಿದನು. ಅವನು ಅಲ್ಲಿರುವ ಮೆಟ್ಟಿಲು ಗಳನ್ನೆಲ್ಲ ಇಳಿದು ನೆಲಕ್ಕೆ ಕಾಲಿಟ್ಟು, ಪಾದದಳತೆಯ ನೀರಿನಲ್ಲಿ ಮುಂದೆ ಹೋಗಲು, ದೂರದಲ್ಲಿ ಒಂದು ಚಿಕ್ಕ ಬೆಳಕೂ, ಅದರ ಕಡೆಗೆ ನಡೆಯುತ್ತಿರುವ ಮೂರು ಕಪ್ಪಗಿನ ಮಾನವಾಕಾರಗಳೂ ಕಂಡು ಬಂದುವು.



ಕಾಳೀವರ್ಮನು ಏನೋ ನೆನೆದು ಸುರಂಗದಿಂದ ಹಿಂದಿರುಗಿ, ಮೆಟ್ಟಿಲೇರಿ ಮೇಲೆ ಬಂದು, ಕಟುಕ ಕರಡಿಯುವನನ್ನು ನೋಡಿ, "ಎಲೋ ಕಟುಕ ನಾಯಕನೇ! ನಿನ್ನ ಆಟವಿಕ ಸೇವಕನನ್ನು ಇಲ್ಲಿ ಕಾವಲಿಗೆ ನಿಲ್ಲಿಸು. ನೀನು ಬೇಗನೆ ಹೋಗಿ ಮಾಂತ್ರಿಕ ಗುರುಗಳ ಹತ್ತಿರ, ಇಲ್ಲಿ ನೋಡಿದ್ದನ್ನೂ ಕೇಳಿದ್ದನ್ನೂ ಎಲ್ಲಾ ಹೇಳಿಬಿಡು. ಅಷ್ಟರೊಳಗೆ ನಾನು ಸುರಂಗ ಮಾರ್ಗದಲ್ಲಿ ಹೋಗಿ ಆ ಬೈರಾಗಿಗಳ ಹತ್ತಿರವಿದ್ದ ಗುರುಗಳ ಮಂತ್ರದಂಡವನ್ನು ಎಳೆದುಕೊಂಡು ಬರುತ್ತೇನೆ. ಅದಿಲ್ಲದೆ ನಮ್ಮ ಗುರುಗಳಿಗೆ ಎರಡು ಕೈಗಳೂ ಇಲ್ಲದ ಹಾಗಾಗಿದೆ." ಎಂದನು.

"ಅಪ್ಪಣೆ ದೊರೇ!" ಎಂದು ಕಟುಕಕರಡಿಯುವನು ನಾಲ್ಕಡಿ ಹೋಗಿ ಗಕ್ಕನೆ ನಿಂತು ಹಿಂದಿರುಗಿ ನೋಡಿ, "ಕಾಳೀವರ್ಮ ಪ್ರಭೋ! ಆ ಬೈರಾಗಿಗಳ ಹತ್ತಿರ ಇರುವಂಥಾದ್ದು ಮಹತ್ವವಾದ ಮಂತ್ರದಂಡ! ಈ ಸಂಗತಿ ನೆನಪಿಟ್ಟುಕೊಳ್ಳಿ!" ಎಂದನು. ಆ ಮೇಲೆ ತನಗೆ ತಾನೇ, "ಆ ಮಂತ್ರದಂಡವಿಲ್ಲದೆ ನನ್ನ ಈ ಕರಡೀ ಮುಖವೂ ಹೋಗಲಾರದು. ಬೇಗ ತನ್ನಿ ರಪ್ಪಾ" ಎಂದುಕೊಂಡನು.

ಕಾಳೀವರ್ಮನು ತನ್ನ ಕತ್ತಿಯನ್ನು ತೋರಿಸಿ, "ನರಭಲ್ಲೂಕಾ! ಈ ಬಂಗಾರದ ಹಿಡಿಯ ಕತ್ತಿಯಲ್ಲಿ ಮಹತ್ವವಿರಲಿ, ಇಲ್ಲದಿರಲಿ, ಎಂಥ ಮಂತ್ರದಂಡ ವನ್ನೂ ಇದಿರಿಸಬಲ್ಲಂಥಾದ್ದು ಇದು! ನನ್ನ ತಂದೆಯ ಕೈಯಲ್ಲಿರುವಾಗ ಅಜೇಯವಾಗಿ ಶತ್ರುಗಳನ್ನು ಚೆಂಡಾಡಿದಂಥಾದ್ದು. ಇನ್ನು ಈ ಕತ್ತಿ ಬೇಗದಲ್ಲೇ ಜಿತ ಕೇತುರಾಜನ ತಲೆಯನ್ನೂ ಕಡಿಯಬಹುದು" ಎಂದು ಕಡೆಯ ಮಾತನ್ನು ತನಗೆ ತಾನೇ ಹೇಳಿಕೊಂಡು ಹೋದನು. ಆಲದಮರದ ಮೇಲಿಂದ ಕೆಳಗೆ ಹಾರಿ ಇವರ ಕೈಯಲ್ಲಿ ಏಕೆ ಸಿಕ್ಕಿ ಹಾಕಿಕೊಂಡೆನೋ ಎಂದು ಚಡಪಡಿಸುತ್ತಿದ್ದ ಬೇಡರವನು, "ಅಯ್ಯಾ, ಇನ್ನು ನಾನು ನನ್ನ ಪಾಡಿಗೆ ಹೋಗಲೇ? ನಾನು ಕಾಡಿನಲ್ಲಿ ಸಿಕ್ಕಿದ್ದು ತಿಂದು ಜೀವಿಸುವವನು," ಎಂದು ಕೇಳಿದನು. ಆಗ ಕರಡಿಯುವನ ಬಂಟನಾದ ಆಟವಿಕನು



ಬೇಡನ ಬಳಿಗೆ ಬಂದು, "ಅಲ್ಲೋ, ನೀನೊಬ್ಬ ಬೇಡತಾನೇ. ನಾನೂ ಸಹಾ ಕಾಡಿನೊಳಗಿನವನೇ. ಬದುಕಲಿಕ್ಕಾಗಿ ನಾವಿಬ್ಬರೂ ಕಾಡಿನೊಳಗೆ ತಿರುಗುವವರೆಂದಾಯಿತು. ಈಗ ಒಂದು ಯೋಚನೆ ಹೇಳುತ್ತೇನೆ. ನೀನು ನನ್ನ ಹಾಗೆ ಯಾವನೋ ಒಬ್ಬ ಶಕ್ತಿವಂತನನ್ನು ಆಶ್ರಯಿಸಿ ಏಕೆ ಸುಖಪಡಬಾರದು ? ಈ ಚಂದ್ರಶಿಲಾ ನಗರದ ರಾಜ ಇನ್ನು ಹೆಚ್ಚು ದಿನ ಬದುಕಲು ಸಾಧ್ಯವಿಲ್ಲ. ಅವನನ್ನು ಮಣ್ಣುಗೂಡಿಸಿ ಗೆಲ್ಲುವವರ ಪಕ್ಷದಲ್ಲೇ ನಾವಿದ್ದು ಬಿಟ್ಟರೆ, ಇನ್ನು ಮುಂದೆ ಬೇಗದಲ್ಲೇ ರಾಜರ ಆಸ್ಥಾನದಲ್ಲಿ ಒಳ್ಳೆಯ ನೌಕರಿ ಸಿಗುವ ಸಾಧ್ಯತೆಯಿದೆ. ಯಾಕಾಗ ಬಾರದು? ನಮ್ಮ ಪಾದಗಳು ಕಾಡಿನ ಕಲ್ಲು ಮುಳ್ಳುಗಳನ್ನೇ ಮುದ್ದಿಸಿಕೊಂಡಿರಬೇಕೆ ? " ಎಂದನು.

ಬೇಡನು ಆಶಾ ದೃಷ್ಟಿಯಿಂದ ಆಟವಿಕನ ಮುಖ ನೋಡುತ್ತ, "ಕಾಡಣ್ಣಯ್ಯಾ! ಏನೋ ತುಂಬಾ ಸಂಗತಿ ಹೇಳುತ್ತೀ. ಚೆನ್ನಾಗೇ ಇದೆ. ಆದೆಲ್ಲಾ ನಿಜವಾಗೇ ನಡೆದೀತಾ ? ಈ ಜಿತಕೇತು ರಾಜ ತುಂಬಾ ಕೆಟ್ಟವ. ಯಾವುದಕ್ಕೂ ಉಪಯೋಗವಿಲ್ಲದವ. ಆದರೆ ಸೇನೆಗೇನೆ ಇರುವ ಬಲವಂತ. ಇಂಥಾ ರಾಜನನ್ನು ಸಿಂಹಾಸನದಿಂದ ಇಳಿಸುವಂಥ ಬಲವಂತರು ಯಾರಪ್ಪಾ! ನನಗೊಂದೂ ತೋರೋದಿಲ್ಲ! " ಎಂದನು.

ಆಟವಿಕನು ಸುರಂಗದಲ್ಲಿ ಇಳಿದುಹೋಗುವ ಕಾಳೀವರ್ಮನನ್ನು ತೋರಿಸುತ್ತ, "ಅಕೋ, ಅತನೇ! ಕಾಳೀವರ್ಮಾ ಅಂತ ಹೆಸರು. ಜಿತಕೇತುರಾಜ ಈತನನ್ನು ಅವಮಾನಪಡಿಸಿ ಮರಣದಂಡನೆ ಕೂಡಾ ಕೊಟ್ಟ. ಇವನು ತಪ್ಪಿಸಿಕೊಂಡು ಆ ರಾಜನ ಮೇಲೆ ಕತ್ತಿ ಮಸೆಯುತ್ತಿದ್ದಾನೆ. ನಾವೆಲ್ಲಾ ದೊಡ್ಡ ರಾಕ್ಷಸರೂ, ಮಹಾಮಂತ್ರವಾದಿಗಳೂ ಅವನ ಹಿಂಬಾಲಕರು, ಇವನೇ ಮುಂದಿನ ರಾಜ ಅಂತ ನಂಬು!" ಎಂದನು.

"ಹಾಗಾದರೆ ನಾನೂ ನಿನ್ನೊಂದಿಗೇ ಅಂತ ನಂಬು ಅಣ್ಣಾ!" ಎಂದು ಬೇಡನು ಆನಂದದಿಂದ ಆಟವಿಕನನ್ನು ಅಪ್ಪಿಕೊಂಡನು.

ಇಲ್ಲಿ ಹೀಗಿರಲು, ಸುರಂಗದೊಳಗೆ ಇಳಿದ ಕಾಳೀವರ್ಮನು ನೀರಿನಲ್ಲಿ ನಡೆಯುತ್ತ, ಸ್ವಲ್ಪ ದೂರ ಹೋಗಿ, ಮುಂದೆ ಮೆಲ್ಲನೆ ನಡೆಯುವ ಬೈರಾಗಿಗಳನ್ನು ನೋಡಿ, "ಓಯ್! ನಿಲ್ಲಿರಲ್ಲಿ!" ಎಂದು ಗರ್ಜನೆ ಹಾಕಿದನು. ಅದು ಆ ಗುಹೆಯೊಳಗೆ ಭಯಂಕರವಾಗಿ ಕೇಳಿಸಿತು.

ಆ ಕೂಗನ್ನು ಕೇಳಿ ಬೈರಾಗಿಗಳು ಹೆದರಿಬಿದ್ದು ಹಿಂದಿರುಗಿ ನೋಡಿದರು. ಚಿಕ್ಕ ಶಿಷ್ಯ ಬೈರಾಗಿ ಗದಗದ ನಡುಗುತ್ತ, "ಬೈರಾಗಿ ಗುರೋ! ನಿಧಿಯ ರಕ್ಷಕನಾದ ಯಕ್ಷನು ನಮ್ಮ ಪ್ರಾಣ ತೆಗೆಯಲು ಬರುತ್ತಿದ್ದಾನೆ! ಕಾಪಾಡಿ!" ಎಂದನು ನಡುಗುವ ದನಿಯಿಂದ.

ಗುರು ಬೈರಾಗಿ ಕೂಡಾ ಭಯಭ್ರಾಂತನಾಗಿ ಕಾಳೀವರ್ಮನನ್ನು ಪರೀಕ್ಷಿಸಿ ನೋಡುತ್ತ, "ಓ ಶಿಷ್ಯೋಪಶಿಷ್ಯರೇ! ನಾವು ಅಷ್ಟೇನೂ ಹೆದರ

ಬೇಕಾಗಿಲ್ಲವೆಂದೇ ಕಾಣುತ್ತದೆ. ಬರುವವನು ಯಕ್ಷನ ಹಾಗಿಲ್ಲ. ಯಕ್ಷರು ಗಿಡ್ಡಗಾಗಿರುತ್ತಾರೆ. ಯಕ್ಷರ ರೋಮಗಳಿಂದ ಕಿರಣ ಹೊರಡುತ್ತಿರುತ್ತದೆಂದು ನನ್ನ ಗುರುಗಳಿಂದ ಕೇಳಿದ್ದೇನೆ. ಇವನು ಸಾಧಾರಣ ಮನುಷ್ಯನೇ. ನಮ್ಮ ಮಂತ್ರದಂಡದಿಂದ ನೆಲವನ್ನೇ ಒಡೆದಿರುವಾಗ, ಇವನ ತಲೆ ಒಡೆಯುವುದೊಂದು ಕಷ್ಟವೇ? ಹೆದರಿ ಕೈಕಾಲುಗೆಟ್ಟು ಏನಾದರೂ ಮಾಡಿಕೊಂಡು ಬಿಡಬೇಡಿ." ಎಂದನು.

ಆಗಲೇ ಕಾಳೀವರ್ಮನು ವೇಗವಾಗಿ ಅವರ ಬಳಿಗೆ ಬಂದು, "ಓಯ್! ಬೈರಾಗಿಗಳೇ! ನಿಮ್ಮ ಸಂಗತಿ ಪೂರಾ ನನಗೆ ಗೊತ್ತು. ಈ ಕತ್ತಿ ನೀವು ಕದ್ದಿರುವ ಮಂತ್ರದಂಡಕ್ಕಿಂತಲೂ ಹೆಚ್ಚು ಶಕ್ತಿಯುಳ್ಳ ಮಂತ್ರದ ಕತ್ತಿ. ಪರೀಕ್ಷಿಸಿ ನೋಡುವಿರಾ?" ಎಂದು ಕತ್ತಿಯನ್ನು ಕುಣಿಸಿದನು.



ಕತ್ತಿಯ ಸುಂಯ್ಯೆನ್ನುವದವನ್ನೂ ತಳತಳಿಕೆಯನ್ನೂ ನೋಡಿ ಬೈರಾಗಿ ಶಿಷ್ಯರಿಬ್ಬರೂ ಇನ್ನಷ್ಟು ಹೆದರಿ, "ಗುರುಗಳೇ! ಬೇಗ ಮಂತ್ರವನ್ನು ಜಪಿಸಿ ಅವನನ್ನು ಭಸ್ಮಮಾಡಿಬಿಡಿ!" ಎಂದರು.

ಗುರುಬೈರಾಗಿ ಒಳಗೊಳಗೇ ಹೆದರುತ್ತ, ಮಂತ್ರದಂಡವನ್ನು ಎತ್ತಿ, ಏನೋ ಮಂತ್ರವನ್ನು ಜಪಿಸಿದನು. ಅದರಿಂದೇನೂ ಮಹಿಮೆ ಹೊರಡಲಿಲ್ಲ. ಅಷ್ಟರಲ್ಲೇ ಕಾಳೀವರ್ಮ ಅವನ ಗುಂಡಿಗೆಗೆ ಕತ್ತಿಯ ಮೊನೆಯನ್ನು ಆನಿಸಿ, "ಲೋ ಹುಚ್ಚು ಬೈರಾಗೀ! ಆ ಮಂತ್ರದಂಡವು ಅದರ ಯಜಮಾನನೊಬ್ಬನ ಮಾತು ಮಾತ್ರವೇ ಕೇಳುವಂಥಾದ್ದು. ನೀನು ಅದರ ಪರೀಕ್ಷೆಗೆ ಹೋಗಿ ಅವಮಾನ ಬೇರೆ ಮಾಡಿದ್ದೀಯೇ! ಅದನ್ನೀಗ ನನ್ನ ಕೈಗೆ ಕೊಡುವಿಯಾ. ಕತ್ತಿಯನ್ನು ನಿನ್ನ ಎದೆಯೊಳಗೆ ಇಳಿಸಿಬಿಡಲೆ?" ಎಂದನು ಕಣ್ಣು ತಿರುಗಿಸುತ್ತ.

ಗುರು ಬೈರಾಗಿ ಕೊಡಲೇ ಬಿಡಲೇ ಎಂದು ತಟಪಟಾಯಿಸುವುದನ್ನು ನೋಡಿ ಶಿಷ್ಯರಿಬ್ಬರೂ ಒಂದೇ ಕಂಠದಿಂದ, "ಗುರುವೇ! ಕೊಟ್ಟುಬಿಡ್ರೀ!" ಎಂದರು. ಆ ಮೇಲೆ ಎರಡನೇ ಶಿಷ್ಯ, "ನಮಗೇಕೇ? ಅದಕ್ಕೆ ಮಹತ್ವವೇನಾದರೂ ಇರುತ್ತಿದ್ದರೆ ಇಷ್ಟರೊಳಗೇ ನಮ್ಮನ್ನು ಕಾಪಾಡಬೇಕಿತ್ತು. ನಮ್ಮ ಪಾಲಿಗೆ ಅದು ಚಳಿ ಕಾಯಿಸುವ ಬೆಂಕಿಗೆ ಮಾತ್ರ ಉಪಯೋಗವಾದೀತು" ಎಂದನು.

ಗುರುಬೈರಾಗಿ ಧೈರ್ಯ ತಂದುಕೊಂಡು, "ಚೆನ್ನಾಗಿ ಹೇಳಿದಿರಿ ಶಿಷ್ಯೋಪಶಿಷ್ಯರೇ!" ಎಂದು ಗಂಭೀರವಾಗಿ ಹೇಳಿ, ಕಾಳೀವರ್ಮನಿಗೆ ಮಂತ್ರದಂಡವನ್ನು ಕೊಡುತ್ತ, "ವೀರ ಯುವಕಾ! ನಿನ್ನ ಸಾಹಸ ಪ್ರತಾಪ ನೋಡಿ ತುಂಬಾ ಮೆಚ್ಚಿದೆನು! ಈ ಮಂತ್ರದಂಡವನ್ನು ಎತ್ತಿಕೊಂಡು ಹೋಗಿ, ಜಿತಕೇತು ರಾಜನ ದತ್ತ ಪುತ್ರಿಯನ್ನು ಮದುವೆಮಾಡಿಕೊಂಡು ನೂರು ವರ್ಷ ಚಂದ್ರಶಿಲಾ ನಗರವನ್ನು ಪಾಲಿಸುವಂಥವನಾಗು! ಇದೇ ನಾನು ನಿನಗೆ ಮಾಡುವ ಶುಭಾಶೀರ್ವಾದ!" ಎಂದನು.



ಕಾಳೀವರ್ಮನು ಅವನ ಮಾತು ಕೇಳಿ ನಗುತ್ತ, ಮಂತ್ರದಂಡವನ್ನು ತೆಗೆದುಕೊಂಡು ಮುಂದೆ ಹೋಗಲೋ, ಹಿಂದೆ ಹೋಗಲೋ ಎಂದು ಆಲೋಚಿಸಿದನು. ಆಗ ಗುರು ಬೈರಾಗಿ ಅವನ ಕಿವಿಯ ಹತ್ತಿರ ಮುಖ ತಂದು, ಗುಟ್ಟು ಹೇಳುವವನಂತೆ, "ವೀರ ಯುವಕಾ! ಇಲ್ಲಿ ಸಿಗುವ ನಿಧಿಯಲ್ಲಿ ನಮಗೂ ಸ್ವಲ್ಪ ಭಾಗ ಕೊಟ್ಟರೆ ಧರ್ಮಸಮ್ಮತವಾಗಿರುತ್ತದೆಂದು ಹೇಳಬಹುದಷ್ಟೆ?" ಎಂದನು.

ಗುರುಬೈರಾಗಿಯ ಈ ಮಾತು ಕೇಳಿ ಕಾಳೀವರ್ಮನಿಗೆ ಮಿಂಚಿನಂತೆ ಒಂದು ಆಲೋಚನೆ ಬಂತು. ಅವನು ಬೈರಾಗಿಯನ್ನು ಪರೀಕ್ಷಿಸಿ ನೋಡಿ, "ಪಾಪ! ನೀವು ಈ ಸುರಂಗದಲ್ಲಿ ಏನೋ ನಿಧಿ ಇರಬೇಕೆಂದು ಆಶೆಪಟ್ಟು ಬಂದಿರುವ ಹಾಗಿದೆ..." ಎನ್ನಲು, ಗುರು ಬೈರಾಗಿ ನಗುತ್ತ, "ಆಶೆ ಬಿಟ್ಟ ಮನುಷ್ಯರಾರಪ್ಪಾ? ಮುಖ್ಯವಾಗಿ ದುರಾಶೆಯೂ ಅತ್ಯಾಶೆಯೂ ಒಳ್ಳೆಯದಲ್ಲ ಅಷ್ಟೇ." ಎಂದನು.

"ಆದರೆ ನನ್ನ ಉದ್ದೇಶ ಈ ಸುರಂಗವು ರಾಜನ ಆವರಣದೊಳಗಿನಿಂದ ಆಪತ್ಕಾಲದಲ್ಲಿ ಶತ್ರುಗಳಿಗೆ ಸಿಕ್ಕದಂತೆ ತಪ್ಪಿಸಿಕೊಳ್ಳಲು, ಈಗ ಇರುವ ರಾಜನ ವಂಶದವರು ತೋಡಿಸಿದ ಕಳ್ಳ ದಾರಿಯಾಗಿರಬೇಕು. ಆದರೆ ನೀನು ಹೇಳುವ ಹಾಗೆ ಇಲ್ಲಿ ಏನಾದರೂ ನಿಧಿ ನಿಕ್ಷೇಪ ಇದ್ದರೆ, ಅವುಗಳನ್ನು ನೀವು ತೆಗೆದು ಕೊಂಡು ಹೋಗಲು ನನ್ನಿಂದ ಯಾವ ಅಡ್ಡಿಯೂ ಇಲ್ಲ. ಈಗ ನನ್ನೊಂದಿಗೆ ಈ ಸುರಂಗಮಾರ್ಗದಲ್ಲಿ ಮೂವರೂ ಬರುವಿರಾ ಹಾಗಾದರೆ?" ಎಂದು ಕೇಳಿದನು ಕಾಳೀವರ್ಮ.

ಗುರುಬೈರಾಗಿ ಶಿಷ್ಯರೊಂದಿಗೆ ಆತ್ಮಾನಂದದಿಂದ, "ಆಹಾ! ವೀರ ಯುವಕಾ! ನಿನ್ನ ಮಾತಿನಂತೆಯೇ ಆಗಲಿ. ಮುಂದಿನಿಂದ ನೀನೇ ನಡೆ! ನಿನ್ನ ಹಿಂದೆಯೇ ನಾವು ಬರುತ್ತೇವೆ!" ಎಂದನು.

ಎಲ್ಲರೂ ಕೂಡಿ ದೂರದಲ್ಲಿ ಕಾಣುವ, ಸಣ್ಣ ಬೆಳಕಿನ ಪ್ರದೇಶವನ್ನು ಗುರಿಯಿಟ್ಟುಕೊಂಡು ನಿಶ್ಶಬ್ದವಾಗಿ ನಡೆದರು. ಆ ಸ್ಥಳದಲ್ಲಿ ಸುರಂಗ ಮಾರ್ಗವು ಅಂತ್ಯವಾಗಿ ಮೇಲಿನಿಂದ ಕಲ್ಲು ಹಲಗೆಯ ಸಂದಿನಿಂದ ಆ ಪ್ರಕಾಶವು ಬೀಳುತ್ತಿತ್ತು.

ಅಲ್ಲಿ ನಿಂತು ಕಾಳೀವರ್ಮನು ಬೈರಾಗಿಗಳೊಂದಿಗೆ, ನಾವೀಗ ಮೇಲೆ ಮುಚ್ಚಿರುವ ಕಲ್ಲು ಹಲಗೆಯನ್ನು ಎತ್ತಿಬಿಟ್ಟರೆ ಮೇಲೆ ಸೇರಿಬಿಡಬಹುದು. ಬಹುಃಶ ಅದು ರಾಜಭವನದ ಆವರಣವೇ ಇರಬಹುದು. ಇಲ್ಲಿರುವ ಮೆಟ್ಟಲಲ್ಲಿ ನಿಂತು ಒಂದು ಕೈ ಕೊಡಿರಿ ನೋಡುವಾ" ಎಂದನು.

ಎಲ್ಲರೂ ಕೂಡಿ ಮೇಲಿನ ಕಲ್ಲು ಹಲಗೆಯನ್ನು ಎತ್ತಿ ಬದಿಗೆ ದೂಡಿದರು. ಕೂಡಲೇ ಸುರಂಗದೊಳಗೆ ಸೂರ್ಯನ ಪ್ರಕಾಶವು ಬಿದ್ದು ಜಗಜಗವಾಯಿತು. ಮೇಲೆ ಕಲ್ಲಿನ ಹಲಗೆಯನ್ನು ಮುಚ್ಚಿಕೊಂಡಿದ್ದ ಮಣ್ಣು ಮತ್ತು ಹೂವಿನ ಗಿಡಗಳು ಚಿಕ್ಕ ಚಿಕ್ಕ ಶಬ್ದದೊಂದಿಗೆ ಬದಿಗೆ ಬಿದ್ದುವು.

ಮೊದಲು ಕಾಳೀವರ್ಮನು ಮೇಲೆ ಹತ್ತಿ, ಸುತ್ತಲೂ ಒಂದುಸಾರಿ ತಲೆ ತಿರುಗಿಸಿ ನೋಡಿದನು. ಅದು ಸುಂದರವಾದ ಉದ್ಯಾನವನವಾಗಿರುವುದು ಗೊತ್ತಾಯಿತು. ಅದರಾಚೆಗಿರುವ ರಾಜ ಸೌಧಗಳನ್ನು ನೋಡಿ, ಇದು ಅರಮನೆಗೆ ಸೇರಿದ ಉದ್ಯಾನವೆಂದೂ ತಿಳಿಯಿತು.

ಅನಂತರ ಅವನು ಸೈಗೆ ತೋರಿಸಿದ ಕೂಡಲೇ ಮೂವರು ಬೈರಾಗಿಗಳೂ ಮೇಲೆ ಬಂದರು, "ಅಹಾ! ಏನು ಸೌಂದರ್ಯ ಬೀರುವ ಉದ್ಯಾನವಿದು! ಬಹಳ ಬುದ್ಧಿವಂತನಪ್ಪಾ ನೀನು! ನೀನು ಊಹಿಸಿದಂತೆ ಯಾವುದೋ ರಾಜನ ಉದ್ಯಾನವೇ! ಯಾವುದೋ ರಾಜನೆಲ್ಲಿ ಬಂದ? ಜಿತಕೇತು ರಾಜನದೇ ಇದ್ದೀತು!" ಎಂದನು ಗುರು ಬೈರಾಗಿ.

ಕಾಳೀವರ್ಮನು ಬಾಯಿಗೆ ಕೈಯಿಟ್ಟು ಮೆಲ್ಲಗೆ ಮಾತಾಡುವಂತೆ ಎಚ್ಚರಿಸಿ, "ನಾವೀಗ ತುಂಬಾ ಅಪಾಯಕಾರೀ ಪ್ರದೇಶದಲ್ಲಿದ್ದೇವೆ. ನನಗೇನೂ ಪ್ರಾಣದ ಮೇಲೆ ಅಂಥಾ ಪ್ರೀತಿ ಏನಿಲ್ಲಾನ್ನಿ. ರಾಜ ಭಟರು ಬಂದು ಮುತ್ತಿಕೊಂಡರೆ ಜೀವದೊಂದಿಗೆ ಸಿಕ್ಕಿ ಬೀಳುವವನಲ್ಲ ನಾನು. ಆದರೆ ನಿಮ್ಮ ಸಂಗತಿ ಹೇಗೋ ನಾನರಿಯೆ! ನಿಧಿಯ ಆಶೆ ಇದ್ದವರಿಗೆ ಜೀವದ ಆಶೆಯೂ ಹೆಚ್ಚಾಗಿಯೇ ಇದ್ದೀತು! ಅದಕ್ಕೆ ತಕ್ಕ ಶಕ್ತಿ ಸಾಮರ್ಥ್ಯಗಳೂ ಇರಬೇಕಲ್ಲ? ಏನೆನ್ನು ವಿರಿ?" ಎಂದನು.

ಆ ಮಾತು ಕೇಳಿ ಗುರುಬೈರಾಗಿಯ ಮುಖವು ಭಯದಿಂದ ಕಪ್ಪಿಟ್ಟಿತು. "ನಾವೇನೋ ಮಂತ್ರ ಪೂಜೆ ಮೊದಲಾದ ವಿಧಿ ನಿಯಮ ಬಲ್ಲವರೇ ಹೊರತು ಜಗಳಾ ತಂಟೆಗೆ ಹೋಗುವವರಲ್ಲಪ್ಪಾ. ತಪಃಸಿದ್ಧಿ ಪಡೆದವರೂ ಅಲ್ಲ. ಬೇರೆ ದಾರಿಯಿಲ್ಲದೆ ಹೀಗೆ ತಿರುಗಾಟದ ಜೀವನ ನಡೆಸುತ್ತಿದ್ದೇವೆ. ಅನ್ಯಾಯವಾಗಿ ಸಾಯಲು ನಾವು ಸಿದ್ಧರಿಲ್ಲವಲ್ಲಾ! ಸುರಂಗದಲ್ಲಿ ನಿಧಿ ನಿಕ್ಷೇಪಗಳೂ ಇಲ್ಲವೆಂದಾಯಿತು.



ನಾವು ನಿನ್ನ ಹಿಂದೆ ಬಂದದ್ದೇ ತಪ್ಪೋ ಏನೋ? ನೀನು ಅನುಮತಿ ಕೊಟ್ಟರೆ ನಮ್ಮ ಪಾಡಿಗೆ ನಾವು ತಪ್ಪಿಸಿಕೊಂಡು ಓಡಿ ಹೋಗಿಬಿಡುತ್ತೇವೆ" ಎಂದನು.

ಮಂತ್ರದಂಡ ಕೈ ಸೇರಿದುದರಿಂದ, ಆ ಬಡ ಬೈರಾಗಿ ಗಳಿಂದ ಕಾಳೀವರ್ಮನಿಗೆ ಇನ್ನು ಆಗಬೇಕಾದುದೇನಿಲ್ಲ. ಹೋಗುವವರನ್ನು ತಾನೇಕೆ ತಡೆಯಬೇಕೆಂದು ಕೊಂಡು, "ನೀವು ಹೋಗಲು ನನ್ನಿಂದೇನೂ ಅಡ್ಡಿ ಯಿಲ್ಲ" ಎಂದನು ಕಾಳೀವರ್ಮ.

ಬೈರಾಗಿಗಳು ಯಾವ ದಿಕ್ಕಿಗೆ ಓಡುವುದೆಂದು ಆಚೀಚೆ ನೋಡುತ್ತಿರಲು, ಶಿಷ್ಯ ಬೈರಾಗಿಯೊಬ್ಬ ಸುರಂಗದೊಳಗೆ ಹಾರಿ ಹೋಗೋಣವೆಂದು ಸನ್ನೆ ಮಾಡಿದನು.

ಆಗಲೇ ಜಿತಕೇತು ರಾಜನು ಮಾಯಾಮರ್ಕಟ ಮಂತ್ರಿಯೊಂದಿಗೆ ಮಾತಾಡುತ್ತಾ ಈ ಕಡೆಗೆ ಬರುವುದು ಕಾಣಿಸಿತು. ಕಾಳೀವರ್ಮನು ತಟ್ಟನೆ ಹೂಗಿಡಗಳ ಹೊದರಿನ ಮರೆಯಲ್ಲಿ ಅಡಗುತ್ತ,

"ಬೈರಾಗಿಗಳೇ! ಸದ್ಯ ಅಡಗಿಕೊಳ್ಳಿ! ಒಂದುವೇಳೆ ನೀವು ಆ ಬರುವವರ ಕೈಗೆ ಸಿಕ್ಕಿಬಿದ್ದರೆ ಹೆದರಬೇಡಿ. ಕಳೆದುಹೋದ ಮಂತ್ರದಂಡವನ್ನು ಯಾವ ಬೋಳಪ್ಪನ ಕೈಯಲ್ಲಿಯೋ ನೋಡಿದೆವೆಂದೂ, ಆ ಸಂಗತಿಯನ್ನು ಗುಟ್ಟಾಗಿ ಹೇಳಲಿಕ್ಕೆ ಹೀಗೆ ಅಡಗಿ ಬಂದೆವೆಂದೂ ಹೇಳಿಬಿಡಿ. ಆ ಮೇಲೆ ಏನು ನಡೆಯುವುದೋ ನೋಡೋಣ" ಎಂದನು.

ಹೀಗೆ ಕಾಳೀವರ್ಮನು ಹೇಳಿ ಮುಗಿಸುವಷ್ಟರಲ್ಲಿ ಎಲ್ಲಿಯೋ ದೂರದಿಂದ ಶಂಖನಾದವು ಕೇಳಿಸ ತೊಡಗಿತು. ಅದರ ವಿಚಿತ್ರವಾದ ನಾದ ಗತಿಯನ್ನು ನೋಡಿ, ಮಾಯಾಮರ್ಕಟನು ಒಮ್ಮೆಗೇ ಚುರುಕಾಗಿ, ಪಕ್ಕದಲ್ಲಿದ್ದೊಂದು ಮರದ ಕೊಂಬೆಯ ಮೇಲೇರಿ, "ಅಹೋಯ್! ತಾಂತ್ರಿಕ ಗುರೋ! ನೀವು ಶಂಖ ಊದುವುದು ಕೋಟೆಯೊಳಗೋ, ಹೊರಗಿನಿಂದಲೋ?" ಎಂದು ತೀಕ್ಷ್ಣ ಕಂಠಸ್ವರದಿಂದ ಕೂಗಿದನು. ಅವನ ಕೂಗು ದಿಕ್ಕುಗಳಲ್ಲಿ ಪ್ರತಿಧ್ವನಿಸುವಂತಿತ್ತು.

ಶಂಖನಾದವು ನಿಂತುಹೋಯಿತು. ಮಾಯಾಮರ್ಕಟನು ಮರದ ಕೊಂಬೆಯಿಂದ ಕೆಳಗೆಹಾರಲು ನೋಡುವಾಗ, ಭಯದಿಂದ ದಿಕ್ಕುಗಳನ್ನು ನೋಡುತ್ತಿರುವ ಮೂವರು ಬೈರಾಗಿಗಳನ್ನು ನೋಡಿದನು. ಕೂಡಲೇ ದೊಡ್ಡದನಿಯಿಂದ ಕೀಚು ಗರ್ಜನೆ ಹಾಕಿ, "ಜಿತುಕೇತು ಮಹಾರಾಜಾ! ಇದು ನಿನ್ನ ರಾಜೋದ್ಯಾನವೇನಾ? ಬಾವಾ ಬೈರಾಗಿಗಳ ಮಠವೋ? ಭಟರನ್ನು ಕರೆದು ಕೂಡಲೇ ಆ ಪೊದರಿನ ಮರೆಯಲ್ಲಿರುವ ಬೈರಾಗಿಗಳನ್ನು ಬಂಧಿಸು. ಅವರು ತಪ್ಪಿಸಿಕೊಂಡು ಹೋಗಲು ತಡಕಾಡುತ್ತಿದ್ದಾರೆ! ಬಿಡಬಾರದು. ಜೋಕೆ!" ಎಂದು ಹೇಳಿ ನೆಲಕ್ಕೆ ಧುಮುಕಿದನು.

ಜಿತಕೇತುರಾಜನು ದೊಡ್ಡ ದೊಡ್ಡ ನಾಲ್ಕು ಚಪ್ಪಾಳೆಗಳನ್ನು ತಟ್ಟಿದನು. ರಾಜಭಟರು ಓಡೋಡಿ ಬರತೊಡಗಿದರು. ರಾಜನು ಬೈರಾಗಿಗಳ ಬಳಿಗೆ ಬರುತ್ತ, "ಯಾರು ನೀವು? ವೇಷಧಾರಿಗಳು ತಾನೇ? ಯಾರ ಅನುಮತಿ ಕೇಳಿ ಈ ಉದ್ಯಾನದೊಳಗೆ ಪ್ರವೇಶಿಸಿದಿರಿ? ಏನು ನಿಮ್ಮ ಉದ್ದೇಶ? ಯಾವ ನನ್ನ ಶತ್ರು ನಿಮ್ಮನ್ನು ಕಳಿಸಿದ ಅಧಮ?" ಎಂದು ಪ್ರಶ್ನೆಗಳ ಮೇಲೆ ಪ್ರಶ್ನೆ ಮಾಡಿದನು.

ಗುರುಬೈರಾಗಿ ಕೈಗಳನ್ನು ಮೇಲೆತ್ತಿ ಎಂಜಲು ನುಂಗಿ, "ನಿಮ್ಮ ಡಂಗುರ! ಮಂತ್ರದಂಡ... ಬೋಳಪ್ಪ...ಮಂತ್ರದಂಡ...ಅದು ಆ ಬೋಳಪ್ಪನ ಕೈಲಿ...ನಿಮಗೆ...ಗುಟ್ಟಾಗಿ ಬೇರೆ ದಾರಿ...ಬೋಳಪ್ಪನ ಕೈಲಿ ನೋಡಿದ್ದನ್ನು..." ಎಂದು ಕೂಗುತ್ತ ಮಾತುಗಳನ್ನು ಅಲ್ಲಲ್ಲಿ ನುಂಗುತ್ತ ಹೇಳ ತೊಡಗಿದನು.

—(ಇನ್ನೂ ಇದೆ)





# ಕರಡಿಕೆಂಗಣ್ಣ

## ೨೧

[ಕಾಳೀವರ್ಮನು ಸುರಂಗ ಮಾರ್ಗದಲ್ಲಿ ಹೋಗಿ, ಬೈರಾಗಿಗಳಿಂದ ಮಂತ್ರದಂಡವನ್ನು ಸ್ವಾಧೀನಪಡಿಸಿಕೊಂಡನು. ಅನಂತರ ಅವರೆಲ್ಲ ಜಿತಕೇತುರಾಜನ ಉದ್ಯಾನದಲ್ಲಿ ಮೇಲೆದ್ದರು. ಅಲ್ಲಿಗೆ ಮಾಯಾಮರ್ಕಟನೊಂದಿಗೆ ಜಿತಕೇತು ರಾಜನೂ ಬಂದನು. ಅಡಗಲು ನೋಡುವ ಬೈರಾಗಿಗಳನ್ನು ನೋಡಿ ರಾಜನು ಯಾರು ಏನೆಂದು ಕೇಳಿದನು. ಗುರುಬೈರಾಗಿ ಹೆದರಿ "ಮಂತ್ರದಂಡ, ಬೋಳಪ್ಪ"...ಮುಂತಾಗಿ ಏನೇನೋ ಹೇಳಿದನು.]

ಗುರುಬೈರಾಗಿ ಏನು ಹೇಳಲಿಕ್ಕಿದ್ದನೆಂದು ಜಿತಕೇತು ರಾಜನಿಗೆ ಗೊತ್ತಾಗಲಿಲ್ಲ. ತಮಗೆ ಸಂಬಂಧಿಸಿದ ಮಾತುಗಳೂ ಅವನ ಬಾಯಿಯಲ್ಲಿ ಬರುವುದನ್ನು ನೋಡಿ ರಾಜನಿಗೆ ಕುತೂಹಲವೂ, ಕೋಪವೂ ಒಕ್ಕೊತ್ತಿ ಬರಲು, "ಎಲೋ, ಬೈರಾಗಿ ಭಡವಾ! ನೀನು ಬೊಗಳುವುದೇನನ್ನು? ಮಂತ್ರದಂಡವೆಲ್ಲಿದೆ? ಬೋಳಪ್ಪ ಯಾರವನು?" ಎಂದು ಕೇಳಿದನು.

ಗುರುಬೈರಾಗಿ ಸ್ವಲ್ಪ ಧೈರ್ಯ ತಂದುಕೊಂಡು, "ಮಹಾರಾಜರೆ! ಬೈರಾಗಿಯಾದ ನನ್ನನ್ನು ಭಡವ ಭಂಡರ ಲೆಕ್ಕದಲ್ಲಿ ಜಮೆಕಟ್ಟಬಾರದು. ಭಡವ ಭಂಡರು ಬೇರೆ, ಬೈರಾಗಿ ಸನ್ಯಾಸಿಗಳು ಬೇರೆ. ಈ ವಿಷಯ ತಮಗೆ ಗೊತ್ತೇ ಇರುತ್ತೆ. ಕೋಪವಶದಿಂದ ಅದು ತಮ್ಮಲ್ಲಿ ಮುಚ್ಚಿಹೋಯಿತು, ಅಷ್ಟೇ. ಯಾವುದಕ್ಕೂ ಸಮಾಧಾನ ಬೇಕು ಪ್ರಭೂ! ಒಂದು ಸಣ್ಣ ವಿಷಯವಾದರೂ ಅರ್ಥವಾಗಬೇಕಾದರೆ ಶಾಂತ ಮನಸು ಬೇಕು ದೊರೆಗಳೇ!" ಎಂದನು.

ರಾಜನು ಅವನ ಬೋಧನದ ರೀತಿಯ ಮಾತಿಗೆ ಇನ್ನಷ್ಟು ರೇಗಿ ಕಟಕಟ ಹಲ್ಲು ಕಡಿಯುತ್ತ, "ಇವನಿಗೇನು ಬುದ್ಧಿಗಿದ್ದಿ ಕೆಟ್ಟಿರಬಹುದೆ?" ಎಂದು ಮಾಯಾಮರ್ಕಟನನ್ನು ನೋಡಿದನು.



ಮಾಯಾಮರ್ಕಟನು ಅತ್ಯಂತ ಕೋಪದಿಂದ ಕಣ್ಣು ತಿರುಗಿಸುತ್ತ ಬೈರಾಗಿಯನ್ನು ನೋಡಿ, "ಏನೆಲೋ! ಕಳ್ಳಬೈರಾಗೀ! ಮಾತಿನ ಮಲ್ಲತನವನ್ನು ನಿಲ್ಲಿಸಿ ಏನು ಸಂಗತಿ ಎಂದು ಸ್ಪಷ್ಟವಾಗಿ ಹೇಳು. ಸುಮ್ಮನೆ ನಿಮ್ಮನ್ನು ಕೊಂದು ಪಾಪ ಕಟ್ಟಿಕೊಳ್ಳುವವರು ನಾನಲ್ಲ. ನೀನು ಹೆದರಿ ನಡುಗಿ ಬುದ್ಧಿಕೆಡಿಸಿಕೊಳ್ಳಬೇಕಾಗಿಲ್ಲ. ಧೈರ್ಯದಿಂದ ಹೇಳು. ಮಂತ್ರದಂಡವೆಂದೆಯಲ್ಲಾ ? ನನ್ನ ಮಂತ್ರದಂಡವನ್ನು ಯಾರು ಕದ್ದರೆಂಬುದು ನಿನಗೆ ಗೊತ್ತಿದೆ. ನಿಜತಾನೇ?" ಎಂದು ಕೇಳಿದನು.

ಗುರುಬೈರಾಗಿ ಮರ್ಕಟ ರೂಪದವನನ್ನು ಆಶ್ಚರ್ಯದಿಂದ ನೋಡಿ, ತನ್ನ ಶಿಷ್ಯರ ಕಡೆಗೆ ತಿರುಗಿ, "ಎಲೋ, ಪ್ರಿಯ ಶಿಷ್ಯೋಪ ಶಿಷ್ಯರೆ! ನೀವು ಯಾರೋ ಹೊಸ ಅಮಾತ್ಯರೆಂದು ಹೇಳಿದಿರಲ್ಲಾ? ಚಂದ್ರಶಿಲಾ ನಗರದ ಹೊಸ ಅಮಾತ್ಯರೆಂದರೆ ಇವರೇ ಏನು ? " ಎಂದು ಕೇಳಿದನು.

"ಹೌದು ಗುರೋ! ಹೌದು! ಇವರೇ ಮರ್ಕಟಾಮಾತ್ಯ ಮಹಾಶಯರು!" ಎಂದರು ಶಿಷ್ಯ ಬೈರಾಗಿಗಳು. ಮಾಯಾಮರ್ಕಟನು ಬೈರಾಗಿಯನ್ನು ಹೊಡೆಯಲು ಕತ್ತಿ ಎತ್ತಿ, ಕೆಳಗಿಳಿಸಿ, ಬಾಲದಿಂದ ಗುರುಬೈರಾಗಿಯ ಸೊಂಟಕ್ಕೊಂದು ಏಟು ಹಾಕಿ, "ಎಲೋ! ಶುಂಠಾ! ಏನೇನೋ ಹೇಳುತ್ತ ಹೊತ್ತು ಕಳೆಯುವೆಯಾದರೆ ನಿನ್ನ ತಲೆಯನ್ನೇ ಹಾರಿಸಿಬಿಡುತ್ತೇನೆ! ನಿನ್ನ ಗೂಢಚಾರ ಪ್ರವರ್ತನೆಗಳೊಂದೂ ನನ್ನ ಮುಂದೆ ನಡೆಯದು!" ಎಂದನು.

ಮರ್ಕಟಾಮಾತ್ಯನ ಬಾಲದ ಪೆಟ್ಟಿಗೆ ಹೊರಳಿಬಿದ್ದ ಬೈರಾಗಿ ಆ ಕೂಡಲೇ ಎದ್ದು ಮೈ ಕೈ ಕೊಡರಿ ನೀವಿಕೊಳ್ಳುತ್ತ ಶಿಷ್ಯರ ಕಡೆಗೆ ನೋಡಿದನು. ದೊಡ್ಡ ಶಿಷ್ಯನು ಚಿಂತೆಯ ಮೋರೆಮಾಡಿಕೊಂಡು, "ಗುರುಗಳೇ! ನಿಜ ಸಂಗತಿ ಹೇಳಿಬಿಡಿ. ನಮಗೆ ಬಹುಮಾನವೂ ಸಿಕ್ಕೀತು. ನಗರದ ಉತ್ತರ ದ್ವಾರದ ಹತ್ತಿರವಿರುವ ಧರ್ಮಸತ್ರದ ಎದುರಿನಲ್ಲಿರುವ ಮೂರು ಮಾಳಿಗೆಯ ಮನೆಯ ಯಜಮಾನನ ಹೆಸರು ತಾನೇ ಬೋಳಪ್ಪಾ? ಅವನ ಹತ್ತಿರವಲ್ಲವೇ ನಾವು ಆ ಮಂತ್ರದಂಡ ನೋಡಿದೆವು? ಯಾಕೆ ಸಂದೇಹ ಪಡುವಿರಿ? ಹೇಳಿಬಿಡಿ!" ಎಂದನು.

ಗುರುಬೈರಾಗಿ ಗಂಟಲು ಕೆನೆದು ಹೇಳಲು ಪ್ರಯತ್ನಿಸುವಾಗ, ಮಾಯಾಮರ್ಕಟನು ಕಿಚಕಿಚನೆ ನಕ್ಕು, "ಎಲೋ! ಮಂಕುಬುದ್ಧೀ! ಇನ್ನು ನಿನ್ನ ಗುರು ಹೇಳಲಿಕ್ಕೇನಿದೆ? ಎಲ್ಲಾ ಸಂಗತಿ ನೀನೇ ಹೇಳಿಬಿಟ್ಟೆಯಲ್ಲಾ?" ಎಂದು ರಾಜನನ್ನು ನೋಡಿ, "ಮಹಾರಾಜಾ! ಕೂಡಲೇ ಕೆಲಮಂದಿ ಭಟರನ್ನು ಆ ಬೋಳಪ್ಪನ ಮನೆಗೆ ಕಳುಹಿಸಿ, ಆ ಮಂತ್ರದಂಡವನ್ನು ತರಿಸಿರಿ! ಎಲ್ಲಿ ಅಡಗಿದರೂ ಬಿಡಬೇಡಿರೆಂದು ಕಟ್ಟಪ್ಪಣೆ ಮಾಡಿ ಕಳುಹಿಸಿರಿ! ಮಂತ್ರದಂಡವಿಲ್ಲದೆ ಬರಿಗೈಯಲ್ಲಿ ಬಂದವನ ತಲೆ ಕಡಿಯುವೆನೆಂದು ಹೇಳಿರಿ!" ಎಂದನು.

ರಾಜನು ಗಟ್ಟಿಯಾಗಿ ಚಪ್ಪಾಳೆ ತಟ್ಟಿದನು. ಅದನ್ನು ಕೇಳಿ ಬಿರಬಿರನೆ ಒಬ್ಬ ಭಟನು ಓಡಿಬಂದನು. ರಾಜನು ಅವನಿಗೆ ಬೈರಾಗಿಗಳನ್ನು ತೋರಿಸಿ, "ಈ ಬೈರಾಗಿಗಳ ಹಿಂದೆ ಇನ್ನೂ ಕೆಲಮಂದಿ ಭಟರೊಂದಿಗೆ ಹೋಗಿ, ನಮ್ಮ ನಗರದಲ್ಲೇ ವಾಸಮಾಡುತ್ತ ಸುಮ್ಮನಿರುವ ಆ ಬೋಳಪ್ಪನನ್ನು, ಅವನು ಕದ್ದ ಮಂತ್ರ ದಂಡದೊಂದಿಗೆ ಇಲ್ಲಿಗೆ ಎಳೆದುಕೊಂಡು ಬರಬೇಕು. ಬರಿಗೈಯಲ್ಲಿ ಬಂದರೆ ತಲೆ ಕಡಿಸುತ್ತೇನೆ!" ಎಂದು ಆಜ್ಞೆ ಹೊರಡಿಸಿದರು.

ಭಟರು ಬೈರಾಗಿಗಳನ್ನು ನೋಡಿ, "ಹೋಗೋಣ, ನಡೆಯಿರಿ!" ಎಂದರು. ಅಷ್ಟು ಹೊತ್ತಿಗೆ ಕೋಟೆ ಗೋಡೆಯ ಹೊರಗಿನಿಂದ, ಕಿವಿ ತೂತಾಗುವಂತೆ ಹೊರಟ ಶಂಖನಾದವನ್ನು ಕೇಳಿ ಎಲ್ಲರೂ ಸ್ವಲ್ಪ ಹೊತ್ತು ಸ್ತಬ್ಧರಾದರು. ಶಂಖನಾದವನ್ನು ಕೇಳಿ ಮಾಯಾಮರ್ಕಟನು ಆನಂದದಿಂದ ಹಾರುತ್ತ, "ಆಹಾ! ಮಹಾರಾಜಾ! ಇನ್ನು ನಮ್ಮ ಕಷ್ಟಗಳೆಲ್ಲ ಹಾರಿಹೋಯಿತೆಂದೇ ನಂಬಿರಿ. ಆ ಕರಡಿಕೆಂಗಣ್ಣ ಮಾಂತ್ರಿಕ, ದುರ್ಮುಖರಾಜ, ಉಗ್ರದಂಡರಾಕ್ಷಸ, ಕಾಳೀವರ್ಮ ಎಲ್ಲರೂ ಹತರಾದರೆಂದೇ ತಿಳಿಯಿರಿ. ನೀವು ಕ್ಷಣಮಾತ್ರದಲ್ಲಿ ಚಕ್ರವರ್ತಿಯಾಗುವಿರಿ!" ಎಂದು ಹೇಳಿ ಕೋಟೆಯ ಗೋಡೆಯ ಕಡೆಗೆ ಬಿರಬಿರನೆ ಹೊರಟನು.

ರಾಜನು ಥಕ್ಕನೆ ಹಾರಿ ಅವನ ಭುಜ ಹಿಡಿದು ನಿಲ್ಲಿಸಿ, "ತಡೆಯಯ್ಯಾ! ನನ್ನ ಸೈನಿಕರೂ, ಸಾಮಂತ ಸೂರ್ಯಭೂಪತಿಯೂ, ಆ ರಾಕ್ಷಸನಿಂದಲೂ, ಕರಡಿ ಕೆಂಗಣ್ಣ ಮಾಂತ್ರಿಕನಿಂದಲೂ ಎಷ್ಟು ಹೊತ್ತು ಕೋಟೆಯನ್ನು ಕಾಪಾಡಿಕೊಂಡಿರಬಲ್ಲರು? ನೀನೂ ನನ್ನೊಂದಿಗಿಲ್ಲದಿದ್ದರೆ ನನಗೆ ಆಲೋಚನೆ ಹೇಳಿ ಸಹಾಯಮಾಡುವವರು ಬೇರೆ ಯಾರಿದ್ದಾರೆ? ನೀನೂ ನನ್ನ ಕೈ ಬಿಟ್ಟುಹೋಗುವೆಯಲ್ಲಾ! ಮಂತ್ರಿ ಜೀವಗುಪ್ತನನ್ನು ಅವಮಾನಪಡಿಸಿ ಓಡಿಸಿದ್ದು



ತಪ್ಪಾಯಿತೋ ಏನೋ?" ಎಂದನು. "ರಾಜಾ! ನಿಮಗೆ ಯಾವ ಭಯವೂ ಇಲ್ಲವೆಂದು ಹೇಳಿದೆನಲ್ಲಾ! ಸುಮ್ಮನೆ ಸಂದೇಹದಿಂದ ಚಿಂತೆಪಡುವಿರೇಕೆ? ಹಾಗೆಲ್ಲಾ ನಾನೆಲ್ಲಿಗೂ ಓಡಿ ಹೋಗೋದಿಲ್ಲ. ಸುಮ್ಮನಿರಿ!" ಎಂದು ಮಾಯಾಮರ್ಕಟನು ಕೋಟೆಯ ಗೋಡೆಯ ಮೇಲೆ ಏರಿ ಓಡಿದನು.

ಆದುವರೆಗೂ ಹೂವಿನ ಗಿಡಗಳ ಹಿಂದೆ ಅಡಗಿದ್ದು ಎಲ್ಲವನ್ನೂ ಗಮನಿಸಿಕೊಂಡಿದ್ದ ಕಾಳೀವರ್ಮನು ಇದೇ ಸರಿಯಾದ ಸಮಯವೆಂದುಕೊಂಡು, ಹೊರಬೀಳಲು ನೋಡುವಷ್ಟರಲ್ಲೇ, ಅಲ್ಲಿಗೆ ಸಾಮಂತ ಸೂರ್ಯಭೂಪತಿ, ಓಡೋಡಿ ಬರುವುದು ಕಾಣಿಸಿದುದರಿಂದ ಅಲ್ಲೇ ಅಡಗಿದನು. ಸೂರ್ಯಭೂಪತಿ ಬಂದವನೇ, ರಾಜನ ಮುಂದೆ ನಿಂತು, ಆಯಾಸದಿಂದ ಶ್ವಾಸ ಬಿಡುತ್ತ, "ಮಹಾರಾಜರೇ, ನಾನು ಈಗಲೇ ಹೊರಟು ನನ್ನ ಸ್ವಂತ ಕೋಟೆಗೆ ಹೋಗಬೇಕು. ಒಬ್ಬ ರಾಕ್ಷಸನೂ, ಶಂಖ ಧ್ವನಿಯೆಬ್ಬಿಸುವ ಒಬ್ಬ



ಮಾಂತ್ರಿಕನೂ ನನ್ನ ಕೋಟೆಯ ಬಾಗಿಲನ್ನು ಒಡೆದು ಒಳಗೆ ನುಗ್ಗಲು ನೋಡುವವರಂತೆ. ಒಳಗೆ ನನ್ನ ಹೆಂಡತಿಯೂ ಮಗಳೂ, ಕೆಲವೇಮಂದಿ ಸೇವಕರೂ ಹೊರತು ಬೇರೆ ಯಾರೂ ಇಲ್ಲ!" ಎಂದನು.

ಜಿತಕೇತು ರಾಜನು ಆಶ್ಚರ್ಯಪಡುತ್ತ, "ಇದೇನು ಸಮಾಚಾರವೋ? ಎಲ್ಲಾ ಒಟ್ಟಿಗೆ ಒಂದೇಸಾರಿ ಹೇಗಾದೀತು? ಒಬ್ಬ ರಾಕ್ಷಸನೂ ಮಾಂತ್ರಿಕನೂ ನನ್ನ ಕೋಟೆಯ ಮೇಲೆ ದಾಳಿ ಬರುತ್ತಿದ್ದಾರೆ. ಮತ್ತೊಬ್ಬ ರಾಕ್ಷಸನೂ ಮಾಂತ್ರಿಕನೂ ಅಂದರೆ ಏನು ಅರ್ಥ? ಇವರೇ ಅಲ್ಲಿಯೂ ಇಲ್ಲಿಯೂ ಒಂದೇ ಬಾರಿ ಇರುವರೇನು? ಅಷ್ಟು ಸಮರ್ಥರೇನು! ಅಯ್ಯಯ್ಯೋ!" ಎಂದನು.

ಆ ಪ್ರಶ್ನೆಗೆ ಏನು ಉತ್ತರ ಕೊಡುವುದೆಂದು ಸಾಮಂತಸೂರ್ಯಭೂಪತಿ ಮೇಲೆ ಕೆಳಗೆ ನೋಡುತ್ತಿರಲು, ಮರೆಯಲ್ಲಿದ್ದ ಕಾಳೀವರ್ಮನು ಹೊರಗೆ ಬರುತ್ತ, "ಮಹಾರಾಜಾ, ಈ ಕ್ಷಣದಿಂದ ನನ್ನನ್ನು ಶತ್ರುವೆಂದು ತಿಳಿಯಬೇಡಿ. ಈ ಮಿತ್ರನ ಮೇಲೆ ಕತ್ತಿ ಎತ್ತಬೇಡಿರಿ. ನೀವೀಗ ಎಷ್ಟೊಂದು ಅಸಹಾಯಕರಾಗಿರುವಿರೆಂದು ನಿಮಗಿಂತ ಹೆಚ್ಚಾಗಿ ನನಗೆ ಗೊತ್ತಿದೆ. ನಿಮ್ಮ ಮಾಯಾಮರ್ಕಟನು ಕೋಟೆಗೋಡೆ ಹಾರಿ ಹೊರಗೆ ಹೋದುದನ್ನು ನೀವು ತಿಳಿದಿಲ್ಲ! ಅವನು ಇಷ್ಟು ಹೊತ್ತಿಗೆ ಬಹು ದೂರ ಹೋಗಿರುತ್ತಾನೆ! ನನ್ನ ಮಾತು ಕೇಳಿರಿ!" ಎಂದನು.

ಜಿತಕೇತು ರಾಜನು ಬೆರಗುಗಣ್ಣುಗಳಿಂದ ಅವನನ್ನು ನೋಡುತ್ತ, "ನೀನು ಅಪರಾಧಿ ಕಾಳೀವರ್ಮನಲ್ಲವೇ? ಮೊದಲು ಶಿರಚ್ಛೇದ ಶಿಕ್ಷೆ ನಿನಗೆ ತಾನೇ ಕೊಟ್ಟಿದ್ದೆ?" ಎಂದನು.

ಕಾಳೀವರ್ಮನು ಕಿರುನಗು ಸೂಸುತ್ತ, "ಅದು ತುಂಬಾ ಹಳೆಯ ಮಾತು! ಆಗ ನೀವು ರಾಜರೆಂಬ ಅಹಂಕಾರದಲ್ಲಿದ್ದಿರಿ. ಈಗ ಹೇಳಲಾರದ ಇಕ್ಕಟ್ಟಿನಲ್ಲಿ ಸಿಕ್ಕಿಬಿದ್ದು ತುಂಬಾ ಪೇಚಾಟದಲ್ಲಿರುವಿರಿ. ಅದು ಈಗೀಗ ತಾನೇ ನಿಮಗೆ ಸ್ವಲ್ಪ ಸ್ವಲ್ಪ ಗೊತ್ತಾಗತೊಡಗಿದೆ. ಅದೆಲ್ಲ ನನಗೆ ಗೊತ್ತು" ಎಂದನು.

ಜಿತಕೇತು ರಾಜನು ಸಾಮಂತ ಸೂರ್ಯಭೂಪತಿಯನ್ನು ಅನುಮಾನದಿಂದ ನೋಡುತ್ತ, "ಕಾಳೀವರ್ಮ! ಈ ಸೂರ್ಯಭೂಪತಿ! ಮತ್ತಾರೋ ಮಾಂತ್ರಿಕ ರಾಕ್ಷಸರು! ಏನಿದೆಲ್ಲಾ? ಇದೆಂಥ ಗಜಿಬಿಜಿಯೋ ತಿಳಿಯದಿರುವಾಗ, ನೀನೇನೋ ಹೇಳಲಾರಂಬಿಸಿದ್ದೀ? ಇಬ್ಬರು ಮಾಂತ್ರಿಕರಾರೋ? ಇಬ್ಬರು ರಾಕ್ಷಸರಾರೋ? ನೀನು ಗೊತ್ತಿರುವುದೆಂದು ಹೇಳುವುದು ಎಂಥದನ್ನೋ?" ಎಂದನು.

"ಮಹಾರಾಜರೇ, ಈ ಗಲಾಟೆಗಳಿಗೆಲ್ಲಾ ಇಬ್ಬರು ತಾಂತ್ರಿಕ ಮಾಂತ್ರಿಕರ ನಡುವಿನಲ್ಲಿ ಎದ್ದಿರುವ ಜಗಳವೇ ಕಾರಣ. ಅವರು ಬ್ರಹ್ಮಪುತ್ರಾ ನದಿಯ ಜನ್ಮಸ್ಥಾನದ ಹತ್ತಿರವಿರುವ ಒಂದು ಪುರಾತನ ಆಲಯದೊಳಗಿನ ಭಲ್ಲೂಕೇಶ್ವರೀ ದೇವಿಯ ಭಕ್ತರು. ಒಬ್ಬನ ಹೆಸರು ಭಲ್ಲೂಕಪಾದನೆಂದು. ಅವನ ಶಿಷ್ಯನಾದ ಕರಡಿ

ಕೆಂಗಣ್ಣನೇ ನಮ್ಮ ಪ್ರಾಂತಕ್ಕೆ ಬಂದವನು. ಎರಡನೆಯವನು ಮಿಥ್ಯಾ ಮಿಶ್ರನೆಂಬ ಮಹಾತಾಂತ್ರಿಕ. ಅವನ ಶಿಷ್ಯನೇ ನಿಮ್ಮನ್ನು ಅಂಟಿಕೊಂಡ ಮಾಯಾ ಮರ್ಕಟ. ಇನ್ನು ಆ ಇಬ್ಬರು ರಾಕ್ಷಸರೆಂದರೆ ಅವರು ಅಣ್ಣತಮ್ಮಂದಿರು ಉಗ್ರದಂಡನೆಂಬವನು ನನ್ನೊಂದಿಗಿದ್ದಾನೆ. ಅವನ ಅಣ್ಣನಾದ ಕಾಲದಂಡನನ್ನು ತಾಂತ್ರಿಕ ಮಿಥ್ಯಾಮಿಶ್ರನು ಸೆರೆ ಹಿಡಿದಿದ್ದಾನೆ. ಇದು ನಿಜ ಸಂಗತಿ! ಈ ಘಟನೆಗಳ ಪರಿಣಾಮವನ್ನು ಹಿಡಿದು ಇಲ್ಲಿಯವರೆಗೂ ನಡೆದಿದೆ." ಎಂದನು ಕಾಳೀವರ್ಮ.

ಕಾಳೀವರ್ಮನ ಮಾತು ನಿಂತ ಕೂಡಲೇ ಸೂರ್ಯಭೂಪತಿ, "ಮಹಾರಾಜರೇ! ಆ ತಾಂತ್ರಿಕನೇ ಬಂದೀಯಾಗಿದ್ದ ರಾಕ್ಷಸನನ್ನು ಹಿಂದಿಟ್ಟುಕೊಂಡು ಈ ಕಡೆಗೆ ಬಂದು ಶಂಖಾರಾವಮಾಡಿ, ಈಗ ನನ್ನ ಕೋಟೆಯ ಕಡೆಗೆ ಹೋದ ಹಾಗಿದೆ. ಇಷ್ಟು ಹೊತ್ತಿಗೆ ಆ ತಾಂತ್ರಿಕರಿಂದ ಏನೇನಾಗಿದೆಯೋ? ನನ್ನ ಕುಟುಂಬದವರ ಗತಿ ಹೇಗಿದೆಯೋ? ಅಪ್ಪಣೆ, ನಾನು ಹೊರಟೆ. ಮತ್ತೆ ಬಂದು ನಿಮ್ಮ ದರ್ಶನಮಾಡಿಕೊಳ್ಳುತ್ತೇನೆ" ಎಂದು ಹೇಳಿ ಅಲ್ಲಿಂದ ಅತಿವೇಗವಾಗಿ ಹೊರಟು ಹೋದನು.

ಜಿತಕೇತು ರಾಜನು ದಿಕ್ಕೆಟ್ಟವನಂತೆ ದಿಗಿಲಿನಿಂದ ಕಾಳೀವರ್ಮನನ್ನು ನೋಡಿ, "ಕಾಳೀವರ್ಮಾ! ಈಗ ನೀನು ಏನು ಮಾಡಬೇಕೆಂದಿರುವಿ? ಓಹೋ! ನಿನ್ನ ಒಂದು ಕೈಯಲ್ಲಿ ಮಂತ್ರದಂಡವಿದೆಯಲ್ಲಾ! ಎರಡನೇ ಕೈಯಲ್ಲಿ ಕತ್ತಿ! ನೀನು ತಿಳಿದಿರುವ ಹಾಗೆ ನಾನು ರಾಜ್ಯಪಾಲನೆಯಲ್ಲಿ ಅಸಮರ್ಥನಾಗಿರಬಹುದು, ಆದರೆ ಕತ್ತಿ ಯುದ್ಧದಲ್ಲಿ ಅಸಮರ್ಥನೆಂದು ತಿಳಿಯಬೇಡ. ಬೆನ್ನು ತೋರಿಸಿ ಓಡುವ ಹೇಡಿಯೂ ನಾನಲ್ಲ. ಯುದ್ಧರಂಗದಲ್ಲಿ ನಾನು ಪ್ರಾಣವನ್ನು ಹುಲ್ಲಿಗೆ ಸಮಾನ ಮಾಡುವವನೆಂದು ತಿಳಿ! ಈಗ ನಿಜ ಹೇಳು. ನನ್ನ ಮೇಲೆ ಯಾವುದನ್ನು ಪ್ರಯೋಗಿಸುವಿ? ಮಂತ್ರದಂಡವನ್ನೋ? ಕತ್ತಿಯನ್ನೋ?" ಎಂದನು.



"ಎರಡನ್ನೂ ಅಲ್ಲ" ಎನ್ನುತ್ತ ಕಾಳೀವರ್ಮನು ಮಂತ್ರದಂಡವನ್ನೂ ಕತ್ತಿಯನ್ನೂ ಕೆಳಗೆ ಹಾಕಿ, "ಮಹಾರಾಜಾ! ನಿಮ್ಮ ಪರಿಪಾಲನೆಯಲ್ಲಿ ನಡೆದ ಅನ್ಯಾಯಗಳನ್ನು ನೀವೂ ನಿಮಗೆ ಆಲೋಚನೆ ಹೇಳುವ ಮಂತ್ರಿಗಳೂ ಸರಿಸಮವಾಗಿ ಹಂಚಿಕೊಳ್ಳಬೇಕಾಗಿ ಬರುತ್ತದೆ. ಅದು ಅನಂತರದ ಸಂಗತಿ. ಈಗಿನ ಪರಿಸ್ಥಿತಿಯಲ್ಲಿ ಮುಖ್ಯವಾಗಿ ನಮ್ಮ ರಾಜ್ಯವನ್ನು ದೊಡ್ಡ ದೊಡ್ಡ ಮಾಂತ್ರಿಕರಿಂದಲೂ, ರಾಕ್ಷಸರಿಂದಲೂ ಉಳಿಸಿಕೊಳ್ಳಬೇಕಾಗಿದೆ. ಆದರ ಬಾಧ್ಯತೆ ನನ್ನ ಮೇಲೆಯೂ ಇದೆ. ಏಕೆಂದರೆ ನಾನು ಈ ರಾಜ್ಯದ ಒಬ್ಬ ಪ್ರಜೆ." ಎಂದನು.

ಕಾಳೀವರ್ಮನ ಮಾತು ಕೇಳಿ ಜಿತಕೇತುರಾಜನು ತುಂಬಾ ಸಂತೋಷಪಟ್ಟು, ಕೆಳಗೆ ಬಿದ್ದ ಕಾಳೀವರ್ಮನ ಕತ್ತಿಯನ್ನೆತ್ತಿ ಅವನ ಕಡೆಗೆ ನೀಡಿದನು. ಅದೇ ಸಮಯಕ್ಕೆ ಸುರಂಗದ ಬಾಯಿಯಿಂದ ರಾಜಾ ದುರ್ಮುಖನು ಮೇಲೆದ್ದು ಬಂದನು. ಅವನ



ಹಿಂದೆಯೇ ಕರಡಿಕಿಂಗಣ್ಣ ಮಾಂತ್ರಿಕನೂ ಮೇಲೆದ್ದು ಬರುವುದನ್ನು ಎಲ್ಲರೂ ನೋಡಿದರು!

ದುರ್ಮುಖರಾಜನು ಭೀಕರವಾಗಿ ಗರ್ಜಿಸಿ, ಒರೆಯಿಂದ ಕತ್ತಿಯನ್ನು ಸೆಳೆದು, "ಕಾಳೀವರ್ಮಾ! ನೀನೇನೋ ಕಷ್ಟದಲ್ಲಿ ಸಿಕ್ಕಿಬಿದ್ದೆಯೇನೋ ಅಂದು ಕೊಂಡೆವು. ಪುಣ್ಯಕಾಲ! ಇನ್ನೂ ಈ ಜಿತಕೇತುವನ್ನು ಜೀವದಿಂದ ಬಿಟ್ಟಿರುವೆ ಏಕೆ? ಅವನ ಹತ್ತಿರ ಏನು ಮಾತುಕತೆ? ಸರಿ. ನಿನ್ನಿಂದಾಗದಿದ್ದರೆ ನಾನೇ ನನ್ನ ಕತ್ತಿಗೆ ಇವನನ್ನು ಬಲಿಹಾಕಿಬಿಡುತ್ತೇನೆ!" ಎಂದು ಜಿತಕೇತುವಿನ ಮೇಲೆ ನೆಗೆದನು.

ಕಾಳೀವರ್ಮನು ತಟಾಲ್ಲನೆ ದುರ್ಮುಖನ ಕತ್ತಿಗೆ ತನ್ನ ಕತ್ತಿಯನ್ನು ಅಡ್ಡ ಕೊಟ್ಟು, "ದುರ್ಮುಖ ರಾಜಾ! ಅವಸರಪಡಬೇಡ. ಈ ಜಿತಕೇತು ಮಹಾ ರಾಜನ ಉಪ್ಪುಂಡ ಶರೀರದಿಂದ ಹುಟ್ಟಿದವನು ನಾನು. ನನ್ನ ತಂದೆ ಈ ರಾಜನ ವಂಶಕ್ಕೆ ಸೇವೆ ಮಾಡುತ್ತ ಯುದ್ಧದಲ್ಲಿ ವೀರಸ್ವರ್ಗ ಸೇರಿದರು. ಆ ಸಂಗತಿಯನ್ನು ಮರೆತು ಈ ರಾಜನನ್ನು ಕೊಲ್ಲುವುದು ಮಹಾ ಪಾಪ! ಅಂಥ ಹೀನಕಾರ್ಯ ನಾನು ಮಾಡುವೆನೆಂದು ಸ್ವಪ್ನದಲ್ಲೂ ತಿಳಿಯಬೇಡ! ಎಚ್ಚರ!" ಎಂದನು.

"ಆ ಗೊಡವೆ ನನಗಿಲ್ಲ. ಆದಕ್ಕೇ ನಾನು ಕೊಲ್ಲುವೆನೆಂದರೂ ಹೀಗೆ ತಡೆಯುವಿಯಲ್ಲಾ" ಎಂದನು ದುರ್ಮುಖ ರಾಜ. "ಇನ್ನೊಬ್ಬರು ಕೊಲ್ಲುವುದನ್ನೂ ನಾನು ಸಹಿಸಲಾರೆ! ಜಾಗ್ರತೆ!" ಎಂದು ಗರ್ಜಿಸಿದನು ಕಾಳೀವರ್ಮ. ಅಷ್ಟರೊಳಗೆ ಕಿಂಗಣ್ಣ ಮಾಂತ್ರಿಕನು ಕೆಳಗೆ ಬಿದ್ದಿದ್ದ ಮಂತ್ರದಂಡವನ್ನೆತ್ತಿಕೊಂಡು, "ಸಿಕ್ಕಿತು ನನ್ನ ಮಂತ್ರದಂಡ! ಕಾಳೀವರ್ಮಾ! ಚೆನ್ನಾಗಿ ಹೇಳಿದೆ! ನನ್ನ ಗುರುವಾದ ಭಲ್ಲೂಕಪಾದರ ಪ್ರಬಲ ವಿರೋಧಿ ತಾಂತ್ರಿಕ ಮಿಥ್ಯಾ ಮಿಶ್ರನು ಕಾಲದಂಡ ರಾಕ್ಷಸನನ್ನೂ, ತನ್ನ ಸೇವಕನಾದ ಜಂಬುಕೇಶ್ವರನನ್ನೂ ಕರೆದುಕೊಂಡು ಈ ಪ್ರಾಂತಕ್ಕೆ ಬಂದಿದ್ದಾನೆ. ಬಹುಶಃ ಅವನು ನನ್ನ ಗುರುವಿಗೆ ಏನೋ ಹಾನಿಮಾಡಿಯೇ ಬಂದಿರಬೇಕು. ನಾವೀಗ ಬೇಗನೇ ಭಲ್ಲೂಕಪಾದ ಪರ್ವತಕ್ಕೆ ಹೋಗಬೇಕು. ಇಲ್ಲಿನ ಗೊಡವೆಗಳನ್ನೆಲ್ಲಾ ಇಷ್ಟಕ್ಕೇ ಬಿಟ್ಟು ಹೊರಡು" ಎಂದನು.

"ಅದು ಹೇಗಾದೀತು? ನಾವು ಬಿಟ್ಟದ್ದುಬಿಟ್ಟು ಇದ್ದಕ್ಕಿದ್ದ ಹಾಗೆ ಹೋಗಿ ಬಿಟ್ಟರೆ ಇಲ್ಲಿ ಆ ತಾಂತ್ರಿಕನ ಉಪಟಳವನ್ನು ತಡೆಯುವುದು ಹೇಗೆ? ಅವನೀಗ ಸಾಮಂತ ಸೂರ್ಯಭೂಪತಿಯ ಕೋಟೆಯ ಕಡೆಗೆ ಹೋಗಿದ್ದಾನಂತೆ. ಆ ಕೋಟೆಯೊಳಗೆ ದೊಡ್ಡ ಸೈನ್ಯ ಕೂಡಾ ಇಲ್ಲವಂತೆ. ಆ ಧೂರ್ತ ತಾಂತ್ರಿಕ ನನ್ನು ಇದಿರಿಸುವವರೇ ಇಲ್ಲದಂತೆ ಮಾಡಿಹೋಗುವುದು ಒಳ್ಳೆಯದೇನು?" ಎಂದನು ಕಾಳೀವರ್ಮ.

ಕರಡಿಕಿಂಗಣ್ಣನು ಬೇಸರದಿಂದ, "ಆ ಸಮಾಚಾರವನ್ನೆಲ್ಲ ಸುರಂಗ ಮಾರ್ಗದೊಳಗೆ ಪ್ರವೇಶಿಸುವುದಕ್ಕೆ ಮೊದಲು ಸೂರ್ಯಭೂಪತಿಯ ಬಾಯಿಯಿಂದಲೇ

ಕೇಳಿದನು. ನಾವು ಈ ರಾಜರೊಳಗಿನ ಗೊಡವೆಗೆ ಏಕೆ ತಲೆಹಾಕಬೇಕು? ಅವರಿಗೇನು ಕಡಿಮೆ? ಸೈನಿಕ ಬಲವಿರುವಾಗ ಅವರವರೇ ನೋಡಿಕೊಳ್ಳುತ್ತಾರೆ. ನಾವೇಕೆ ಮಧ್ಯೆ?" ಎಂದನು.

ಕಾಳೀವರ್ಮನು ಕೋಪದಿಂದ ಕರಡಿಕೆಂಗಣ್ಣ ಮಾಂತ್ರಿಕನನ್ನು ನೋಡುತ್ತ, "ಈ ರಾಜ್ಯದಲ್ಲಿ ಹುಟ್ಟಿಬೆಳೆದ ನನ್ನ ಮುಂದೆಯೋ ನೀವು ಹೀಗೆ ಹೇಳುವುದು? ಮೊದಲು ಈ ರಾಜ್ಯದ, ಹಾಗೂ ಪ್ರಜೆಗಳ ಕ್ಷೇಮವನ್ನು ನೋಡದೆ ಎಲ್ಲಿಯೋ ಬೆಟ್ಟ ಪ್ರಾಂತದಲ್ಲಿರುವ ಮಾಂತ್ರಿಕರಿಗೆ ಸಹಾಯಮಾಡಲು ಹೋಗುವುದೆಂದರೇನು? ಇದು ಯಾವ ಧರ್ಮ? ಯಾವ ನ್ಯಾಯ? ನನ್ನನ್ನು ಅಂತಹ ದೇಶದ್ರೋಹಿ ಎಂದು ನೀವಾದರೂ ಹೇಗೆ ತಿಳಿದಿರಿ?" ಎಂದನು.

ಕಾಳೀವರ್ಮನ ಮಾತು ಕೇಳುತ್ತ ಕರಡಿಕೆಂಗಣ್ಣ ಮಾಂತ್ರಿಕನು ಅಪ್ರತಿಭನಾಗಿ, "ಶಿವ್ವಾ! ಕಾಳೀ! ನೀನು ಕೆಲವೇ ಕ್ಷಣಗಳಲ್ಲಿ ಹೇಗೆ ಬದಲಾಯಿಸಿಬಿಟ್ಟೆ! ಮಂತ್ರದಂಡವನ್ನು ತಂದುಕೊಟ್ಟವರಿಗೆ ಅರ್ಧರಾಜ್ಯವನ್ನೂ, ತನ್ನ ದತ್ತಪುತ್ರಿಯನ್ನೂ ಕೊಡುವೆನೆಂದು ಹೇಳುವ ಈ ಜಿತಕೇತು ರಾಜನ ಮಾತುಗಳನ್ನು ನಂಬಿ ಮೋಸಹೋಗಬೇಡ!" ಎಂದನು.

"ನನ್ನ ಅಭಿಪ್ರಾಯದಲ್ಲಿ ಅರ್ಧರಾಜ್ಯವೂ ಇಲ್ಲ, ರಾಜಕುಮಾರಿಯೂ ಇಲ್ಲ; ಮೋಸಹೋಗುವ ಪ್ರಶ್ನೆ ಮೊದಲೇ ಇಲ್ಲ. ಮಂತ್ರದಂಡವನ್ನು ಕೊಟ್ಟದ್ದು ಮಹಾರಾಜರಿಗಲ್ಲ, ನಿಮಗೆ!" ಎಂದು ಕಾಳೀವರ್ಮನು ಜಿತಕೇತು ರಾಜನನ್ನು ನೋಡಿದನು.

ಜಿತಕೇತು ರಾಜನು ತಲೆಯಾಡಿಸುತ್ತ, "ಇಲ್ಲಿರುವ ದುರ್ಮುಖಿ ರಾಜನ ಸಮಕ್ಷಮದಲ್ಲಿ..." ಎನ್ನುವಷ್ಟರಲ್ಲಿ ಸುರಂಗದೊಳಗಿನಿಂದ ಉಗ್ರದಂಡ ರಾಕ್ಷಸನು, ಕಲ್ಲಿನ ಗದೆಯನ್ನು ಮೇಲೆತ್ತಿಕೊಂಡು ಗರ್ಜಿಸುತ್ತ, ಮೇಲೆದ್ದು ಬಂದು, "ದುರ್ಮುಖಿರಾಜ ಮಾತ್ರವಲ್ಲ, ನಾನೂ ಇದ್ದೇನೆ! ಅಕೋ! ಕಟುಕನರ



ಭಲ್ಲೂಕನೂ ಬರುತ್ತಿದ್ದಾನೆ! ರಾಜಾ! ನೀನು ಹೇಳುವ ಮಾತನ್ನು ನಮ್ಮೆಲ್ಲರ ಸಾಕ್ಷಿಗಳ ಸಮಕ್ಷಮದಲ್ಲೇ ಹೇಳಿಬಿಡು!" ಎಂದನು.

ಜಿತಕೇತು ರಾಜನು ಉಗ್ರದಂಡ ರಾಕ್ಷಸನನ್ನು ನೋಡಿ, ಮೊದಲು ಭಯಕಂಪಿತನಾದರೂ, ಅನಂತರ ಧೈರ್ಯ ತಂದುಕೊಂಡು, "ಕೇಳಿರಿ ಹಾಗಾದರೆ. ನನಗೆ ಸಂತಾನವೇ ಇಲ್ಲ, ನನ್ನ ತರುವಾಯ ಯಾರನ್ನು ವಾರಸನಾಗಿರಿಸಲಿ ಎಂದು ಆಲೋಚಿಸುತ್ತಾ ಇದ್ದೆನು. ಈಗ ಆಕಸ್ಮಿಕವಾಗಿ ಒಳ್ಳೆಯ ಅವಕಾಶ ಲಭ್ಯವಾಗಿದೆ. ಸಾಮಂತ ಸೂರ್ಯಭೂಪತಿಯ ಕುಮಾರಿಯೇ ನನ್ನ ದತ್ತ ಪುತ್ರಿ. ಅವಳನ್ನೇ ಕಾಳೀವರ್ಮನಿಗೆ ಕೊಟ್ಟು ಮದುವೆ ಮಾಡಿಸುತ್ತೇನೆ. ಬರಿಯ ಅರ್ಧರಾಜ್ಯವಲ್ಲ, ನನ್ನ ತರುವಾಯ ಈ ಚಂದ್ರಶಿಲಾ ನಗರಕ್ಕೆ ಕಾಳೀವರ್ಮನೇ ರಾಜ!" ಎಂದನು.

"ಜೈ! ಭಲ್ಲೂಕಪಾದ ಗುರೂ!" ಎಂದು ಕರಡಿಕೆಂಗಣ್ಣ ಮಾಂತ್ರಿಕನು ಉತ್ಸಾಹದಿಂದ ಘೋಷಿಸಿ,

"ಸಾಧ್ಯಾಸಾಧ್ಯತೆಗಳನ್ನು ಯೋಚಿಸದೆ, ಇಲ್ಲಿ ಗಾಳೀಗೋಪುರ ಕಟ್ಟುತ್ತಿದ್ದೀರಿ! ದುಷ್ಟನಾದ ಆ ಮಿಥ್ಯಾಮಿಶ್ರ ತಾಂತ್ರಿಕನು ಸೂರ್ಯಭೂಪತಿಯ ಏಕೈಕ ಪುತ್ರಿಯನ್ನು ಸೆರೆ ಹಿಡಿದು ಇಷ್ಟರಲ್ಲೇ ತನ್ನ ಪರ್ವತ ಪ್ರಾಂತದ ಕಡೆಗೆ ಹೊರಟುಹೋಗಿದ್ದಾನು. ಅವನಿಗೆ ತನ್ನ ಇಷ್ಟ ದೈವವಾದ ಭಲ್ಲೂಕೇಶ್ವರೀ ದೇವಿಗೆ ಒಬ್ಬಳು ಪೂಜಾರಿಣಿಯನ್ನು ಏರ್ಪಡಿಸಬೇಕೆಂದು ಬಹಳ ಕಾಲದ ಆಶೆ." ಎಂದನು.

"ನಾನು ಬದುಕಿರುವಾಗ ಅವನ ಆಶೆ ನೆರವೇರುವಂತಿಲ್ಲ," ಎಂದು ಕಾಳೀವರ್ಮನು ಕತ್ತಿ ಎತ್ತಿ ಕುಣಿಸಿದನು. "ನಾನೂ ಅದೇ ಪ್ರತಿಜ್ಞೆಮಾಡುತ್ತೇನೆ ಕಾಳೀ!" ಎಂದು ಗರ್ಜಿಸುತ್ತ, ಉಗ್ರದಂಡ ರಾಕ್ಷಸನೂ ತನ್ನ ಗದೆಯನ್ನೆತ್ತಿ ಆಡಿಸಿದನು.

ಕರಡಿಕೆಂಗಣ್ಣ ಮಾಂತ್ರಿಕನು ಕಿರುನಗು ಸೂಸುತ್ತ, "ಹೂಂ! ನಿಮ್ಮ ಪ್ರತಿಜ್ಞೆ ನೆರವೇರಬೇಕೆಂತಲೇ ನಾನೂ ಹಾರೈಸುತ್ತೇನೆ. ಉಗ್ರದಂಡಾ! ಹತ್ತರೊಂದಿಗೆ ಹನ್ನೊಂದಾಗಿ ಆ ತಾಂತ್ರಿಕ ಮಿಥ್ಯಾಮಿಶ್ರನಿಂದ ನಿನ್ನ ಅಣ್ಣನನ್ನು ಕೂಡಾ ರಕ್ಷಿಸು. ಅವನಿಗೆ ಏನೋ ಮದ್ದು ಮಾಯೆಮಾಡಿ ಬುದ್ಧಿ ಕೆಡಿಸಿ ತನ್ನ ಇಷ್ಟಪ್ರಕಾರ ಆಡುವಂತೆ ಮಾಡಿಕೊಂಡಿದ್ದಾನೆ ಆ ತಾಂತ್ರಿಕಾಧಮ. ಸರಿ, ನಾನು ಹೊರಡುತ್ತೇನೆ" ಎಂದು ಸುರಂಗ ದ್ವಾರದ ಕಡೆಗೆ ನಡೆದನು. ಅವನು ಸುರಂಗ ದ್ವಾರದಲ್ಲಿ ಇಳಿಯುವುದರೊಳಗೆ ಗಿಡಗಳ ಹಿಂದೆ ಅಡಗಿದ್ದ ಕಟುಕಕರಡಿಯವನು, "ಓ ಶಿರೀಷವನ ಭೈರವಾ!" ಎಂದು ಕೂಗಿ ಎದ್ದು ಹಾರಿ ಬಂದು, "ಅಯ್ಯಾ! ಮಾಂತ್ರಿಕೇಶ್ವರಾ! ನಿಮ್ಮ ಮಂತ್ರದ ಕಾರಣದಿಂದಾಗಿ ಅರ್ಧ ಮನುಷ್ಯನಾಗಿರುವ ನನ್ನ ಗತಿ ಏನು? ನೀವೂ ನಾನೂ, ನಿಮ್ಮ ಗುರುಗಳೂ ಭಲ್ಲೂಕ ಮುದ್ರೆಯ ಕರಡಿಗಳಾಗಿ ದೊಡ್ಡ ಗಲಾಟೆಗೆ ಕಾರಣವಾಯಿತು. ಈಗ ನನ್ನನ್ನು ನೀವು ಮೊದಲಿನಂತೆ ಮಾಡದಿದ್ದರೆ, ಈ ಕೊಡಲಿಯಿಂದ ನಿಮ್ಮ ಕುತ್ತಿಗೆ ಕಡಿದು ಕೆಡವುತ್ತೇನೆ. ನಾನೀಗ ಜೀವದಾಸೆ ಬಿಟ್ಟವನು." ಎಂದು ತನ್ನ ಚಪಗೊಡಲಿಯನ್ನು ಎತ್ತಿ ಹಾರಲು ಸಿದ್ಧನಾದನು.

"ದುಡುಕದಿರು ಪೊರಟು ಶಿಷ್ಯಾ! ನೀನು ಕಟುಕ ಕರಡಿ ಮನುಷ್ಯನಲ್ಲ. ಈ ನಗರದ ಕಟುಕರ ಪ್ರಧಾನ ನಾಯಕ. ಇನ್ನು ನಿನ್ನ ಶಿರೀಷವನಕ್ಕೆ ಹೋಗಿ ಅಪರಾಧಿಗಳಾಗಿ ಶಿಕ್ಷೆಪಡೆದು ಬರುವವರ ತಲೆಗಳನ್ನು ಮಾತ್ರ ಕಡಿ!" ಎಂದು ಹೇಳುತ್ತ ಮಂತ್ರದಂಡವನ್ನು ಅವನ ತಲೆಯಮೇಲಿಟ್ಟು, ಮೂರುಸಾರಿ ಮಂತ್ರೋಚ್ಚಾರ ಮಾಡುತ್ತ ತಡವಿದನು. ಮರುಕ್ಷಣದಲ್ಲಿ ಸುರಂಗದೊಳಗೆ ಟಣ್ಣನೆ ಜಿಗಿದು ಮಾಯವಾದ ಕರಡಿಕೆಂಗಣ್ಣ.

—(ಮುಂದಿನ ಸಂಚಿಕೆಯಲ್ಲಿ ಮುಕ್ತಾಯ)






# ಕರಡಿಕೆಂಗಣ್ಣ

೨೨

[ಸಾಮಂತ ಸೂರ್ಯಭೂಪತಿ ತನ್ನ ಕೋಟೆಯನ್ನು ರಕ್ಷಿಸಲು ಹೋದನು. ಮಾಯಾಮರ್ಕಟನೂ ಅವನ ಬೆಂಬತ್ತಿ ಓಡಿದನು. ತನ್ನ ಗುರು ಕಷ್ಟದಲ್ಲಿ ಸಿಕ್ಕಿಬಿದ್ದಿರುವನೆಂದು ತಿಳಿದು ಕರಡಿಕೆಂಗಣ್ಣ ಮಾಂತ್ರಿಕನು ಸುರಂಗದೊಳಗೆ ಪ್ರವೇಶಿಸುವಾಗ, ಕಟುಕಕರಡಿಯವನು ಅವನನ್ನು ತಡೆದನು. ಅವನ ಅಪೇಕ್ಷೆಯಂತೆ ಅವನ ತಲೆಯ ಮೇಲೆ ಮಂತ್ರದಂಡವನ್ನಿಟ್ಟು ತಾಡಿಸಿ ಸುರಂಗದೊಳಗಿಳಿದನು ಕರಡಿಕೆಂಗಣ್ಣ.]

ಕರಡಿ ಕೆಂಗಣ್ಣ ಮಾಂತ್ರಿಕನು ಕಟುಕರ ನಾಯಕನ ಕರಡಿ ಮುಖವನ್ನು ಮಾಯಮಾಡಿ ಹೋದುದನ್ನು ನೋಡಿ ಎಲ್ಲರೂ ಸ್ವಲ್ಪ ಹೊತ್ತು ಮೂಕ ವಿಸ್ಮಿತರಾದರು. ಕಟುಕರ ನಾಯಕನಿಗೆ ದೊಡ್ಡ ಭಾರ ಇಳಿದಹಾಗೆ ಸಂತೋಷವಾಯಿತು. ಅವನಿಗೆ ತನ್ನ ನಿಜವಾದ ಮುಖವನ್ನು ಎಷ್ಟುಸಾರಿ ತಡವಿಕೊಂಡರೂ ತೃಪ್ತಿಯಿಲ್ಲ.

ಜಿತಕೇತು ರಾಜನು ಕಾಳೀವರ್ಮನನ್ನು ನೋಡಿ "ಕಾಳೀವರ್ಮ, ಈಗ ನಾವು ಏನು ಮಾಡ ಬೇಕೆಂದು ನಿನ್ನ ಅಭಿಪ್ರಾಯ ? ನಾನಂತೂ ಎಲ್ಲರ ಸಮಕ್ಷಮದಲ್ಲಿ ನಮ್ಮ ಸಾಮಂತ ಸೂರ್ಯ ಭೂಪತಿಯ ಕುಮಾರಿ ನನ್ನ ದತ್ತಪುತ್ರಿಯೆಂದು ಹೇಳಿದ್ದೇನೆ. ಅವಳನ್ನು ಆ ಮರ್ಕಟನ ಗುರುವಾದ ಮಿಥ್ಯಾಮಿಶ್ರನಿಂದ ಕಾಪಾಡ ಬೇಕಾದುದೇ ಈಗ ಪ್ರಥಮ ಕರ್ತವ್ಯ ಹೌದಾ ? ನಮ್ಮ ಸೈನಿಕರನ್ನೆಲ್ಲಾ ಕರೆದುಕೊಂಡು ಆ ಕಡೆಗೆ ಹೋಗೋಣವೇ ? " ಎಂದು ಕೇಳಿದನು.

"ಹೋಗೋಣ. ಆದರೆ ಸೈನಿಕರೊಂದಿಗೆ ಕೋಲಾಹಲವಾಗಿ ಹೋದರೆ ಆ ಧೂರ್ತ ತಾಂತ್ರಿಕನಿಗೆ ನಮ್ಮ ಸುಳಿವು ಮುಂದಾಗಿಯೇ ತಿಳಿದು



ಹೊಗುತ್ತದೆ. ಅವನು ತನ್ನ ತಂತ್ರದ ಎಚ್ಚರಿಕೆಯನ್ನು ವಹಿಸಿ ಕೊಳ್ಳುತ್ತಾನೆ. ಆದುದರಿಂದ ನಾವು ಶಬ್ದವಿಲ್ಲದೆ ಜಾಗರೂಕತೆಯಿಂದ ಹೋಗಬೇಕು." ಎಂದು ಹೇಳಿ ಕಾಳೀವರ್ಮನು ಅಲ್ಲಿಂದ ಕದಲಿದನು.

ಕಾಳೀವರ್ಮನನ್ನು ಅನುಸರಿಸಿ ಉಗ್ರದಂಡ ರಾಕ್ಷಸನೂ, ಕಟುಕ ನಾಯಕನೂ ಹೊರಟರು. ಅದುವರೆಗೆ ಎಲ್ಲವನ್ನೂ ನೋಡುತ್ತಾ ಸುಮ್ಮನಿದ್ದ ಬೈರಾಗಿ ಗುರುವೂ, ಅವನ ಶಿಷ್ಯನೂ, ಸುರಂಗ ಮಾರ್ಗವನ್ನು ಜಿತಕೇತು ರಾಜನಿಗೆ ತೋರಿಸುತ್ತ, "ಮಹಾರಾಜರೆ, ನಾವು ಈ ಸುರಂಗ ಮಾರ್ಗದಲ್ಲಿ ಹೋಗಿ, ಕೆರೆಯ ತೀರದಲ್ಲಿ ಆಲದ ಮರದ ಹತ್ತಿರವಿರುವ ಇದರ ಮುಖದ್ವಾರವನ್ನು ಕಾವಲು ಕಾಯುತ್ತಾ ಇರುತ್ತೇವೆ. ಅಪ್ಪಣೆ!" ಎಂದು ಹೇಳಿ ಸುರಂಗದೊಳಗೆ ಇಳಿದು ಹೋದರು. ಅವರಿಗೆ ಅಲ್ಲಿಂದ ಪಾರಾಗಿ ಹೋದರೆ ಸಾಕೆನಿಸಿತ್ತು! ಕಾಳೀವರ್ಮನೂ, ಕಟುಕ ನಾಯಕನೂ, ಉಗ್ರದಂಡ ರಾಕ್ಷಸನೂ ಅರಣ್ಯದೊಳಗೇ ಕಾಲು ನಡಿಗೆಯಿಂದ ಸಾಗುತ್ತಿದ್ದರು. ಆಗ ಅವರು ದೊಡ್ಡದೊಂದು ಕರಡಿಯನ್ನು ನೋಡಿದರು. ಅದು ಕೆಲವು ಗಡ್ಡೆ ಗೆಣಸುಗಳನ್ನೂ, ಹಣ್ಣುಗಳನ್ನೂ ಕಾಡು ಬೀಳುಗಳಿಂದ ಕಟ್ಟಿ ಹೆಗಲ ಮೇಲಿಟ್ಟುಕೊಂಡು ಎಲ್ಲಿಗೋ ಹೋಗುತ್ತಿತ್ತು.

ಕಾಳೀವರ್ಮನು ನಿಂತು ಆಶ್ಚರ್ಯದಿಂದ ಆ ಕರಡಿಯನ್ನು ಉಗ್ರದಂಡನಿಗೆ ತೋರಿಸುತ್ತ "ಏನಿದು? ಕರಡಿ ಮನುಷ್ಯರಿಗೆ ಬೇಕಾದ ಹೊರೆಯೊಂದಿಗೆ ಹೋಗುತ್ತಿದೆಯಲ್ಲ! ಎಂಥ ವಿಚಿತ್ರ! ಯಾರ ಹತ್ತಿರವೋ ಒಳ್ಳೇ ಪಳಗಿದೆ!" ಎಂದನು.

"ಇದರಲ್ಲಿ ಆಶ್ಚರ್ಯಕ್ಕೇನಿದೆ? ಈ ಕರಡಿ ದುಷ್ಟನಾದ ತಾಂತ್ರಿಕ ಮಿಥ್ಯಾಮಿಶ್ರನ ಸಾಕು ಕರಡಿಯಾಗಿರುತ್ತೆ. ನಾವು ಜಾಗರೂಕತೆಯಿಂದ ಸದ್ದಿಲ್ಲದೆ ಅದನ್ನು ಅನುಸರಿಸಿ ಹೋಗೋಣ. ನಿಜ ಗೊತ್ತಾಗುತ್ತೆ" ಎಂದನು ರಾಕ್ಷಸ ಪಿಸುದನಿಯಿಂದ.

ಮೂವರೂ ಕರಡಿಯನ್ನು ಅನುಸರಿಸಿ ಹೋದರು. ಸ್ವಲ್ಪ ದೂರ ಹೋಗುವಷ್ಟರಲ್ಲಿ ಕರಡಿಕೆಂಗಣ್ಣ ಮಾಂತ್ರಿಕನೂ, ಬಿಳಿಗಡ್ಡದಿಂದ, ಸೊರಕಲು ಶರೀರದಿಂದ, ರುದ್ರಾಕ್ಷಿ ಮಾಲೆಗಳನ್ನು ಧರಿಸಿಕೊಂಡಿದ್ದ ಒಬ್ಬ ವೃದ್ಧನೂ ಒಟ್ಟಿಗೆ ಕುಳಿತು ಏನೋ ಮಾತಾಡಿಕೊಂಡಿರುವುದನ್ನು ನೋಡಿದರು. ಕೆಂಗಣ್ಣ ಮಾಂತ್ರಿಕನು ವೃದ್ಧನ ಮುಂದೆ ತುಂಬಾ ವಿನಯ ವಿಧೇಯತೆಯಿಂದ ಮಾತಾಡುತ್ತಿದ್ದನು. ಅವರ ಮಾತಿನಲ್ಲಿ ಸಾಮಂತ ಸೂರ್ಯ ಭೂಪತಿಯೂ ಸೇರಿಕೊಂಡಿದ್ದನು.

ಕಾಳೀವರ್ಮನನ್ನು ನೋಡಿದ ಕೂಡಲೇ ಕೆಂಗಣ್ಣ ಮಾಂತ್ರಿಕನು ತಟಕ್ಕನೆ ಎದ್ದುನಿಂತು ಉತ್ಸಾಹದಿಂದ, "ಶಿಷ್ಯಾ ಕಾಳೀ! ಇಕೋ ನನ್ನ ಗುರುಗಳು ಇಲ್ಲೇ ಇದ್ದಾರೆ! ಇವರೇ ಮಹಾಪ್ರಭಾವಶಾಲಿಗಳಾದ ಭಲ್ಲೂಕಪಾದ ಮಹಾ ಗುರುಗಳು!" ಎಂದು ಕೂಗಿ

ಹೇಳಿದನು ಸಂತೋಷದಿಂದ. ಕಾಳೀವರ್ಮನು ಬೇಗ ಬೇಗನೇ ಮುಂದೆ ಹೋಗಿ, "ಹಾಗಾದರೆ ನಿಮ್ಮ ಭಾರ ತುಂಬಾ ಕಡಿಮೆಯಾದ ಹಾಗಾಯಿತು. ನಿಮ್ಮ ಗುರುಗಳು ಕ್ಷೇಮವಾಗಿ ನಿಮ್ಮೊಂದಿಗೆ ಇದ್ದಾರೆ." ಎಂದನು.

"ಹೌದು. ಈಗ ಸೂರ್ಯಭೂಪತಿ ಹೇಳುವ ಮಾತುಗಳು ನಿಮಗೇ ಸಂಬಂಧಿಸಿದಂಥಾದ್ದು. ಇವನ ಕುಮಾರಿ ಕಾಂಚನಲತೆಯನ್ನು ತಾಂತ್ರಿಕ ಮಿಥ್ಯಾ ಮಿಶ್ರನು ಕೋಟೆಯೊಳಗಿನಿಂದ ಅಪಹರಿಸಿಯಾಯಿತು. ಎತ್ತ ಹೋದನೋ ಏನಾದನೋ ? ಈಗ ನೀನೇನು ಮಾಡುವಿಯೋ ?" ಎಂದನು ಕೆಂಗಣ್ಣ ಮಾಂತ್ರಿಕ.

ಅದುವರೆಗೆ ಕರಡಿಯನ್ನು ಹೊಡೆದು ಕೊಲ್ಲುವ ಎತ್ತುಗಡೆಯಲ್ಲಿದ್ದ ಕಟುಕ ನಾಯಕನು ತನ್ನ ಚಿಪ ಗೊಡಲಿಯನ್ನು ಭುಜದ ಮೇಲಕ್ಕೆಳಿಸಿ, "ಹಾಗಾದರೆ ಈ ಕರಡಿ ಭಲ್ಲೂಕ ಪಾದರ ಸೇವೆಯದೆಂದಾಯಿತು. ಪುಣ್ಯಕಾಲ ! ಬದುಕಿಕೊಂಡಿತು !" ಎಂದು ಹೇಳಿಕೊಂಡನು.

"ಓಹೋ ! ನಮ್ಮ ಗುರುಗಳ ಸಾಕು ಕರಡಿಯೇ ನಿಮ್ಮನ್ನು ಇಲ್ಲಿಗೆ ಕರೆತಂದಿತೆ ? ಒಳಿತೇ ಆಯಿತು. ಆ ದುಷ್ಟ ತಾಂತ್ರಿಕ ಮಿಥ್ಯಾಮಿಶ್ರನು ನನ್ನ ಗುರುಗಳನ್ನು ಭಲ್ಲೂಕೇಶ್ವರೀ ಆಲಯದ ಮುಂದೆ ಒಂದು ಮರಕ್ಕೆ ಕಟ್ಟಿ ಆಹಾರವೇನೂ ಕೊಡದೆ ಕೊಲ್ಲಲು ಹಂಚಿಕೆ ಹಾಕಿದ್ದನು. ಆ ತಾಂತ್ರಿಕನು ಈ ಕಡೆಗೆ ಬಂದಮೇಲೆ ಸ್ವಾಮಿಭಕ್ತಿ ತುಂಬಿದ ಈ ಕರಡಿ ಇವರ ಕಟ್ಟುಗಳನ್ನು ಬಿಚ್ಚಿ ಕಾಪಾಡಿತು. ಈ ಕರಡಿಯ ಜತೆಯಲ್ಲಿಯೇ ಪ್ರಯಾಣ ಮಾಡಿ ಇಲ್ಲಿಯ ವರೆಗೆ ಬಂದಿದ್ದಾರೆ." ಎಂದ ಕೆಂಗಣ್ಣ.

ಉಗ್ರದಂಡ ರಾಕ್ಷಸನು ಮುದಿ ಭಲ್ಲೂಕ ಪಾದನನ್ನು ಕೋಪದಿಂದ ದುರುಗುಟ್ಟಿ ನೋಡುತ್ತ, "ನನ್ನ ಅಣ್ಣ ಕಾಲದಂಡ ಎಲ್ಲಿದ್ದಾನೆ ?" ಎಂದು ಗದರಿಸಿ ಕೇಳಿದನು.



ಭಲ್ಲೂಕ ಪಾದನು ತನ್ನ ಎದೆಯ ಮೇಲಿರುವ ರುದ್ರಾಕ್ಷಿ ಮಾಲೆಗಳನ್ನು ನೋಡಿ ಮುಗುಳು ನಗುತ್ತ, "ಈ ಪ್ರಶ್ನೆ ಕೇಳಬೇಕಾದ್ದು ನನ್ನ ಹತ್ತಿರವಲ್ಲ. ಆ ಮಿಥ್ಯಾಮಿಶ್ರನ ಹತ್ತಿರ. ಅವನು ಮದ್ದು ಮಾಯೆಗಳಿಂದ ನಿನ್ನ ಅಣ್ಣನನ್ನು ಮೂಕಮಾಡಿ, ನಾನು ಈ ಕರಡಿಯನ್ನು ವಾಹನವಾಗಿ ಉಪಯೋಗಿಸಿಕೊಳ್ಳುವ ಹಾಗೆಯೇ, ಅವನು ನಿನ್ನಣ್ಣನ ಹೆಗಲ ಮೇಲೇರಿ ಪ್ರಯಾಣ ಮಾಡುತ್ತಾನೆ. ಅವನು ಈ ಅರಣ್ಯದಲ್ಲೇ ಎಲ್ಲೋ ಇರುತ್ತಾನೆ. ಅವನನ್ನು ಕಂಡುಹಿಡಿದು ಬಿಟ್ಟರೆ, ನಿನ್ನ ಅಣ್ಣನೂ ರಾಜಕುಮಾರಿ ಕಾಂಚನಲತೆಯೂ ಸಿಗುತ್ತಾರೆ. ನಿಮ್ಮಲ್ಲಿ ಅವನನ್ನು ಕಂಡುಹಿಡಿಯಬಲ್ಲ ಸಮರ್ಥ ಸಾಹಸಿ ಯಾರೋ ?" ಎಂದು ಎಲ್ಲರನ್ನೂ ಒಮ್ಮೆ ನೋಡಿದನು.

ಕಾಳೀವರ್ಮನು ಕತ್ತಿಯ ಹಿಡಿಯಮೇಲೆ ಕೈಹಾಕಿ, "ಆ ಸಾಹಸವನ್ನು ನಾನೇ ಮಾಡಿ ಕಾಂಚನಲತೆಯನ್ನು ರಕ್ಷಿಸುವುದು ಮಾತ್ರವಲ್ಲ, ಆ ತಾಂತ್ರಿಕನನ್ನೂ,



ಮಂತ್ರಗಳ ಮಹಾಗುರುವಾದ ನಿಮ್ಮನ್ನೂ ಸಹ ನನ್ನ ಕತ್ತಿಗೆ ಬಲಿಹಾಕಿ ಬಿಡುತ್ತೇನೆ. ಮಾನವರ ಕಾರ್ಯಗಳನ್ನು ಮೀರಿಸುವಂಥ ಮಂತ್ರತಂತ್ರ ಕಲಿತವರಾರೂ ಪ್ರಪಂಚದಲ್ಲಿರಬಾರದು. ಅಂಥವರಿಂದ ಕೇಡೇ ಬರುತ್ತೆ." ಎಂದನು.

ಆ ಮಾತುಕೇಳಿ ಕರಡಿಕೆಂಗಣ್ಣ ಮಾಂತ್ರಿಕನಿಗೆ ಮಹಾಕೋಪ ಬಂದು, ಹಲ್ಲು ಕಡಿಯುತ್ತ ಮಂತ್ರ ದಂಡವನ್ನು ಮೇಲೆತ್ತಿ "ಏನೆಂದೆಯೋ ಸೊಕ್ಕಿನ ಶಿಷ್ಯಾ!" ಎಂದು ಗರ್ಜಿಸಿದನು.

ಕೂಡಲೇ ಸೂರ್ಯಭೂಪತಿ ಅವನನ್ನು ತಡೆದು, "ಕಾಳೀವರ್ಮಾ, ಈ ಭಲ್ಲೂಕ ಪಾದರೂ ಅವರ ಶಿಷ್ಯ ಕೆಂಗಣ್ಣ ಮಾಂತ್ರಿಕರೂ ನಮ್ಮ ಶತ್ರುಗಳಲ್ಲ, ಇವರ ಮೇಲೆ ನಿರರ್ಥಕವಾಗಿ ಕೋಪಿಸುವುದು ನ್ಯಾಯವಲ್ಲ. ಶಂಖ ಧ್ವನಿ ಎಬ್ಬಿಸುತ್ತಾ ಮಾಯಾ ಮರ್ಕಟನ ಗುರುವಾದ ತಾಂತ್ರಿಕ ಮಿಥ್ಯಾಮಿಶ್ರನ ಬಳಿಗೆಬರುವಂತೆ ಸೂಚನೆ ಕೊಟ್ಟ ಅವರ ಸೇವಕನನ್ನು ಹಿಡಿಯಲು ನನಗೆತುಂಬಾ ಸಹಾಯ ಮಾಡಿದವರು ಇವರೇ. ಇಕೋ ನೋಡು ಆ ಶಂಖ. ಅವನ ಕೈಯಿಂದ ನಾನು ಈ ಶಂಖವನ್ನು ಕಿತ್ತುಕೊಂಡು, ಎಷ್ಟು ಹಿಂಸೆ ಪಡಿಸಿ ಕೇಳಿದರೂ ಆ ದುಷ್ಟನಿರುವ ಸ್ಥಳವನ್ನು ಹೇಳಲಿಲ್ಲ. ಅಂತಲೇ ಆ ದುಷ್ಟ ಸೇವಕನನ್ನು ನನ್ನ ಕತ್ತಿಗೆ ಬಲಿಕೊಟ್ಟು ಬಿಟ್ಟೆ" ಎಂದನು.

ಕಾಳೀವರ್ಮನು ಆ ಶಂಖವನ್ನು ದೂರ ಬಿಸುಟು, "ಸೂರ್ಯಭೂಪತೀ! ನೀನು ಆ ಸೇವಕನನ್ನು ಕೊಲ್ಲ ಬೇಕಾಗಿದ್ದಿಲ್ಲ. ನೀನು ಕೊಲ್ಲ ಬೇಕಾದ್ದು ನಿನ್ನ ಕುಮಾರಿಯನ್ನು ಅಪಹರಿಸಿಕೊಂಡು ಹೋದ ತಾಂತ್ರಿಕ ಮಿಥ್ಯಾಮಿಶ್ರನನ್ನು ಮಾತ್ರ. ಅವನ ಸೇವಕನನ್ನು ಕೊಲೆಮಾಡಿ ಪಾಪ ಕಟ್ಟಿಕೊಂಡಿರುವಿ. ಸರಿ, ಹೋಗಲಿ. ನಾವೀಗ ತಲಾ ಒಂದೊಂದು ದಿಕ್ಕಿಗೆ ಹೊರಟು ಅವನನ್ನು ಹುಡುಕೋಣ. ಸಿಕ್ಕದೆ ಎಲ್ಲಿಗೆ ಹೋಗುತ್ತಾನೆ?" ಎಂದು ಹೇಳಿ ಕೂಡಲೇ ಒಂದು ದಿಕ್ಕನ್ನು ಹಿಡಿದು ಹೊರಟು ಬಿಟ್ಟನು.

ಭಲ್ಲೂಕ ಪಾದನು ಕಾಳೀವರ್ಮನನ್ನು ಮೆಚ್ಚುವಂತೆ ನೋಡುತ್ತ, ತಲೆಯಾಡಿಸಿ, ಕೆಂಗಣ್ಣ ಮಾಂತ್ರಿಕನನ್ನು ಕುರಿತು, "ಶಿಷ್ಯಾ, ನೀನು ನಮಗೆ ಅಗತ್ಯವಾಗಿದ್ದ ಹುಟ್ಟು ಗುಣವುಳ್ಳವನನ್ನೇ ಶಿಷ್ಯನಾಗಿ ಆರಿಸಿದ್ದೀ. ಆದರೆ ಪರಿಸ್ಥಿತಿ ವ್ಯತಿರೇಕಿಸಿದ್ದರಿಂದ ಕೈಜಾರಿ ಹೋದನು. ಈಗ ನಾವು ಆ ತಾಂತ್ರಿಕನನ್ನು ಹತಮಾಡುವುದರಲ್ಲಿ ತೃಪ್ತಿ ಪಡೋಣ, ಹೊರಡಿರಿ ಎಲ್ಲರೂ" ಎಂದು ಹೇಳಿ, ತನ್ನ ಕರಡಿ ವಾಹನದ ಮೇಲೆ ಏರಿದನು,

ಅವನ ಅಕ್ಕಪಕ್ಕಗಳಲ್ಲಿ ಕೆಂಗಣ್ಣನೂ, ಉಗ್ರದಂಡ ರಾಕ್ಷಸನೂ ಹೊರಟರು. ಉಗ್ರದಂಡನನ್ನು ಸೂರ್ಯಭೂಪತಿಯೊಂದಿಗೆ ಇನ್ನೊಂದು ದಿಕ್ಕಿಗೆ ಹೋಗುವಂತೆ ಹೇಳಿದನು ಭಲ್ಲೂಕಪಾದ. "ನಾನೂ

ಬರುತ್ತೇನೆ" ಎಂದು ಕಟುಕ ನಾಯಕನೂ ಸೂರ್ಯ ಭೂಪತಿಯೊಂದಿಗೆ ಹೊರಟನು.

ಕಾಳೀವರ್ಮನು ದಾರಿಯುದ್ದಕ್ಕೂ ಕಾಲಿನ ಗುರುತುಗಳಿವೆಯೇ ಎಂದು ನೆಲವನ್ನು ನೋಡುತ್ತ ನಡೆಯುತ್ತಿದ್ದನು. ಕೆಲವು ಗಂಟೆಗಳ ಹಿಂದೆ ಅರಣ್ಯ ಪ್ರಾಂತದಲ್ಲಿ ಸಾಧಾರಣ ಮಳೆಸುರಿದು ಹೋಗಿತ್ತು. ಅಂತಲೇ ಕೆಲವು ಮನುಷ್ಯರ ಹಜ್ಜೆಗುರುತುಗಳೊಂದಿಗೆ ಅದಕ್ಕಿಂತ ಮೂರು ಪಾಲು ದೊಡ್ಡದಾದ ಪಾದದ ಗುರುತುಗಳಿರುವುದನ್ನು ಕಾಳೀವರ್ಮನು ನೋಡಿದನು. ತಾಂತ್ರಿಕನ ವಶದಲ್ಲಿದ್ದ ಉಗ್ರದಂಡನ ಅಣ್ಣ ಕಾಲದಂಡ ರಾಕ್ಷಸನ ನೆನಪು ಬಂತು.

ಆ ದಿಕ್ಕಿನಲ್ಲಿ ಎಲ್ಲಿಯೋ ಮಿಥ್ಯಾಮಿಶ್ರ ತಾಂತ್ರಿಕನು ನೋಡಲು ಸಿಗುವನೆಂದು ಕಾಳೀವರ್ಮನಿಗೆ ನಂಬುಗೆ ಯುಂಟಾಯಿತು. ಆ ದೊಡ್ಡ ಹಜ್ಜೆಯ ಗುರುತು ನೋಡುತ್ತಾ ತುಸುದೂರ ಹೋದವನಿಗೆ ದೊಡ್ಡ ದೊಂದು ಕೊಳವು ಕಂಡು ಬಂತು. ಆ ಕೊಳಕ್ಕೆ ಬಂದು ಬೀಳುವ ಒಂದು ನೀರೋಳಿಯನ್ನೂ ನೋಡಿದನು. ಆ ನೀರೋಳಿಯ ಬದಿಯಲ್ಲಿ ನೆಲಕ್ಕೆ ಒಂದು ತ್ರಿಶೂಲವನ್ನು ಚುಚ್ಚಿ ನಿಲ್ಲಿಸಲಾಗಿತ್ತು. ಅದನ್ನು ನೋಡಿ ಆಶ್ಚರ್ಯಪಡುತ್ತ ಕಾಳೀವರ್ಮನು ಇನ್ನಿಷ್ಟು ಮುಂದೆ ಹೋದನು. ಕೊಳದ ನೀರಿನಲ್ಲಿ ದೃಢಕಾಯನೊಬ್ಬನು ಆಕಾಶದ ಕಡೆಗೆ ಕೈ ಮುಗಿದು ಕಣ್ಣು ಮುಚ್ಚಿ ಮಂತ್ರ ಜಪಿಸುತ್ತ ನಿಂತಿದ್ದನು. ಅವನ ತಲೆಯಲ್ಲಿ ಕರ್‍ರಗಾದ ಗುಂಗುರುಕೂದಲುಗಳಿದ್ದುವು. ಒಂದು ಮುಷ್ಟಿಗಡ್ಡವನ್ನೂ ಬೆಳೆಸಿದ್ದನು. ಅವನೇ ತಾಂತ್ರಿಕ ಮಿಥ್ಯಾಮಿಶ್ರನೆಂದು ಕಾಳೀವರ್ಮನಿಗೆ ಗೊತ್ತಾಯಿತು. ಅವನು ಒಮ್ಮೆಗೇ ಉಕ್ಕಿದ ಕೋಪ ದಿಂದ ಕಣ್ಣು ಕೆಕ್ಕರಿಸಿಕೊಂಡು ವೇಗವಾಗಿ ಕೊಳದ ಬದಿಗೆ ಹೋಗಿ, "ಎಲೋ ಕಪಟ ಧ್ಯಾನದವನೇ! ತಾಂತ್ರಿಕ ಮಿಥ್ಯಾಮಿಶ್ರನೆಂದರೆ ನೀನುತಾನೆ? ನಿನ್ನಂಥವನಿಗೆ ಮಂತ್ರ ಜಪಗಳಿಂದ ಏನು



ಪ್ರಯೋಜನ? ನೀನು ಅಪಹರಿಸಿದ ಸೂರ್ಯ ಭೂಪತಿಯ ಮಗಳನ್ನು ಎಲ್ಲಿ ಬಚ್ಚಿಟ್ಟಿರುವಿ? ಬೇಗ ಹೇಳು" ಎಂದು ಗಟ್ಟಿಯಾಗಿ ಕೇಳಿದನು.

ಮಂತ್ರಜಪ ಮಾಡುವವನು ಕಣ್ಣು ತೆರೆದು, ಕಾಳೀವರ್ಮನನ್ನು ಪರೀಕ್ಷಿಸುವವನಂತೆ ನೋಡಿ, "ನನ್ನನ್ನು ಕಂಡಮಾತ್ರದಿಂದಲೇ ನಾನು ಯಾರೆಂಬು ದನ್ನು ತಿಳಿದುಕೊಂಡ ನೀನು ಬುದ್ಧಿವಂತನೇಸರಿ. ನನ್ನ ಶಂಖ ಹೊರುವ ಸೇವಕನನ್ನು ಕಾಡಿನಲ್ಲಿ ಯಾರೋ ಕೊಂದರೆಂದು ನನ್ನ ಶಿಷ್ಯ ಭ್ರಾಂತಿಮತಿ ಹೇಳಿದ. ಅವನನ್ನು ಕೊಂದವನು ನೀನಲ್ಲವಷ್ಟೆ? ಹೌದಾದರೆ ಮೊದಲು ನಿಜವನ್ನು ಒಪ್ಪಿಕೊಂಡು ಆ ಮೇಲೆ ಮಾತಾಡು" ಎಂದನು.

"ಅದೆಲ್ಲಾ ಮತ್ತೆ ಹೇಳುತ್ತೇನೆ. ಕಾಂಚನಲತೆ ಯನ್ನು ಎಲ್ಲಿ ಅಡಗಿಸಿರುವೆಯೋ ಬೇಗ ಹೇಳಿಬಿಡು," ಎಂದು ಕಾಳೀವರ್ಮನು ಕತ್ತಿಯನ್ನು ಹಿಡಿಯಲು ಕೈಯನ್ನಿಳಿಸಿದನು. ಆಗ ಮರದಕೊಂಬೆಯಲ್ಲಿದ್ದ



ಮಾಯಾಮರ್ಕಟನು "ಓಹೋಯ್" ತಾಂತ್ರಿಕ ಗುರೂ! ಇವನೇ ಕಾಳೀವರ್ಮ! ಹುಟ್ಟಾಸಾಹಸಿ. ಹೆಚ್ಚುಮಾತು ಬೆಳೆಸದೆ ಈ ಕ್ಷಣದಲ್ಲೇ ಇವನ ಪ್ರಾಣ ತೆಗೆದುಬಿಡುವುದೇ ನಮಗೆ ಕ್ಷೇಮ!" ಎಂದು ಕರ್ಕಶವಾಗಿ ಕೂಗುತ್ತ ಮರದ ಕೊಂಬೆಯಿಂದ ಧುಮುಕಿದನು. ಅದೇ ಕ್ಷಣದಲ್ಲಿ ಕಾಳೀವರ್ಮನು ಕತ್ತಿ ಹಿರಿಯಲು ಕೈಯಿಳಿಸುವಾಗ, ಮೇಲಿಂದ ಏನೋ ಬೀಳುವುದೆಂಬ ಆತುರದಲ್ಲಿ ನೆಲದಲ್ಲಿ ಚುಚ್ಚಲ್ಪಟ್ಟ ಶೂಲವನ್ನು ಕಿತ್ತು ಹಾರುವ ಮರ್ಕಟನ ಕಡೆಗೆ ಎತ್ತಿ ಹಿಡಿದನು. ಮಾಯಾಮರ್ಕಟನು ಅದರ ಮೊನೆಯ ಮೇಲೆಯೇ ಹಾರಿದ್ದರಿಂದ ಶೂಲವು ಮತ್ತೆ ನೆಲಕ್ಕಿಳಿದು ಕಾಳೀವರ್ಮನ ಹಿಡಿತ ತಪ್ಪಿ ನೆಲದಲ್ಲಿ ನೆಟ್ಟುಹೋಯಿತು. ಮರ್ಕಟನ ಭಾರವು ಅದನ್ನು ಚೆನ್ನಾಗಿ ನೆಲಕ್ಕೂರಿಸಿ ಶೂಲಕ್ಕೇರಿಸಲ್ಪಟ್ಟಂತಾಯಿತು ಮರ್ಕಟನ ಅವಸ್ಥೆ! "ಹಾ! ತಾಂತ್ರಿಕಗುರೂ! ಇನ್ನು ನನಗೆ ನಿಮ್ಮ ಸೇವೆ ಆ ಲೋಕದಲ್ಲಿಯೇ!" ಎಂದು ಮರ್ಕಟನು ಕೂಗಿದನು ಕೊನೆಯುಸಿರೆಳೆಯುತ್ತ.

ಕಾಳೀವರ್ಮನು ಒರೆಯಿಂದ ತನ್ನ ಕತ್ತಿಯನ್ನು ಎಳೆದುಕೊಂಡು. ನಿಬ್ಬೆರಗಾಗಿ ನೋಡುತ್ತಿರುವ ತಾಂತ್ರಿಕ ಮಿಥ್ಯಾಮಿಶ್ರನನ್ನು ನೋಡುತ್ತ, "ತಾಂತ್ರಿಕಾಧಮನೇ! ನೀನು ಪೂಜಿಸುವ ಭಲ್ಲೂಕೇಶ್ವರಿಯ ಆಣೆ! ನಿನ್ನನ್ನು ಈ ಕೊಳದ ತೀರದಲ್ಲೇ ಆ ಲೋಕಕ್ಕೆ ಕಳುಹಿಸಿಬಿಡುತ್ತೇನೆ. ಮೊದಲು ಕಾಂಚನಲತೆ ಎಲ್ಲಿದ್ದಾಳೆಂದು ಹೇಳಿ ಸ್ವಲ್ಪವಾದರೂ ಪುಣ್ಯ ಕಟ್ಟಿಕೋ" ಎಂದನು.

ಅದುವರೆಗೂ ನಿಶ್ಚೇಷ್ಟನಂತಿದ್ದ ತಾಂತ್ರಿಕನು, ಮುಗುಳು ನಗುವನ್ನು ಸೂಸುತ್ತ ಕೈಗಳನ್ನು ಚಾಚಿ ಮುಷ್ಟಿಗಳನ್ನು ಮುಚ್ಚುತ್ತ ಬಿಡಿಸುತ್ತ ಬಗೆಬಗೆಯಾಗಿ ತಿರುಗಿಸುವುದನ್ನು ನೋಡಿ ಕಾಳೀವರ್ಮನಿಗೆ ವಿಚಿತ್ರವೆನಿಸಿತು. ಅವನು ನೀರಿಗಿಳಿದು ಹೋಗಿ ಅವನನ್ನು ಹೊಡೆಯ ಬೇಕೆಂದು ಅಡಿ ತೆಗೆಯುವಾಗ, ಹಿಂದಿನಿಂದ "ಯುವಕನೇ! ಜಾಗ್ರತೆ! ತಾಂತ್ರಿಕನು ಸನ್ನೆ ತೋರಿಸುವುದು ಮೂಕರಾಕ್ಷಸನಿಗೆ!" ಎಂಬ ಧ್ವನಿ ಸ್ತ್ರೀ ಕಂಠದಿಂದ ಹೊರಟು ಬಂತು.

ಕಾಳೀವರ್ಮನು ತಟ್ಟನೆ ಹಿಂದಡಿಯಿಟ್ಟು ತಿರುಗಿ ನೋಡಿದನು. ಉಗ್ರದಂಡ ರಾಕ್ಷಸನನ್ನೇ ಹೋಲುವ ರಾಕ್ಷಸನೊಬ್ಬನು, ತನ್ನ ಹೆಗಲಿನ ಮೇಲಿದ್ದ ಯುವತಿಯೊಬ್ಬಳನ್ನು ಕೆಳಕ್ಕಿಳಿಸಿ, ಕಾಡಾನೆಯಂತೆ ಒಂದುಸಾರಿ ಘೀಂಕಾರಮಾಡಿ ಕಲ್ಲಿನ ಗದೆಯನ್ನು ಎತ್ತಿಕೊಂಡು ಕಾಳೀವರ್ಮನ ಕಡೆಗೆ ಬಂದನು. ಅವನು ಸಮೀಪಿಸುವ ವರೆಗೂ ನಿಂತಿದ್ದ ಕಾಳೀವರ್ಮನು ರಾಕ್ಷಸನು ತನ್ನಮೇಲೆ ಹಾರುವಾಗ ಮಿಂಚಿನಂತೆ ಬದಿಗೆ ಸರಿದನು. ರಾಕ್ಷಸನು ಕೊಳದ ಬದಿಯ ಕೆಸರಿನಲ್ಲಿ ಕಾಲುಜಾರಿ ನೀರಿನಮೇಲೇ ಕೌಚಿ ಬೀಳುವಾಗ, ಅವನ ಕೈಯಲ್ಲಿದ್ದ ಕಲ್ಲಿನಗದೆ ತೀರದಲ್ಲಿ ಬಿದ್ದುಹೋಯಿತು. ಬಿದ್ದ ರಾಕ್ಷಸನು ಮತ್ತಷ್ಟು ದೊಡ್ಡದನಿಯಿಂದ ಗರ್ಜಿಸುತ್ತ, ಕೈಗಳನ್ನೂರಿ ಏಳ

ಬೇಕೆಂದಿರುವಾಗ, ಕಾಳೀವರ್ಮನು ಅವನ ಗದೆಯನ್ನೆತ್ತಿಕೊಂಡು ಅವನ ತಲೆಗೆ ಬಲವಾಗಿ ಹೊಡೆದನು. ಆ ಪೆಟ್ಟಿಗೆ ರಾಕ್ಷಸನು ದಿಕ್ಕುಗಳು ಪ್ರತಿಧ್ವನಿಸುವಂತೆ ಕೂಗಿ ತಲೆತಿರುಗಿ ಕೊಳದ ಬದಿಯಲ್ಲಿ ಅಂಗಾತ ಬಿದ್ದುಬಿಟ್ಟನು.

ಇಷ್ಟಾದ ಮೇಲೆ ಆ ಸ್ಥಳದಿಂದ ಹೇಗಿ ಓಡುವುದೆಂದು ದಿಕ್ಕುಗಳನ್ನು ನೋಡುತ್ತಿರುವ ತಾಂತ್ರಿಕನನ್ನು ಅಡಗಣ್ಣಿನಿಂದ ನೋಡುತ್ತ, ಕಾಳೀವರ್ಮನು ತನ್ನ ಬದಿಯಲ್ಲಿದ್ದ ಯುವತಿಯನ್ನು ಕುರಿತು, "ನೀನು ತಾನೇ ಸಾಮಂತ ಸೂರ್ಯಭೂಪತಿಯ ಮಗಳು ಕಾಂಚನಲತೆ?" ಎಂದು ಕೇಳಿದನು. ಅವಳು ಹೌದೆಂಬಂತೆ ತಲೆಯಾಡಿಸಿ, "ಈ ತಾಂತ್ರಿಕಾಧಮನ ಇಬ್ಬರು ಪ್ರಚಂಡ ಸೇವಕರೂ ಸತ್ತ ಹಾಗೆ ಕಾಣುತ್ತದೆ. ನನ್ನ ಹತ್ತಿರ ಆಯುಧವಿಲ್ಲ. ನಿಮ್ಮ ಕತ್ತಿಯನ್ನು ನನಗೆ ಕೊಟ್ಟು, ಮೂಕ ರಾಕ್ಷಸನ ಗದೆಯನ್ನು ನೀವು ಎತ್ತಿಕೊಳ್ಳಿ. ನಾವಿಬ್ಬರೂ ಸೇರಿ ಈ ದುಷ್ಟನಿಗೆ ಗತಿಗಾಣಿಸಬಹುದು" ಎಂದಳು.

ಅವಳ ಮಾತು ಕೇಳಿ ಕಾಳೀವರ್ಮನು ಅತ್ಯಾನಂದಪಡುತ್ತ, ಕತ್ತಿಯನ್ನು ಅವಳಿಗೆ ಕೊಟ್ಟು, ಕಲ್ಲಿನ ಗದೆಯನ್ನು ಎತ್ತಿಕೊಂಡು ಕೊಳದ ನೀರಿಗಿಳಿದು ಮುಂದೆ ಹೋದನು. ಅಷ್ಟರಲ್ಲಿ ಜಿತಕೇತು ರಾಜನು ಇಬ್ಬರು ಸೈನಿಕರೊಂದಿಗೆ ಅಲ್ಲಿಗೆ ಬಂದು, "ಅಯ್ಯಯ್ಯೋ ಕಾಳೀವರ್ಮಾ! ಮುಂದೆ ಹೋಗಬೇಡ! ಇದು ಮೊಸಳೆ ಕೊಳ! ಆ ತಾಂತ್ರಿಕನನ್ನು ನನ್ನ ಸೈನಿಕರೂ ಕಟುಕ ನಾಯಕನೂ ನೋಡಿಕೊಳ್ಳುತ್ತಾರೆ. ಅವನು ತಪ್ಪಿಸಿಕೊಂಡು ಓಡಲು ಸಾಧ್ಯವೇ ಇಲ್ಲ. ಉಗ್ರದಂಡ ರಾಕ್ಷಸನೂ ಬಂದನು" ಎಂದು ಕೂಗುತ್ತಾ ಓಡಿ ಬಂದನು.

ರಾಜನು ಹಾಗೆಯೇ ಕಾಂಚನಲತೆಯ ಬಳಿಗೆ ಓಡಿ ಬಂದು, "ಅಮ್ಮಾ, ಕಾಂಚನಲತೇ! ನೀನು ನನ್ನ ದತ್ತ ಪುತ್ರಿ ಗೊತ್ತಾ? ಆ ಕಾರಣದಿಂದ ನನಗೆ



ಹಿಡಿಸಿದ ವರನಿಗೆ ನಿನ್ನನ್ನು ಕೊಟ್ಟು ಮದುವೆ ಮಾಡುವ ಹಕ್ಕು ನನಗಿದೆಯಮ್ಮಾ! ಮಗಳೇ! ಕ್ಷೇಮವಾಗಿರುವೆಯಲ್ಲಾ!" ಎಂದು ಅವಳ ಕೈ ಹಿಡಿದನು.

ಕಾಂಚನಲತೆ ನಾಚಿ ತಲೆ ತಗ್ಗಿಸಿದಳು. ಆಗ ಅಲ್ಲಿಗೆ ಸಾಮಂತ ಸೂರ್ಯಭೂಪತಿಯೂ, ಕರಡಿ ವಾಹನದ ಮೇಲೆ ಭಲ್ಲೂಕಪಾದ ಗುರುವೂ, ಉಗ್ರದಂಡನೂ ಬಂದು ಸೇರಿದರು.

ಸೂರ್ಯಭೂಪತಿ ಮಗಳನ್ನು ನೋಡಿ ಆನಂದ ಬಾಷ್ಪ ಸುರಿಸುತ್ತ, "ಅಮ್ಮಾ, ನಿನ್ನನ್ನು ತಿರುಗಿ ಜೀವದೊಂದಿಗೆ ನೋಡುವೆನೋ ಎಂದು ತುಂಬಾ ಹೆದರಿದ್ದೆ." ಎಂದು ಕಾಳೀವರ್ಮನನ್ನು ನೋಡಿ, "ಕಾಳೀವರ್ಮಾ! ನೀನು ಮಹಾ ವೀರ! ಸಂದೇಹವೇ ಇಲ್ಲ. ನಿನಗೆ ಸರಿಯಾದ ಜೋಡಿ ನನ್ನ ಔರಸ ಪುತ್ರಿಯೂ, ಜಿತಕೇತುರಾಜರ ದತ್ತಪುತ್ರಿಯೂ ಆದ ಇವಳೇ!" ಎಂದನು. ಆ ಮಾತನ್ನು ಕೇಳಿ ಜಿತಕೇತು

ರಾಜನು ನಗುತ್ತ, ತೀರಕ್ಕೆ ಬಂದ ಕಾಳೀ ವರ್ಮನ ಕೈಯನ್ನು ಹಿಡಿದುಕೊಂಡು, ಕಾಂಚನ ಲತೆಯ ಮುಂದೆ ನಿಲ್ಲಿಸಿ, "ನನ್ನ ದತ್ತಪುತ್ರಿಯಾದ ಕಾಂಚನಲತೆಯನ್ನು ವೀರ ಯುವಕನಾದ ಕಾಳೀ ವರ್ಮನೊಂದಿಗೆ ಪಾಣಿಗ್ರಹಣಮಾಡಿಸುತ್ತೇನೆ. ನನ್ನ ಅನಂತರ ಇವನೇ ಚಂದ್ರಶಿಲಾ ನಗರಕ್ಕೆ ರಾಜ!" ಎಂದು ಕಾಂಚನಲತೆಯ ಕೈಯನ್ನು ಕಾಳೀವರ್ಮನ ಕೈಯಲ್ಲಿಟ್ಟನು. ಎಲ್ಲರೂ ಹರ್ಷಧ್ವಾನಮಾಡು ತ್ತಿರಲು, ಕೊಳದಲ್ಲಿ ಸಾಯುವವನ ಆರ್ತನಾದವು ಕೇಳ ತೊಡಗಿತು. ನೀರು ಕದಲಿದ ಶಬ್ದ ಕೇಳಿ, ದೂರ ದಲ್ಲಿದ್ದ ದೊಡ್ಡದೊಂದು ಮೊಸಳೆ ಧಾವಿಸಿ ಬಂದು ತಾಂತ್ರಿಕ ಮಿಥ್ಯಾಮಿಶ್ರನನ್ನು ಹಿಡಿದಿತ್ತು. ಅದ ರೊಂದಿಗೆ ಮಿಥ್ಯಾಮಿಶ್ರನು ಗುದಮುರಿಗೆ ಹಾಕಿ ಕೊಂಡು ಆರ್ತನಾದ ಮಾಡುತ್ತಿದ್ದನು. ಅದನ್ನು ನೋಡಿ ಕರಡಿ ಕೆಂಗಣ್ಣ ಮಾಂತ್ರಿಕನು ಮಂತ್ರದಂಡ ವನ್ನು ಆಡಿಸುತ್ತ, "ಭಲ್ಲೂಕಪಾದ ಗುರುಗಳೇ! ಭಲ್ಲೂಕೇಶ್ವರೀ ದೇವಿಯ ಪೂಜಾರೀ ಸ್ಪರ್ಧೆ ತೀರಿ ಹೋಯಿತು. ಇನ್ನು ನೀವೇ ಪ್ರಧಾನ ಪೂಜಾರಿಗಳು. ನಿಮ್ಮ ಪ್ರಬಲ ವಿರೋಧಿ ಮೊಸಳೆಯ ಆಹಾರ ವಾದನು!" ಎಂದನು ಉತ್ಸಾಹದಿಂದ.

ಎಲ್ಲರೂ ನೋಡುತ್ತಿದ್ದಂತೆ ಮೊಸಳೆ ತಾಂತ್ರಿಕ ಮಿಥ್ಯಾಮಿಶ್ರನನ್ನು ಕೊಳದ ನೀರಿನೊಳಗೆ ಎಳೆದು ಕೊಂಡುಹೋಯಿತು. ಉಗ್ರದಂಡ ರಾಕ್ಷಸನು ಕೊಳದ ತೀರದಲ್ಲಿ ಅಚಲನಾಗಿ ಬಿದ್ದಿದ ತನ್ನ ಅಣ್ಣ ಕಾಲದಂಡ ರಾಕ್ಷಸನನ್ನು ಎತ್ತಿ ಕುಳ್ಳಿರಿಸಿ, "ಅಣ್ಣಾ, ಇಷ್ಟು ಕಾಲದಿಂದ ನಿನ್ನನ್ನು ಹಿಡಿದು ಹಿಂಸೆಪಡಿಸಿ ಪೀಡಿಸಿದ ಮಿಥ್ಯಾಮಿಶ್ರನು ಮೊಸಳೆಗೆ ಆಹುತಿ ಯಾದನು. ಏಳೇಳು!" ಎನ್ನುತ್ತ ಅವನ ಬೆನ್ನಿನ ಮೇಲೆ ಧುಮ ಧುಮನೆ ಗುದ್ದಿದನು.

ಕಾಲದಂಡನು ತಟಕ್ಕನೆ ಎದ್ದು ನಿಂತು ಮೈ ಮುರಿದು, ಎರಡು ಕೈಗಳಿಂದಲೂ ಗಟ್ಟಿಯಾಗಿ ತನ್ನ ಕುತ್ತಿಗೆಯನ್ನು ಹಿಡಿದುಕೊಂಡು ಕೊಳದ ನೀರಿ ನಲ್ಲಿ ಏಳುತ್ತಿರುವ ಗುಳ್ಳೆಗಳನ್ನು ನೋಡುತ್ತಾ, "ತಮ್ಮಾ, ಆ ತಾಂತ್ರಿಕನು ಸತ್ತನೇ? ಅವನು ನನ್ನ ಬಾಯಿಯೊಳಗೆ ತಿನ್ನಿಸಿದ ವಿಷಗಳಿಂದ ನಾಲಿಗೆ ಬಿದ್ದುಹೋಗಿ ಮೂಕನಾದೆ. ಅವನನ್ನು ನೋಡಿ ಹೆದರಿ ಅವನ ಸೇವಕನೂ ಆದೆ. ನನ್ನಂಥ ರಾಕ್ಷಸನ ತಲೆಗೇ ಹೊಡೆದು ವಿಷಕಾರಿಸಿ ಮೂರ್ಛೆ ಬೀಳಿಸಿದ ಆ ಧೀರ ಯುವಕ ಎಲ್ಲಿದ್ದಾನೇ?" ಎಂದು ಅತ್ತಿತ್ತ ನೋಡಿ, ಕಾಳೀವರ್ಮನಬಳಿಗೆ ನಡೆದು, "ನೀನಲ್ಲವೇ ಆ ಪುಣ್ಯವಂತ!" ಎನ್ನುತ್ತಾ ಅವನನ್ನೂ, ಕಾಂಚನಲತೆ ಯನ್ನೂ ಎತ್ತಿ ತನ್ನ ಹೆಗಲಲ್ಲಿ ಕುಳ್ಳಿರಿಸಿಕೊಂಡನು. ಎಲ್ಲರೂ ಮತ್ತೊಮ್ಮೆ ಹರ್ಷಧ್ವನಿಮಾಡಿದರು.

—(ಮುಗಿಯಿತು)

